ಕನ್ನಡ ಅಧ್ಯಯನ ಸಂಸ್ಥೆ

# ಸ್ತ್ರೀ ಮತ್ತು ಸಮಾಜ

ಡಾ. ಕೆ. ಎನ್. ವೆಂಕಟರಾಯಪ್ಪ





ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

# ಮುನ್ನುಡಿ

ಕನ್ನಡ ಭಾಷೆ ಸಾಹಿತ್ಯಗಳ ಸರ್ವತೋಮುಖವಾದ ಬೆಳವಣಿಗೆಯನ್ನು ಸಾಧಿಸುವ ದೃಷ್ಟಿಯಿಂದ 1966ರ ಕೊನೆಯಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಪ್ರಾರಂಭವಾಯಿತು. ಈಗ್ಗೆ ಹತ್ತುಹನ್ನೆರಡು ವರ್ಷಗಳಿಗೆ ಹಿಂದೆ ರಾಷ್ಟ್ರಕವಿ ಕುವೆಂಪು ಅವರ ಮಾರ್ಗದರ್ಶನ ದಲ್ಲಿ ರೂಪಗೊಂಡಿದ್ದ ಯೋಜನೆಗಳೆಲ್ಲ ಡಾ. ಶ್ರೀ ಮಾಲಿಯವರ ನೇತೃತ್ವದಲ್ಲಿ ಸಾಕಾರಗೊಳ್ಳತೊಡಗಿದುದಕ್ಕೆ ಕನ್ನಡ ಅಧ್ಯಯನ ಸಂಸ್ಥೆ ಸಾಕ್ಷಿಯಾಗಿದೆ. ಈಗ ಪ್ರೊಫೆಸರ್ ಜವರೇಗೌಡರು ನಮ್ಮ ವಿಶ್ವವಿದ್ಯಾನಿಲಯದ ಕುಲಪತಿಗಳಾಗಿರುವುದರಿಂದ ಈ ಸಂಸ್ಥೆಯ ಚಟುವಟಿಕೆಗಳು ತೀವ್ರತರವಾಗಿ ಬೆಳೆಯುವುದೆಂದು ನಿರೀಕ್ಷಿಸಬಹು ದಾಗಿದೆ. ಕನ್ನಡ, ಭಾಷಾವಿಜ್ಞಾನ ಹಾಗೂ ದಕ್ಷಿಣ ಭಾರತ ಅಧ್ಯಯನ ಸ್ನಾತ ಕೋತ್ತರ ಶಿಕ್ಷಣ ಮತ್ತು ಸಂಶೋಧನ ವಿಭಾಗಗಳು, ಸ್ನಾತಕೋತ್ತರ ಭಾಷಾಂತರ ಡಿಪ್ಲೊಮಾ ಶಿಕ್ಷಣ, ಕನ್ನಡೇತರರಿಗಾಗಿ ಕನ್ನಡ ಸರ್ಟಿಫಿಕೇಟ್ ಮತ್ತು ಡಿಪ್ಲೊಮಾ ಶಿಕ್ಷಣ – ಇವುಗಳ ಜೊತೆಗೆ ಇಂದು ಸಂಸ್ಥೆಯಲ್ಲಿ ಐದು ಪ್ರಮುಖ ವಿಭಾಗಗಳಿವೆ: (1) ಸಂಪಾದನ ವಿಭಾಗ, (2) ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗ, (3) ಜಾನಪದ ವಿಭಾಗ, (4) ಕನ್ನಡ ವಿಶ್ವಕೋಶ ವಿಭಾಗ ಮತ್ತು (5) ಹರಿದಾಸ ಸಾಹಿತ್ಯ ಸಂಪಾದನ ಮತ್ತು ಸಂಶೋಧನ ವಿಭಾಗ. ಸಂಸ್ಥೆಯ ಬಹುಮುಖವಾದ ಚಟುವಟಿಕೆಗಳ ಪ್ರತೀಕವಾಗಿವೆ ಈ ವಿಭಾಗಗಳು.

ಎಲ್ಲ ಹಂತಗಳಲ್ಲಿಯೂ ಕನ್ನಡವನ್ನು ಶಿಕ್ಷಣ ಮಾಧ್ಯಮವನ್ನಾಗಿ ಬಳಸ ಬೇಕೆಂಬ ನೀತಿಗನುಗುಣವಾಗಿ ಕೆಲವು ಸಂಸ್ಥೆಗಳಲ್ಲಿ ಸ್ನಾತಕಪೂರ್ವ ಮತ್ತು ಸ್ನಾತಕ ಹಂತಗಳಲ್ಲಿ ಕನ್ನಡ ಮಾಧ್ಯಮವನ್ನು ಒದಗಿಸಿರುವುದರ ಜೊತೆಗೆ, ಸ್ನಾತಕೋತ್ತರ ಹಂತದವರೆಗೆ ಯಾವ ಪರೀಕ್ಷೆಗೆ ಬೇಕಾದರೂ ಕನ್ನಡದಲ್ಲಿಯೇ ಉತ್ತರಿಸುವ ಸೌಲಭ್ಯ ವನ್ನೂ ವಿಶ್ವವಿದ್ಯಾನಿಲಯ ಒದಗಿಸಿದೆ. ವಿಜ್ಞಾನ ಮತ್ತು ಮಾನವಿಕಗಳಿಗೆ ಸಂಬಂಧಿಸಿದ ಪಠ್ಯಪುಸ್ತಕ, ಆಕರಗ್ರಂಥ ಮತ್ತು ಸಂದರ್ಭಗ್ರಂಥಗಳನ್ನು ಹೊರತರುವ ದೃಷ್ಟಿಯಿಂದ 1967–68 ರಲ್ಲಿಯೇ ಮೈಸೂರು ವಿಶ್ವವಿದ್ಯಾನಿಲಯ ಭಾಷಾಂತರ ಮತ್ತು ಪಠ್ಯಪುಸ್ತಕ ವಿಭಾಗವನ್ನು ಸ್ಥಾಪಿಸಿತು. ಇದಕ್ಕೂ ಮೊದಲು, ಸುಮಾರು ಒಂದು ದಶಕಕ್ಕೂ ಹೆಚ್ಚು ಕಾಲ 'ಪ್ರಸಾರಾಂಗ' ತನ್ನ ಇತರ ಕಾರ್ಯಗಳ ಜೊತೆಯಲ್ಲಿ ಈ ಕಾರ್ಯವನ್ನೂ ನಡೆಸಿಕೊಂಡು ಬಂದಿತ್ತು. 1969–70 ರಲ್ಲಿ ಕೇಂದ್ರ ಸರ್ಕಾರ ಪ್ರಾದೇಶಿಕ ಭಾಷೆಗಳ ಅಭಿವೃದ್ಧಿ ಯೋಜನೆಯನ್ನು ಜಾರಿಗೆ ಕೊಟ್ಟದ್ದರಿಂದ ಈ ಕೆಲಸಕ್ಕೆ ಹೆಚ್ಚಿನ ಪಾಲನೆ ದೊರೆಯಿತು. ಇದರಿಂದ ಮತ್ತಷ್ಟು ವ್ಯಾಪಕವಾಗಿ, ಸಮಗ್ರವಾಗಿ ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಸಾಧ್ಯವಾಯಿತು.

ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ವಿಭಾಗಗಳ ಮುಖ್ಯರು ಸಲಹೆ–ಸೂಚನೆ ಮತ್ತು ವಿಭಾಗ ಸಂಪಾದಕತ್ವದ ಮೂಲಕ ಬಹುಮೂಲ್ಯ ನೆರವು ನೀಡುತ್ತಿದ್ದಾರೆ. ವಿಶ್ವವಿದ್ಯಾನಿಲಯ ಕಾಲೇಜುಗಳ, ಸ್ನಾತಕೋತ್ತರ ವಿಭಾಗಗಳ, ಮಾನ್ಯತೆ ಪಡೆದಿರುವ ಕಾಲೇಜುಗಳ ಅಧ್ಯಾಪಕರು, ಪ್ರಸಿದ್ಧ ಲೇಖಕರು ಮತ್ತು ಭಾಷಾಂತರಕಾರರು ಉತ್ಸಾಹದಿಂದ ಯೋಜನೆಯಲ್ಲಿ ಭಾಗವಹಿಸುತ್ತಿದ್ದಾರೆ. ಸಾಕಷ್ಟು ಗ್ರಂಥಗಳು ಹೊರಬರುತ್ತಿವೆ. 'ವಿಜ್ಞಾನ ಲೇಖಕರ ಕಾರ್ಯಶಿಬಿರ'ದಂತಹ ತರಬೇತಿ ಕಾರ್ಯಕ್ರಮಗಳು, ಬಹುಮಾನ ಯೋಜನೆಯಂತಹ ಪ್ರೋತ್ಸಾಹದಾಯಕ ಕ್ರಮಗಳು ಉತ್ತಮ ಫಲ ನೀಡುತ್ತವೆಂಬುದರಲ್ಲಿ ಅನುಮಾನವಿಲ್ಲ. ರಾಜ್ಯದ ಇತರ ವಿಶ್ವವಿದ್ಯಾನಿಲಯಗಳೂ, ಈ ಕಾರ್ಯದಲ್ಲಿ ತೊಡಗಿರುವುದರಿಂದ ಮುಂದಿನ ಕೆಲವು ವರ್ಷಗಳಲ್ಲಿ ಪಠ್ಯಪುಸ್ತಕಗಳ ಅಭಾವದ ಪ್ರಶ್ನೆ ಏಳದಂತಾಗುತ್ತದೆಂದು ಭಾವಿಸಬಹುದಾಗಿದೆ.

ಸಮಾಜಶಾಸ್ತ್ರ ಪುಸ್ತಕಗಳ ಮಾಲೆಯಲ್ಲಿ ಡಾ. ಕೆ. ಎನ್. ವೆಂಕಟರಾಯಪ್ಪನವರ 'ಸ್ತ್ರೀ ಮತ್ತು ಸಮಾಜ' ಐದನೆಯ ಪುಸ್ತಕ; ಪಠ್ಯಪುಸ್ತಕ ಮಾಲೆಯಲ್ಲಿ ನಲವತ್ತೇಳನೆಯ ಪುಸ್ತಕ. ಏಕವಿಷಯಕ ಪ್ರಬಂಧದ ರೂಪದಲ್ಲಿರುವ (monograph) ಈ ಗ್ರಂಥ ಸಮಾಜಶಾಸ್ತ್ರ ವಿದ್ಯಾರ್ಥಿಗಳಿಗೂ, ಅಧ್ಯಾಪಕರಿಗೂ ತುಂಬ ಉಪಯುಕ್ತವಾಗುತ್ತದೆಂದು ನಂಬಿದ್ದೇವೆ. ಈ ಬಗೆಯ ವಿರಳ ಗ್ರಂಥಗಳ ಕ್ಷೇತ್ರಕ್ಕೆ ಪ್ರಕೃತ ಗ್ರಂಥ ಒಂದು ಉತ್ತಮ ಕೊಡುಗೆಯಾಗುತ್ತದೆಂದು ಭಾವಿಸಿದ್ದೇವೆ. ಈ ಉಪಕಾರಕ್ಕಾಗಿ ಅವರಿಗೆ ನಮ್ಮ ವಂದನೆಗಳು.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ಅರಿಕೆ

ಜೀವನದ ಎಲ್ಲ ಕ್ಷೇತ್ರಗಳಲ್ಲೂ 'ಸ್ತ್ರೀ' ಎಂದಿಗಿಂತ ಇಂದು ಮುನ್ನಡೆದಿದ್ದಾಳೆ. ವಿದ್ಯಾಭ್ಯಾಸ, ಕ್ರೀಡೆ, ವಿಜ್ಞಾನ, ಕಲೆ, ಸಾಹಿತ್ಯ, ರಾಜಕೀಯವೇ ಮುಂತಾದ ಯಾವುದೇ ಕ್ಷೇತ್ರದಲ್ಲಿಯಾದರೂ ಸ್ತ್ರೀಯ ಹೆಸರು ಕೇಳಬರದಿಲ್ಲ. ಸ್ತ್ರೀಯ ನಾನಾ ಮುಖಗಳನ್ನು ಈ ಪುಸ್ತಕದಲ್ಲಿ ಚಿತ್ರಿಸಲು ಪ್ರಯತ್ನಿಸಿದ್ದೇನೆ. ಸ್ತ್ರೀ-ಪುರುಷರಲ್ಲಿ ಯಾರು ಹೆಚ್ಚು ಯಾರು ಕಡಿಮೆ ಎಂದು ಹೇಳಲು ಪ್ರಚೋದಿಸುವ ಜೈವಿಕ, ಮಾನಸಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ವಿಷಯಗಳನ್ನು ಇಲ್ಲಿ ಸ್ಥೂಲವಾಗಿ ವಿಚಾರಿಸಲಾಗಿದೆ. ವಿಕಾಸದ ಹಂತದಲ್ಲಿ ಬಾಹ್ಯರೂಪಗಳ ಮೂಲಕ ಸ್ತ್ರೀ-ಪುರುಷರನ್ನು ವಿಂಗಡಿಸುವುದು ಇಲ್ಲಿಯವರೆಗೆ ಸಾಧ್ಯವಾಗಿಲ್ಲವಾದ್ದರಿಂದ ಯಾರು ಹೆಚ್ಚು ಯಾರು ಕಡಿಮೆ ಎಂದು ಹೇಳುವುದು ಕಷ್ಟ. ಮಾನಸಿಕ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲೂ ಹೆಚ್ಚುಕಡಿಮೆ ಹೀಗೆಯೆ ಇದೆ. ಈ ಮೇಲಿನ ವಿಷಯಗಳ ಆಧಾರದ ಮೇಲೆ ಇಂದಿನ ಸ್ತ್ರೀಯ ಸ್ಥಾನಮಾನಗಳನ್ನು ಮತ್ತು ಆಕೆ ಬದಲಾಗುತ್ತಿರುವ ಸಾಮಾಜಿಕ ಸ್ಥಿತ್ಯಾಂತರಗಳಿಗೆ ಹೇಗೆ ಹೊಂದಿಕೊಳ್ಳುತ್ತಿದ್ದಾಳೆಂಬುದನ್ನು ವಿವರವಾಗಿ ಚರ್ಚಿಸಲಾಗಿದೆ.

ಈ ಪುಸ್ತಕವನ್ನು ಬರೆಯಲು ವಿವಿಧ ಮೂಲಗಳಿಂದ ವಿಷಯಗಳನ್ನು ಸಂಗ್ರಹಿಸಿರುವುದರಿಂದ ಎಲ್ಲ ಮೂಲ ಲೇಖಕರಿಗೂ ನಾನು ಚಿರಋಣಿ. ಪ್ರಮುಖ ಆಧಾರ ಗ್ರಂಥಗಳ ಪಟ್ಟಿಯನ್ನು ಪುಸ್ತಕದ ಕೊನೆಯಲ್ಲಿ ಕೊಟ್ಟಿದ್ದೇನೆ.

ಅನೇಕ ವರುಷಗಳಿಂದಲೂ ವಿವಿಧ ವಿಷಯಗಳನ್ನು ವಿದ್ಯಾರ್ಥಿಗಳಿಗೆ ಬೋಧಿಸಲು ನಡೆಸಿದ ಸಂಶೋಧನೆಯ ಫಲ ಈ ಕೃತಿ. ಅದಕ್ಕಾಗಿ ನನ್ನ ವಿಶ್ವವಿದ್ಯಾಲಯಕ್ಕೂ ಮತ್ತು ಶಿಷ್ಯ ವೃಂದದವರಿಗೂ ನಾನು ಆಭಾರಿಯಾಗಿದ್ದೇನೆ.

ಕೊನೆಯದಾಗಿ ಹಸ್ತಪ್ರತಿಯನ್ನು ವಿವರವಾಗಿ ಓದಿ ಸೂಕ್ತ ಸಲಹೆಗಳನ್ನು ಸೂಚಿಸಿದ ಪ್ರೊಫೆಸರ್ ಸಿ. ವಿ. ಶ್ರೀನಿವಾಸಮೂರ್ತಿಯವರಿಗೂ, ವಿವಿಧ ಆಂಗ್ಲ ಪದಗಳಿಗೆ ಕನ್ನಡ ಪದಗಳನ್ನು ಸೂಚಿಸಿ ನೆರವಾದ ಸಮಾಜ ಶಾಸ್ತ್ರದ ಸಂಶೋಧನ ವಿದ್ಯಾರ್ಥಿ ಶ್ರೀ ಎಂ. ಆರ್. ಸತೀಶ್, ಎಂ.ಎ., ಅವರಿಗೂ, ಈ ಪುಸ್ತಕವನ್ನು ಅಚ್ಚುಹಾಕಿ ಪ್ರಕಟಿಸಲು ನೆರವಾದ ಕನ್ನಡ ಅಧ್ಯಯನ ಸಂಸ್ಥೆಯ ಡೈರೆಕ್ಟರ್ ಮತ್ತು ಅಧಿಕಾರ ವರ್ಗದವರಿಗೂ ನಾನು ಅಭಾರಿ.

—ಕೆ. ಎನ್. ವೆಂಕಟರಾಯಪ್ಪ

# ಪರಿವಿಡಿ

# ಅಧ್ಯಾಯ ೧

## ಪೀಠಿಕೆ

ಸ್ತ್ರೀಯ ಬಗ್ಗೆ ವಾಸ್ತವಿಕ ವಿಷಯಗಳನ್ನೊಳಗೊಂಡ ಹಾಗೂ ವಿಚಾರಪೂರ್ಣ ಗ್ರಂಥಗಳು ವಿರಳ. ಸಮಾಜದಲ್ಲಿ ಸ್ತ್ರೀಯ ಸ್ಥಾನವೇನೆಂಬುದನ್ನು ಯಾರೂ ಸರಿಯಾಗಿ ಅರ್ಥಮಾಡಿಕೊಂಡಿಲ್ಲ. ಸ್ತ್ರೀಯನ್ನು "ಅಬಲೆ" ಎಂದು ಪರಿಗಣಿಸಿರುವಲ್ಲಿ ಆಕೆ ಅನಾದಿ ಕಾಲದಿಂದಲೂ ಅನ್ಯಾಯದ ಹೊರೆಯನ್ನು ತಾಳ್ಮೆಯಿಂದ ಹೊರುತ್ತಾ ಬಂದಿರುವುದನ್ನು ನಾವು ಸ್ಪಷ್ಟವಾಗಿ ಕಾಣಬಹುದು. ಜೀವವಿಜ್ಞಾನದ ರೀತ್ಯ ಸ್ತ್ರೀ, ಪುರುಷನಿಗಿಂತಲೂ ಹೆಚ್ಚು ಕಾಲ ಬದುಕಲು ಸಾಧ್ಯವಾಗುವಂಥ ಶಾರೀರಕ ರಚನೆಯನ್ನು ಹೊಂದಿದ್ದು, ಮಾನವ ವಿಕಾಸ ನಕ್ಷೆಯಲ್ಲಿ ಪುರುಷನಿಗಿಂತಲೂ ಕೆಳದರ್ಜೆಯನ್ನು ಪಡೆದಿದ್ದಾಳೆಂಬುದು ಕೆಲವರ ವಾದವಾಗಿದೆ. ಈ ವಾದಕ್ಕೆ ವಿರೋಧವಾಗಿ ಸ್ತ್ರೀಯನ್ನು ಪುರುಷನೊಡನೆ ಹೋಲಿಸಿದಾಗ ಸ್ತ್ರೀಯಲ್ಲಿರುವ ರೋಮ ರಹಿತತೆ, ತನ್ನ ರೂಪು-ಲಾವಣ್ಯಗಳನ್ನು ದೀರ್ಘಕಾಲ ಉಳಸಿಕೊಳ್ಳುವಿಕೆ, ಸುಲಭ ಉಚ್ಚಾರಣೆ, ಮಾತುಗಾರಿಕೆ, ಜಾಣ್ಮೆ, ಕೈಚಳಕ, ತಾಳ್ಮೆ, ಕರುಣೆ, ಮೊದಲಾದ ಗುಣಗಳು ಆಕೆಗೆ ವಿಕಾಸವಾದಕ್ಕನುಗುಣವಾಗಿ ಇರುವ ಸ್ಥಾನಕ್ಕಿಂತ ಇನ್ನೂ ಹೆಚ್ಚಿನ ಸ್ಥಾನವಿರಬೇಕೆಂಬುದನ್ನು ಸೂಚಿಸುತ್ತವೆ. ವಿಕಾಸದ ಶ್ರೇಣಿಯಲ್ಲಿ ಸ್ತ್ರೀ–ಪುರುಷರ ಸ್ಥಾನಮಾನಗಳ ಬಗ್ಗೆ ಇರುವ ಅಸಮಾನತೆಯನ್ನು ನೋಡಿದಾಗ, ಮಾನವಶಾಸ್ತ್ರಜ್ಞರು ಸ್ತ್ರೀಯ ಸ್ಥಾನವನ್ನು ಖಚಿತವಾಗಿ ನಿಷ್ಕರ್ಷಿಸಿಲ್ಲವೆಂಬ ಶಂಕೆ ಯುಂಟಾಗುತ್ತದೆ.

ಸ್ತ್ರೀ-ಪುರುಷರ ಬಗ್ಗೆ ಸಾಮಾಜಿಕ, ಸಾಂಸ್ಕೃತಿಕ ಮತ್ತು ಮಾನಸಿಕ ವಲಯ ಗಳಲ್ಲಿ ನಡೆದಿರುವ ಪರಿಶೋಧನೆಗಳು ಸ್ತ್ರೀಯ ವ್ಯಕ್ತಿತ್ವದತ್ತ ಗಮನ ಹರಿಸಿ ಸಮಾಜ ದಲ್ಲಿ ಆಕೆಯ ಸ್ಥಾನವನ್ನು ನಿಶ್ಚಯಿಸಿಲ್ಲ. ಪುರುಷನ ಹಿರಿಮೆ, ಅವನು ಸ್ತ್ರೀಗಿಂತ ಬುದ್ಧಿವಂತ ಎಂಬ ಸೋಗನ್ನು ಖಂಡಿಸಲು ಸಾಕಷ್ಟು ಆಧಾರಗಳಿವೆ. ಸ್ತ್ರೀಪುರುಷ ವರ್ಗಗಳೆರಡರಲ್ಲೂ "ದ್ವಿಲಿಂಗತ್ವ" ಅಥವಾ "ದ್ವೈಲೈಂಗಿಕ ಪ್ರವೃತ್ತಿ" ನಿಗೂಢ ವಾಗಿದೆ ಎಂಬ ವಿಷಯವನ್ನು ಮನೋವಿಜ್ಞಾನಿಗಳು ಒಪ್ಪಿಕೊಂಡ ಕೆಲವೇ ವರುಷ ಗಳಲ್ಲಿ ಮಾನವನ ವರ್ತನೆ ಮತ್ತು ಸ್ವಭಾವಗಳಲ್ಲಿನ ಅನೇಕ ರಹಸ್ಯಗಳು ಹೊರ ಬಂದಿರುವುದಲ್ಲದೆ, ಪ್ರತಿಯೊಬ್ಬರಲ್ಲಿಯೂ ಸ್ಥಿರವಾಗಿ ಅಡಗಿರುವ ಸ್ತ್ರೀ–ಪುರುಷ ಪ್ರವೃತ್ತಿಗಳನ್ನು ಅರಿತುಕೊಳ್ಳಲು ಅವಕಾಶವಾಗಿದೆ. "ದ್ವೈಲೈಂಗಿಕ" ಪ್ರವೃತ್ತಿಯ

ಸಿದ್ಧಾಂತವು ಹಲವಾರು ಶತಮಾನಗಳಿಂದ ಮಾನಸಿಕ ವಿಷಯಗಳ (Psyche) ಬಗ್ಗೆ ನಮ್ಮಲ್ಲಿರುವ ತಪ್ಪು ತಿಳುವಳಿಕೆಗಳನ್ನು ಬಗೆಹರಿಸಬಹುದೆಂದು ನಿರೀಕ್ಷಿಸ ಬಹುದಾಗಿದೆ.

ಸುಸಂಸ್ಕೃತ ಪರಿಸರದಲ್ಲಿ ಬೆಳೆದುಬಂದಿರುವ ನಮ್ಮ ಮನಸ್ಸು, ಆಧುನಿಕ ಮನೋವಿಜ್ಞಾನವು ಲೈಂಗಿಕವಾಗಿ ಮಾನವ ಪ್ರಕೃತಿಯ ಬಗ್ಗೆ ತೋರಿರುವ ಹೊಸ ವಿಷಯಗಳನ್ನು ನಿರಾಕರಿಸುವುದು ಸ್ವಾಭಾವಿಕವೇ ಆಗಿದೆ. ಕಳೆದ ಇಪ್ಪತ್ತೈದು–ಮೂವತ್ತು ಶತಮಾನಗಳ ಸಾಮಾಜಿಕ ಜೀವನ ಗಂಡು–ಹೆಣ್ಣುಗಳಲ್ಲಿರುವ ಬೇಧಗಳ ಅಂತರವನ್ನು ಮತ್ತಷ್ಟು ಹೆಚ್ಚಿಸುವುದರ ಜೊತೆಗೆ ಗಂಡು-ಹೆಣ್ಣುಗಳ ಪರಸ್ಪರ ಗುಣ ವಿಶೇಷಗಳನ್ನು ಏಕಾಗ್ರತೆಗೆ ತಿರುಗಿಸಿದೆ. ಗಂಡಸಿನ "ಪುರುಷತ್ವ" ಮತ್ತು ಹೆಣ್ಣಿನ "ಸ್ತ್ರೀತ್ವ"ಗಳು ಮಾನವ ನಿರ್ಮಿತವಾದುವಲ್ಲದೆ ಸ್ವಾಭಾವಿಕವಾದುವಲ್ಲ. ಈ ಗುಣ ಗಳು ಜನಜೀವನದ ಮೇಲೆ ಪ್ರಭಾವವುಳ್ಳ ಗಾದೆಗಳು, ಜಾನಪದ ಕಥೆಗಳು, ಪದ್ಧತಿ ಗಳು ಹಾಗೂ ಸಂಪ್ರದಾಯಗಳ ಮೂಲಕ ಪ್ರಕಟವಾಗುವುದಲ್ಲದೆ, ಮಾನವನ ಸ್ಮೃತಿಪಟಲದ ಮೇಲೆ ಸ್ಥಿರವಾಗಿ ನಿಂತು ದೀರ್ಘ ಪರಿಣಾಮಗಳನ್ನುಂಟುಮಾಡಿವೆ. ಮಾನವ ಪ್ರಕೃತಿಯ ಅಧ್ಯಯನವನ್ನು ಮಾನವ ಪ್ರಕೃತಿಗೆ ಸಂಬಂಧಪಟ್ಟ ಸ್ತ್ರೀ ಅಥವಾ ಪುರುಷನನ್ನು ಬಿಟ್ಟು ಮಾಡಲಾಗುವುದಿಲ್ಲ. ಸ್ತ್ರೀ ಮತ್ತು ಪುರುಷರನ್ನು ಅವರ ಸ್ವಭಾವಗಳ ಮೇಲೆ ವರ್ಗೀಕರಿಸುವ ಅನೂಚಾನ ಪದ್ಧತಿಗಳನ್ನು ಶಾಸ್ತ್ರೀಯ ಚಿಂತನೆಗೊಳಗಾದ ಮನಸ್ಸು ಎಂದೂ ಒಪ್ಪಿಕೊಳ್ಳಲಾರದು. ಸ್ತ್ರೀಯ ವಿನಯ ಸ್ವಭಾವಸಿದ್ಧವಾದುದೇ ಅಥವ ಅದು ಆಕೆಯ ಮೇಲೆ ಸಮಾಜ ಹೊರಿಸಿರುವ ಲಕ್ಷಣವೇ ? ಸ್ತ್ರೀಯರು ಸ್ವತಃ ವಿನಯವನ್ನು ಸದ್ಗುಣವೆಂದು ಎಣಿಸುವರೆ ? ಈ ಪ್ರಶ್ನೆ ಗಳಿಗೆ ಸಾಹಿತ್ಯದಿಂದ ಉತ್ತರವನ್ನು ಬಯಸಿದರೆ ಅದು ಸಂಪ್ರದಾಯದ ಚೌಕಟ್ಟಿನಲ್ಲೆ ಇರುವುದು ಸಹಜ. ಒಂದು ಗುಂಪಿನ ವಿಜ್ಞಾನಿಗಳು ವಿನಯವನ್ನು ಸ್ತ್ರೀಯರ ಮೇಲೆ ಬಲಾತ್ಕಾರವಾಗಿ ಹೇರಬೇಕೆಂದು ವಾದಿಸಿದರೆ, ಮತ್ತೊಂದು ಗುಂಪಿನ ವಿಜ್ಞಾನಿಗಳು ವಿನಯವು ಪ್ರಕೃತಿದತ್ತವಾದ "ಸ್ತ್ರೀಗುಣ" ಎಂದು ಹೇಳುತ್ತಾರೆ. ಸಂಪ್ರದಾಯದಿಂದ ಪ್ರಭಾವಿತವಾದ ಮನಸ್ಸನ್ನು ವೈಜ್ಞಾನಿಕ ಚಿಂತನೆಗೆ ಒಳಪಡಿಸಿದ ಹೊರತು ಈ ಸಮಸ್ಯೆಯನ್ನು ಬಗೆಹರಿಸಲು ಸಾಧ್ಯವಾಗುವುದಿಲ್ಲ. ನಮ್ಮ ಮನಸ್ಸನ್ನು ಮುಚ್ಚಿರುವ ಸಂಪ್ರದಾಯದ ಮುಸುಕನ್ನು ಕಿತ್ತೆಸೆಯುವುದಕ್ಕಿಂತ ಆತ್ಮವಿಶ್ಲೇಷಣೆ ಉತ್ತಮ.

'ವಿನಯ' ಅಥವಾ 'ಅವಿನಯ'ದ ಪ್ರಶ್ನೆಯನ್ನು ಬಗೆಹರಿಸುವುದು ಸುಲಭ. ವ್ಯಕ್ತಿಯ ಮೇಲೆ ಮಾನಸಿಕವಾಗಿ ಇಲ್ಲವೆ ಶಾರೀರಕವಾಗಿ ವಿನಯ ಅಥವಾ ಅವಿನಯವು ಏನಾದರೂ ಪ್ರಭಾವ ಬೀರುವುದೆ ? ಇಲ್ಲವೆ, ಲೈಂಗಿಕವಾಗಿ ವಿನಯಕ್ಕೆ ಅಥವಾ ಲಜ್ಜೆಗೆ ಏನಾದರೂ ನಿರ್ದಿಷ್ಟ ಸ್ಥಾನವಿದೆಯೇ ? ಅಥವಾ ಅದು ಮಾನವನಲ್ಲಿ ಸಂಯೋಜಿತ ವಾದ ಇಲ್ಲವೆ ಅವನ ವೈಯಕ್ತಿಕ ನಡವಳಿಕೆಗೆ ನೆರವು ನೀಡುವುದೇ ? ಇವೇ ಮುಂತಾದ

ವಿಷಯಗಳ ಅಧ್ಯಯನದಿಂದ ನಾವು ಈ ವಿಷಯವನ್ನು ಬಗೆಹರಿಸಿಕೊಳ್ಳಬಹುದು. ಅಂಗಾಂಗಗಳು, ಅವುಗಳ ರಚನೆ, ಅವುಗಳ ಕ್ರಿಯೆ; ಸಮಾಜದಲ್ಲಿ ಜೀವಿಯ ಪಾತ್ರ ಅಲ್ಲದೆ ವ್ಯಕ್ತಿಯ ಜೀವನದಲ್ಲಿನ ಸಂದಿಗ್ಧತೆ, ಪ್ರಾಯಕ್ಕೆ ಬಂದಾಗ ವ್ಯಕ್ತಿಯ ನಡವಳಿಕೆ; ಬಾಹ್ಯ ಪ್ರಪಂಚ ಮತ್ತು ಸಾಮಾಜಿಕ ಪರಿಸರ ವ್ಯಕ್ತಿಯ ಮೇಲೆ ಉಂಟು ಮಾಡುವ ಪ್ರಭಾವಗಳು—ಇವುಗಳೆಲ್ಲವೂ ಸ್ತ್ರೀ ಮತ್ತು ಪುರುಷನ ಪ್ರಕೃತಿಯನ್ನು ರೂಪಿಸುತ್ತವೆ.

ಈ ವಿಷಯಗಳ ಬಗ್ಗೆ ಚಿಂತನೆ ಮತ್ತು ಅವುಗಳ ಆಕರ್ಷಣೆ ಈ ಪುಸ್ತಕವನ್ನು ಬರೆಯಲು ನನ್ನನ್ನು ಪ್ರೇರೇಪಿಸಿದುವೆಂದರೆ ಅತಿಶಯೋಕ್ತಿಯೇನಲ್ಲ. ಸ್ತ್ರೀಯ ಸ್ವರೂಪಗಳು, ಸ್ತ್ರೀಯ ಮನಸ್ಸು, ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನಗಳು, ಸ್ತ್ರೀಯ ಸಾರ್ವಜನಿಕ ಚಟುವಟಿಕೆಗಳು, ಬದಲಾಗುತ್ತಿರುವ ಸಮಾಜದಲ್ಲಿ ಸ್ತ್ರೀ, ಇವೇ ಮುಂತಾದ ವಿಷಯಗಳು ಕೂಡಿರುವಂತೆ ಈ ಗ್ರಂಥವನ್ನು ರಚಿಸಿದ್ದೇನೆ. ಗ್ರಂಥ ರಚನೆಯಲ್ಲಿ ಸಂಗ್ರಹಿಸಿದ ವಿಷಯಗಳಲ್ಲಿ ಹೆಚ್ಚು ಭಾಗವನ್ನು ಕಲ್ಪಿತ ಅಭಿಪ್ರಾಯಗಳೆಂದು ಕೈಬಿಡಬೇಕಾಯಿತು. ಸ್ತ್ರೀ ಬಗ್ಗೆ ಪಕ್ಷಪಾತವಿಲ್ಲದೆ ರಚಿಸಿರುವ ಪುಸ್ತಕಗಳು ಅಪರೂಪವೇ ಸರಿ.

ಸಮಾಜದಲ್ಲಿ ಸ್ತ್ರೀಗಿರುವ ಗೌಣಸ್ಥಾನಮಾನಗಳಿಗೆ ಹಲವಾರು ಕಾರಣವಾಗಿವೆ. ಅನಾದಿ ಕಾಲದಿಂದಲೂ ಸ್ತ್ರೀ ಆಗಿಂದಾಗ್ಗೆ ತನ್ನ ಹಕ್ಕುಬಾಧ್ಯತೆಗಳಿಗೆ ಸೆಣಸಾಡುತ್ತಲೇ ಬಂದು, ತನ್ನ ಶಕ್ತಿಸಾಮರ್ಥ್ಯಗಳನ್ನು ಮಿತಿಗೊಳಿಸಿರುವ ಪುರುಷನಿಗೆ ಗುಲಾಮಳಾಗುತ್ತಾ ಬಂದಿದ್ದಾಳೆ. ಎಂದು ಸಮಾಜ ಸ್ತ್ರೀಯನ್ನು ಗೌರವಿಸಲು ಕಲಿಯುವುದೋ ಅಂದು ಮಾನವಕುಲ ಸುಖ ಮತ್ತು ನೆಮ್ಮದಿಯಿಂದ ಬಾಳುವುದು. ಸದಾಚಾರಸಂಪನ್ನರೆಲ್ಲರೂ ಸಂಪ್ರದಾಯಗಳಿಗೆ ಕಟ್ಟುಬಿದ್ದಿರುವುದರಿಂದ ಅವರು ಸಮಾಜ ಸುಧಾರಕರಾಗಲು ಸಾಧ್ಯವಿಲ್ಲವೆಂಬ ವಾದವೊಂದಿದೆ; ಆದರೆ, ಪ್ರಗತಿಯ ಪಥದಲ್ಲಿ ಸಾಗುತ್ತಿರುವ ಆಧುನಿಕ ಸಮಾಜದ ಎಲ್ಲ ಕಾರ್ಯಕ್ಷೇತ್ರಗಳಲ್ಲಿಯೂ ಕಾಣಿಸಿಕೊಳ್ಳುತ್ತಿರುವ ಸ್ತ್ರೀಯ ಪಾತ್ರವನ್ನರಿತು, ಆಕೆಗೆ ಸಲ್ಲಬೇಕಾದ ಸ್ಥಾನಮಾನಗಳನ್ನು ದೊರಕಿಸಿಕೊಟ್ಟು ಆಕೆಯನ್ನು ಗೌರವಿಸುವುದು ನಾಗರಿಕರ ಹೊಣೆಯಾಗಿದೆ.

## ಅಧ್ಯಾಯ ೨

# ಸ್ತ್ರೀಯ ಅಂಗರಚನೆ

ಸಮಾಜದಲ್ಲಿ ಸ್ತ್ರೀಯ ಸ್ಥಾನಮಾನಗಳ ಬಗ್ಗೆ ವಿಚಾರಮಾಡುವ ಮೊದಲು ಆಕೆಯ ದೈಹಿಕ ಲಕ್ಷಣಗಳೇ ಮುಂತಾದವುಗಳ ಬಗ್ಗೆ ಯೋಚನೆಮಾಡುವುದು ಒಳಿತು. ಸ್ತ್ರೀಯ ದೇಹ ಮತ್ತು ಪ್ರಕೃತಿ, ಪುರುಷನ ದೇಹರಚನೆ ಮತ್ತು ಪ್ರಕೃತಿಗಳಿಗಿಂತಲೂ ಭಿನ್ನವಾದುವು. ಜೀವವಿಕಾಸದಲ್ಲಿ ಮಾನವಕುಲದ ಬೆಳವಣಿಗೆಯನ್ನು ಅಧ್ಯಯನ ಮಾಡಿದರೆ ಈ ಎರಡು ವರ್ಗಗಳಲ್ಲಿ ಕಾಣುವ ಪ್ರಮುಖ ವ್ಯತ್ಯಾಸಗಳಿಗೆ ಉತ್ತರ ಸಿಗಬಹುದು.

ಪ್ರಾಣಿವರ್ಗದ ಮೇಲೆ ನಮ್ಮ ದೃಷ್ಟಿ ಹರಿಸಿದಾಗ ಹೆಚ್ಚಿನ ತಾರತಮ್ಯ ಪುರುಷನಲ್ಲಿಯೇ ಇದೆ ಎಂಬುದು ಗೋಚರವಾಗುತ್ತದೆ. ಕೆಲವು ಬಗೆಯ ಜೇಡರ ಹುಳುಗಳಲ್ಲಿ ಹೆಣ್ಣು ಜೇಡವು ಗಂಡು ಜೇಡಕ್ಕಿಂತ ಮೂರು ಪಟ್ಟು ಆಕಾರ ಮತ್ತು ಶಕ್ತಿಯಲ್ಲಿ ಹಿರಿಯದಾಗಿರುತ್ತದೆ. ಅದು ವರ್ಷದಲ್ಲಿ ಎರಡು ಸಾರಿ ಮಾತ್ರ ನಿಶ್ಯಕ್ತವಾಗಿರುತ್ತದೆ. ಉಳಿದ ದಿನಗಳಲ್ಲಿ ಗಂಡಿನ ಮೇಲೆ ತನ್ನ ಸ್ವಾಮ್ಯವನ್ನು ಉಳಿಸಿಕೊಂಡಿರುತ್ತದೆ. ನಿಶ್ಯಕ್ತತೆಯಿಂದ ಚೇತರಿಸಿಕೊಂಡ ಹೆಣ್ಣು ಜೇಡು ಗಂಡು ಜೇಡಿನ ಮೇಲೆ ಎಗರಿ ತನ್ನ ಹಲ್ಲುಗಳಿಂದ ಅದರ ರಕ್ತವನ್ನೆಲ್ಲಾ ಹೀರಿ ಅದನ್ನು ತನ್ನ ಅಧೀನಮಾಡಿಕೊಂಡು, ತನಗಾಗಿ ಬಲೆಯನ್ನು ರಿಪೇರಿಮಾಡಲು ಮತ್ತು ಹುಳುಗಳನ್ನು ಹಿಡಿದು ತರಲು ಉಪಯೋಗಿಸಿಕೊಳ್ಳುತ್ತದೆ. ಹೆಣ್ಣು ಜೇಡು ಮೂಲೆಯಲ್ಲಿ ಕುಳಿತು ಮೊಟ್ಟೆಯಿಡುವಾಗ ಗಂಡು ಎಲ್ಲಾ ಕೆಲಸಗಳನ್ನೂ ಮಾಡುತ್ತದೆ.

ಇನ್ನು ಹಕ್ಕಿಗಳಲ್ಲಿ, ಅದರಲ್ಲೂ ವಿಶೇಷವಾಗಿ ಹದ್ದುಗಳಲ್ಲಿ, ಹೆಣ್ಣಿಗೆ ಶಕ್ತಿ ಇಲ್ಲದಿದ್ದರೂ ನೋಡಲು ಆಕೃತಿಯಲ್ಲಿ ದೊಡ್ಡದಾಗಿರುತ್ತದೆ. ಹಲವು ಜಾತಿಯ ಕೋಳಿಗಳಲ್ಲೂ ಕೂಡ ಹೇಂಟೆ ಹುಂಜಕ್ಕಿಂತ ಹೆಚ್ಚು ಗಾತ್ರವಾಗಿರುತ್ತದೆ. ಹುಂಜವು ಹೇಂಟೆ ಮತ್ತು ಕೋಳಿ ಮರಿಗಳನ್ನು ಒಟ್ಟುಗೂಡಿಸಿ ವಿವಿಧ ಸ್ಥಳಗಳಿಗೆ ಸಾಗಿಸುತ್ತದೆ. ತನ್ನ ಆಶ್ರಿತ ಕೋಳಿಗಳು ಆಹಾರ ಮುಟ್ಟುವವರೆವಿಗೆ ಹುಂಜ ಆಹಾರವನ್ನು ತೆಗೆದುಕೊಳ್ಳುವುದಿಲ್ಲ. ಹುಂಜಗಳು ಹೇಂಟೆಗಿಂತ ಆಕೃತಿಯಲ್ಲಿ ಭವ್ಯವಾಗಿರುತ್ತವೆ.

ಕುರಿ ಮತ್ತು ಆಡುಗಳಲ್ಲಿ ಗಂಡು ಹೆಣ್ಣಿಗಿಂತ ಆಕೃತಿಯಲ್ಲಿ ದೊಡ್ಡದಾಗಿರುತ್ತದೆ. ಜಾನುವಾರಗಳಲ್ಲಿ ಗೂಳಿಗಳು ಹಸುಗಳಿಗಿಂತ ಗಾತ್ರ ಮತ್ತು ಶಕ್ತಿಯಲ್ಲಿ ಬಲಯುತವಾಗಿರುವುದಲ್ಲದೆ, ತಮ್ಮ ಮಂದೆಯನ್ನು, ಅದರಲ್ಲೂ ಹಸುಗಳನ್ನು ಹೊರ ಶತ್ರುಗಳಿಂದ ರಕ್ಷಿಸುತ್ತವೆ.

ಮಾನವರಲ್ಲಿ ಸ್ತ್ರೀಯು ದೇಹ ರಚನೆಯಲ್ಲಿ ಗಂಡಿಗಿಂತ ಭಿನ್ನವಾಗಿರುತ್ತಾಳಲ್ಲದೆ, ಎತ್ತರದಲ್ಲಿ ಅವನಿಗಿಂತ ಕುಳ್ಳಗಿರುತ್ತಾಳೆ. ಮಾನವಶಾಸ್ತ್ರಜ್ಞರ ಪ್ರಕಾರ ಯೂರೋಪಿನ ಗಂಡಸರು ಸರಾಸರಿ 5 ಅಡಿ 7 ಅಂಗುಲ ಎತ್ತರವೂ, ಹೆಂಗಸರು ಸರಾಸರಿ 5 ಅಡಿ 2 ಅಂಗುಲ ಎತ್ತರವೂ ಇರುತ್ತಾರೆ.[1] ಸ್ಕಾಂಡಿನೇವಿಯ, ಜರ್ಮನಿ ಮತ್ತು ಉತ್ತರ ಫ್ರಾನ್ಸ್‌ಗಳಲ್ಲಿ ಗಂಡಸರು ಹೆಂಗಸರಿಗಿಂತ ಸರಿ ಸುಮಾರು 5ರಿಂದ 4.7 ಇಂಚುಗಳಷ್ಟು ಹೆಚ್ಚು ಎತ್ತರವಾಗಿರುತ್ತಾರೆ. ಶಿಶುಗಳಲ್ಲಿಯೂ ಕೂಡ ನಾವು ವ್ಯತ್ಯಾಸಗಳನ್ನು ಕಾಣಬಹುದು. ಗಂಡು ಮಗು ಹೆಣ್ಣು ಮಗುವಿಗಿಂತ ಎತ್ತರವಾಗಿ ಬೆಳೆಯುತ್ತದೆ. ತೂಕದಲ್ಲಿಯೂ ಕೂಡ ಹೆಣ್ಣು, ಗಂಡಿಗಿಂತ ಭಿನ್ನವಾಗಿರುತ್ತಾಳೆ. ಉತ್ತರ ಯೂರೋಪಿನ ಪುರುಷರ ತೂಕ 143ರಿಂದ 154 ಪೌಂಡುಗಳಾದರೆ ಸ್ತ್ರೀಯರ ತೂಕ 121ರಿಂದ 132 ಪೌಂಡುಗಳಿರುತ್ತವೆ. ತೂಕ ಮತ್ತು ಎತ್ತರಗಳಲ್ಲಿ ಗಂಡಸರಿಗಿಂತಲೂ ಹೆಂಗಸರಲ್ಲಿ ಅಂತರವಿರುವುದನ್ನು ನಾವು ಕಾಣಬಹುದು. ಪುರುಷರಿಗಿಂತ ಸ್ತ್ರೀಯರಿಗೆ ಕೂದಲು ಕಡಿಮೆ ಇರುತ್ತದೆ. ಹೆಣ್ಣಿನ ಚರ್ಮ ರಚನೆಯಲ್ಲಿ ಸೂಕ್ಷ್ಮತೆ, ಕೋಮಲತೆ ಹಾಗೂ ಚೆಲುವನ್ನು ಕಾಣಬಹುದು. ಹೆಣ್ಣು ತನ್ನ ಶರೀರದ ಕೊಬ್ಬಿನ ಪದರದಿಂದ ಶಾಖವನ್ನು ತುಂಬಿಕೊಳ್ಳಬಲ್ಲಳು.

ಸಾಮಾನ್ಯವಾಗಿ, ಸ್ತ್ರೀಯರ ತಲೆ ಸಣ್ಣಗಿರುತ್ತದೆ. ತಲೆ ಬುರುಡೆಯ ಸ್ನಾಯುಗಳು ಗಂಡಸಿಗಿರುವಂತೆ ಬಲವಾಗಿರುವುದಿಲ್ಲ. ಹೆಂಗಸಿನ ಬುರುಡೆ, ರಚನೆಯಲ್ಲಿ ದುರ್ಬಲವಾಗಿರುತ್ತದಲ್ಲದೆ ಅದರ ತೂಕವು ಕಡಿಮೆ. ಮುಖವು ಗಂಡಸಿನ ಮುಖಕ್ಕಿಂತ ಚಿಕ್ಕದಾಗಿರುತ್ತದೆ. ಹೆಣ್ಣಿನ ತಲೆ ಬುರುಡೆಯನ್ನು ಆಕೆಯ ದೇಹಕ್ಕೆ ಹೋಲಿಸಿದಾಗ, ಆಕೆಯ ದೇಹದ ತೂಕಕ್ಕೆ ಸಾಪೇಕ್ಷವಾಗಿ ಆಕೆಯ ತಲೆ ಬುರುಡೆಯ ತೂಕ ಹೆಚ್ಚಿರುತ್ತದೆ. ಎಲ್ಲಾ ಜನಾಂಗಗಳಲ್ಲಿಯೂ ಬುರುಡೆಯ ಗಾತ್ರ ಮತ್ತು ಮಿದುಳಿನ ಧಾರಣ ಶಕ್ತಿ ಪುರುಷರಿಗಿಂತ ಸ್ತ್ರೀಯರಲ್ಲಿ ಕಡಿಮೆ. ಬವೇರಿಯದ ಮಾನವಶಾಸ್ತ್ರಜ್ಞ ರಾಂಕೆಯವರು ತಲೆ ಬುರುಡೆಯ ಧಾರಣಶಕ್ತಿಯ ಬಗ್ಗೆ ನಡೆಸಿದ ಸಂಶೋಧನೆಗಳಿಂದ ವ್ಯಕ್ತಪಟ್ಟ ಹಲವು ಅಂಶಗಳನ್ನು ಈ ಕೆಳಗಿನ ತಃಖ್ತೆಯಲ್ಲಿ ಕಾಣಬಹುದು.[2]

| | ಸಿ. ಸಿ. ಎಮ್. ಪುರುಷರು : | ಸಿ. ಸಿ. ಎಮ್. ಸ್ತ್ರೀಯರು : |
|---|---|---|
| ಶಿಲಾಯುಗದ ಆದಿವಾಸಿಗಳು : ಡೆನ್ಮಾರ್ಕ್, ಜರ್ಮನಿ | 1600 | 1400 |
| ಇಂದಿನ ರೈತ ಡೇನಿಷ್ ಜನಾಂಗ | 1500 | 1330 |
| ಆಧುನಿಕ ಬವೇರಿಯ ದೇಶದವರು (ಮ್ಯೂನಿಚ್) | 1523 | 1361 |
| ಆಫ್ರಿಕಾದ ನೀಗ್ರೊಗಳು | 1405 | 1250 |
| ಗೋಚ್ರಸ್ (ದ. ಅಮೇರಿಕ) | 1390 | 1087 |
| ವಡ್ಡರು (ಸಿಲೋನ್) | 1336 | 1201 |

ವಿವಿಧ ಜನಾಂಗಗಳ ಮೆದುಳಿನ ತೂಕದಲ್ಲಿಯೂ ವ್ಯತ್ಯಾಸವಿರಬಹುದೆಂದು ನಂಬಲಾಗಿದೆ. ವಿವಿಧ ದೇಶಗಳಲ್ಲಿನ ಸ್ತ್ರೀ–ಪುರುಷರ ಮೆದುಳಿನ ತೂಕಗಳು ಈ ಕೆಳಗೆ ಕಂಡಂತೆ ಇವೆ: ಇಂಗ್ಲೀಷ್ ಜನರಲ್ಲಿ ಪುರುಷನ ಮೆದುಳಿನ ತೂಕ 1325 ಗ್ರಾಂಗಳಾದರೆ, ಸ್ತ್ರೀಯ ಮೆದುಳಿನ ತೂಕ 1183 ಗ್ರಾಂ. ಸ್ಕಾಟ್ ಜನರಲ್ಲಿ ಪುರುಷನ ಮೆದುಳಿನ ತೂಕ 1424 ಗ್ರಾಂಗಳಾದರೆ, ಸ್ತ್ರೀಯ ಮೆದುಳಿನ ತೂಕ 1262 ಗ್ರಾಂ. ಫ್ರೆಂಚ್ ಜನರಲ್ಲಿ ಪುರುಷನ ಮೆದುಳಿನ ತೂಕ 1358 ಗ್ರಾಂ ಗಳಷ್ಟಾದರೆ, ಸ್ತ್ರೀಯ ಮೆದುಳಿನ ತೂಕ 1256 ಗ್ರಾಂ. ಡಚ್ ಪುರುಷನ ಮೆದುಳಿನ ತೂಕ 1355 ಗ್ರಾಂಗಳಾದರೆ, ಸ್ತ್ರೀಯ ಮೆದುಳಿನ ತೂಕ 1180.2 ಗ್ರಾಂ. ಸ್ವಿಸ್ ಪುರುಷನ ಮೆದುಳಿನ ತೂಕ 1350 ಗ್ರಾಂಗಳಾದರೆ, ಸ್ತ್ರೀಯ ಮೆದುಳಿನ ತೂಕ 1250 ಗ್ರಾಂ. ಸ್ಯಾಕ್ಸನ್ ಜನಾಂಗದಲ್ಲಿ ಪುರುಷನ ಮೆದುಳಿನ ತೂಕ 1355 ಗ್ರಾಂ ಗಳಾದರೆ, ಹೆಂಗಸಿನ ಮೆದುಳಿನ ತೂಕ 1223 ಗ್ರಾಂ. ಬವೇರಿಯಾದ ಪುರುಷನ ಮೆದುಳಿನ ತೂಕ 1362 ಗ್ರಾಂಗಳಾದರೆ, ಸ್ತ್ರೀಯರ ಮೆದುಳಿನ ತೂಕ 1219 ಗ್ರಾಂ ಮತ್ತು ಜಪಾನೀ ಪುರುಷನ ಮೆದುಳಿನ ತೂಕ 1367 ಗ್ರಾಂಗಳಾದರೆ ಸ್ತ್ರೀಯರ ಮೆದುಳಿನ ತೂಕ 1214 ಗ್ರಾಂಗಳು.

ಸ್ತ್ರೀಯರ ತಲೆಬುರುಡೆಯ ಸೂಕ್ಷ್ಮ ಅಧ್ಯಯನದಿಂದ ಅವರ ತಲೆಬುರುಡೆ ಶಿಶುವಿನ ತಲೆಬುರುಡೆಯಂತೆಯೇ ಇರುತ್ತದೆಂಬುದು ವ್ಯಕ್ತವಾಗಿದೆ. ವೀಯತ್ ನಡ್ಸನ್‌ರವರು[3] ತಮ್ಮ ಅಧ್ಯಯನದಲ್ಲಿ ಸ್ತ್ರೀಯ ತಲೆಯ ಸಮಗ್ರ ರೂಪವನ್ನು ಗಮನಿಸಿ, ಆಕೆಯ ಮುಂದಲೆ ಹೆಚ್ಚು ಕಡಿದಾಗಿ, ನಡುನೆತ್ತಿ ಹೆಚ್ಚು ಚಪ್ಪಟೆ ಯಾಗಿದ್ದು ಸ್ಫುಟವಾದ ಮೂಲೆಗಳಿಂದ ಕೂಡಿರುತ್ತದೆ ಎಂಬುದಾಗಿ ತಿಳಿಸಿದ್ದಾರೆ. ಸ್ತ್ರೀಯ ಕಣ್ಣುಗಳು ಶಾಂತಿಯಿಂದ ಕೂಡಿದ್ದು, ಮುಗ್ಧ ಶಿಶುವಿನ ಸರಳತೆಯನ್ನು ವ್ಯಕ್ತಪಡಿಸುತ್ತವೆ. ಸ್ತ್ರೀಯ ಕೆಳದವಡೆ ಬಹುವಾಗಿ ಶಿಶುವಿನ ದವಡೆಯನ್ನೇ ಹೋಲುತ್ತದೆ.

ಸ್ತ್ರೀಯ ಮುಂಡವು ಪುರುಷನ ಮುಂಡಕ್ಕಿಂತ ಹೆಚ್ಚು ತೊಡಕಿನ ರಚನೆಯಿಂದ ಕೂಡಿದೆ. ಆಕೆಯ ಶರೀರ ರಚನೆಯಲ್ಲಿ ಕಿಬ್ಬೊಟ್ಟೆ ಪ್ರಮುಖ ಸ್ಥಾನವನ್ನು ಆಕ್ರಮಿಸಿದೆ. ಏಕೆಂದರೆ ಈ ಭಾಗದಲ್ಲಿ ಆಕೆಯ ಅಂಡಾಶಯ, ಗರ್ಭಕೋಶ ಮತ್ತು ಜನನೇಂದ್ರಿಯ ಗಳಿವೆ. ಗರ್ಭದಲ್ಲಿ ಶಿಶುವಿನ ಭಾರವನ್ನು ತಡೆದುಕೊಳ್ಳುವ ಶಕ್ತಿ ಅದಕ್ಕಿದೆ. ಸ್ತ್ರೀಯ ಸ್ತನರಸಗ್ರಂಥಿಗಳು ಆಕೆಯ ಮೂರನೆ ಮತ್ತು ಏಳನೇ ಪಕ್ಕೆಲುಬುಗಳ ಮಧ್ಯೆ ಎದೆಗೂಡಿನಲ್ಲಿರುತ್ತದೆ. ಈ ಸ್ತನರಸಗ್ರಂಥಿಗಳು ಕೊಬ್ಬಿನ ಎಳೆಗಳಿಂದ ಕೂಡಿರುವುದಲ್ಲದೆ, ಸ್ತನದ ಆಕಾರ ಕೊಬ್ಬನ್ನೇ ಅವಲಂಬಿಸಿರುತ್ತದೆ. ಮ್ಯಾಕ್ಸ್ ಬಾರ್ಟೆಲ್ಸ್ ಅವರು ಸ್ತನರಸಗ್ರಂಥಿಗಳನ್ನು ಅವುಗಳ ಗಾತ್ರ, ಧೃಡತೆ ಮತ್ತು ಆಕಾರಗಳ ಮೇಲೆ ವಿಂಗಡಿಸಿದ್ದಾರೆ. ಸ್ತನಗಳನ್ನು (1) ಗಾತ್ರಕ್ಕನುಗುಣವಾಗಿ

ಸಮೃದ್ಧವಾದ, ಪೂರ್ಣವೃದ್ಧಿಯಾದ, ಸಾಧಾರಣವಾದ ಮತ್ತು ಮಟ್ಟವಾದವು ಗಳೆಂದೂ, (2) ಮಂದತೆಗೆ ಅನುಗುಣವಾಗಿ ಧೃಢವಾದ (ನೆಟ್ಟನೆಯ), ಮೃದುವಾದ (ಸಡಿಲ) ಮತ್ತು ಪೆತ್ತನೆಯ (ಜೋಲಾಡುವ)ವುಗಳೆಂದೂ, (3) ಆಕಾರಕ್ಕನುಗುಣ ವಾಗಿ ಬಟ್ಟಲಿನಾಕಾರದ (ಸುತ್ತಳತೆ ತ್ರಿಜ್ಯಕ್ಕಿಂತ ಎತ್ತರ ಕಡಿಮೆ ಉಳ್ಳ), ಅರ್ಧ ಗೋಳಾಕರದ (ಸುತ್ತಳತೆ ತ್ರಿಜ್ಯಕ್ಕೆ ಸಮನಾಗಿರುವ ಎತ್ತರ ಉಳ್ಳ), ಶಂಕುವಿನಾಕಾರದ (ತ್ರಿಜ್ಯಕ್ಕಿಂತ ಎತ್ತರ ಉಳ್ಳ), ಮತ್ತು ದೀರ್ಘವಾದ (ಸ್ತನಾಗ್ರ ಕೆಳಮುಖಕ್ಕಿರುವ) ಸ್ತನಗಳೇ ಮುಂತಾಗಿ ವಿಂಗಡಿಸಬಹುದು.[4]

ಸಾಮಾನ್ಯವಾಗಿ ಸ್ತನಾಗ್ರವು ಸ್ತನಕೇಂದ್ರಕ್ಕೆ ಮೇಲಿರಬೇಕು. ಈ ಪ್ರಕೃತಿ ದತ್ತವಾದ ಸ್ತನಗಳ ರೂಪು ಬಿಗಿಯಾದ ಹಾಗೂ ಅನಾರೋಗ್ಯಕರವಾದ ಉಡುಪು ಗಳನ್ನು ಉಪಯೋಗಿಸುವುದರಿಂದ ಕುಗ್ಗುವುದಲ್ಲದೆ ಚಪ್ಪಟೆಯಾಗುವುವು. ಟಾಲ್ಮಡ್ ಮತ್ತು ಹಿಬ್ರ್ಯೂ ಬರಹಗಾರರು ಶ್ರೀಮಂತ ವರ್ಗದ ಸ್ತ್ರೀಯರು ತಮ್ಮ ಬಲ ಭುಜದ ಮೇಲೆ ಶಾಲು ಹೊದೆದುಕೊಂಡು ಎದೆಯ ಬಲಭಾಗವನ್ನು ಶಾಖವಾಗಿಡುತ್ತಿದ್ದುದರಿಂದ, ಅವರ ಬಲ ಸ್ತನಗಳು ಎಡ ಸ್ತನಗಳಿಗಿಂತ ಮೊದಲೇ ಅಭಿವೃದ್ಧಿಹೊಂದುತ್ತಿದ್ದು ವೆಂದೂ, ಆದರೆ ಬಡವರ್ಗದ ಸ್ತ್ರೀಯರು ಎಡಗೈಯಿಂದ ಭಾರವಾದ ವಸ್ತುಗಳನ್ನೂ, ನೀರಿನ ಬಿಂದಿಗೆಯನ್ನೂ ಹೊರುತ್ತಿದ್ದುದರಿಂದ ಅವರ ಎಡಭಾಗದ ಸ್ತನಗಳು ಬಲ ಭಾಗದ ಸ್ತನಗಳಿಗಿಂತ ಮೊದಲೇ ಬೆಳೆಯುತ್ತಿದ್ದುವೆಂದೂ ತಿಳಿಸಿದ್ದಾರೆ.

ಫ್ರಿಟ್ಸ್‌ರವರು ಅಮಾಕ್ಸೋ (Ama-xosa) ಜನರ ವಿಷಯವಾಗಿ ಬರೆಯುತ್ತಾ, ಅಲ್ಲಿಯ ಸ್ತ್ರೀಯರು ಪ್ರಾಯದಲ್ಲಿ ಕೊಬ್ಬಿದ, ಹಾಗೂ ಆಕೃತಿ ಇಲ್ಲದ ಸ್ತನಗಳನ್ನು ಹೊಂದಿರುತ್ತಿದ್ದು, ಮದುವೆಯಾದ ನಂತರ ಅವರ ಸ್ತನಗಳು ಖಾಲಿ ಚೀಲಗಳಂತೆ ನೇತಾಡುತ್ತಿದ್ದರೂ ಅವುಗಳನ್ನೇ ಸುಂದರವಾದುವುಗಳೆಂದು ಭಾವಿಸಿ, ಕೆಳಮುಖ ವಾಗಿ ಕಟ್ಟುತ್ತಿದ್ದರೆಂದು ಹೇಳಿದ್ದಾರೆ. ಪೆರುಗ್ವೇ ನದಿಯ ದಡದಲ್ಲಿ ವಾಸಿಸುತ್ತಿದ್ದ ಜನ ತಮ್ಮ ಹೆಣ್ಣುಮಕ್ಕಳ ವಕ್ಷಸ್ಥಳದ ಸುತ್ತ ಚರ್ಮದ ಪಟ್ಟಿಗಳನ್ನು ಕಟ್ಟುತ್ತಿದ್ದು ಅವರು ವಯಸ್ಸಿಗೆ ಬಂದ ನಂತರ, ಆ ಚರ್ಮದ ಪಟ್ಟಿಗಳನ್ನು ಬಿಗಿಯಾಗಿ ಎಳೆದು ಬೆನ್ನ ಭಾಗಕ್ಕೆ ಕಟ್ಟುತ್ತಿದ್ದರೆಂದು ಎಫ್. ಡೆ–ಅಜಾರ ಎಂಬ ಮಾನವಶಾಸ್ತ್ರಜ್ಞ ತಿಳಿಸುತ್ತಾನೆ.

ಎಲ್ಲ ಜನಾಂಗಗಳಲ್ಲಿಯೂ ಸ್ತ್ರೀಯರು ಪುರುಷರಿಗಿಂತ ಹೆಚ್ಚು ದೈಹಿಕ ಶ್ರಮ ವಿಲ್ಲದೆ ಓಡಾಡುವರು ಎಂಬುದು ಜೆ. ಫ್ರಾಂಕಲ್ ಅವರ ಅಭಿಪ್ರಾಯ. ಸ್ತ್ರೀಯರು ನಡೆಯುವಾಗ ಕೆಳ ತೋಳುಗಳ ಜೊತೆಗೆ ಟೊಂಕವನ್ನೂ ಚಲಿಸುತ್ತಾರೆ. ಹೆಜ್ಜೆ ಹಾಕುವಾಗ ಟೊಂಕದ ರೇಖೆಯು ದೇಹವನ್ನು ಮೇಲೆತ್ತುವುದಲ್ಲದೆ ಭುಜಗಳ ಮಟ್ಟ ಕೆಳಗಿಳಿದು ಟೊಂಕದ ಚಲನೆಯನ್ನು ಸರಿದೂಗಿಸುವಂತೆ ಕಾಣುತ್ತದೆ. ಇದು ಸ್ತ್ರೀ ನಡಿಗೆಯ ಸಾಮಾನ್ಯ ಭಂಗಿ. ಸ್ತ್ರೀಯರು ತಮ್ಮ ದೇಹದ ತೂಕವನ್ನೆಲ್ಲಾ ಪಾದಗಳ ಮೇಲೆ ಬಿಡುವುದರಿಂದ, ಅವರ ನಡಿಗೆಗೂ, ಪುರುಷರ ನಡಿಗೆಗೂ ವ್ಯತ್ಯಾಸವಿರುತ್ತದೆ.

ಸ್ತ್ರೀಯ ಅಸ್ತಿಪಂಜರ ಪುರುಷನ ಅಸ್ತಿಪಂಜರದಷ್ಟು ದೊಡ್ಡದಾಗಿಲ್ಲ ಹಾಗೂ ಪುರುಷನ ಅಸ್ತಿಪಂಜರಕ್ಕಿಂತ ಮೃದುವಾಗಿದೆ. ಸ್ತ್ರೀಯರಲ್ಲಿ ಮಾಂಸಖಂಡಗಳು ಮೃದುವಾಗಿದ್ದು ಕೋಮಲವಾಗಿರುತ್ತವೆ. ದೇಹದಲ್ಲಿ ಹೆಚ್ಚು ಕೊಬ್ಬಿನ ಅಂಶ ಅಡಕವಾಗಿರುವುದರಿಂದ, ದೇಹವು ದುಂಡಗೆ ನಿರ್ದಿಷ್ಟ ಆಕೃತಿಯನ್ನು ಪಡೆದಿದೆ.

ಹೆಣ್ಣು-ಗಂಡುಗಳ ನಡುವಣ ವ್ಯತ್ಯಾಸವನ್ನು ವಿಲ್‌ಹೆಲ್ಮ್ ಹೇನ್ರಿಕ್ ಬುಷ್ ಎಂಬಾತನು ಸ್ಪಷ್ಟವಾಗಿ ವಿವರಿಸಿದ್ದಾನೆ. ಹೆಣ್ಣಿನ ದೇಹ, ರಚನೆಯಲ್ಲಿ ದುಂಡಾಗಿಯೂ ಕೋಮಲವಾಗಿಯೂ ಇದ್ದು, ಹೊರ ನೋಟಕ್ಕೆ ಪುರುಷರ ದೇಹಕ್ಕಿಂತ ಸುಂದರವಾಗಿದೆ. ಹೆಂಗಸಿನ ತಲೆಬುರುಡೆ ಗೋಳಾಕಾರವಾಗಿದ್ದು, ಕಡಿಮೆ ಎಲುಗಳಿಂದ ಕೂಡಿದೆ. ಉದ್ದನೆಯ ಕೂದಲು ಹೆಣ್ಣಿನ ಸೌಂದರ್ಯವನ್ನು ಹೆಚ್ಚಿಸಿದೆ. ಸ್ತ್ರೀಯರಿಗೆ ಹಣೆಯಿಂದ ಗಲ್ಲದವರೆಗೆ ಇರುವ ಉದ್ದವು ಕಡಿಮೆ. ಮುಂದಲೆ ಕೆಳಮಟ್ಟದಲ್ಲಿದ್ದು, ಮೂಗು ಮತ್ತು ಬಾಯಿ ಸಣ್ಣಗಿವೆ. ಗಲ್ಲವು ಹೆಚ್ಚು ನುಣಪಾಗಿದೆ. ಗಲ್ಲವು ಕಡಿಮೆ ಚೂಪಾಗಿರುವುದರಿಂದ, ಮುಖವು ಸಾಮಾನ್ಯವಾಗಿ ದುಂಡಗಿರುತ್ತದೆ. ಪುರುಷರಿಗಿಂತ ಸ್ತ್ರೀಯರ ಕತ್ತು ಉದ್ದವಾಗಿರುತ್ತದೆ. ತಲೆ ನೇರವಾಗಿದ್ದು, ಕತ್ತಿನ ಮತ್ತು ಭುಜ ಭಾಗಗಳು ಅಂದವಾಗಿ ಹೊಂದಿಕೊಳ್ಳುತ್ತವೆ. ಸ್ತ್ರೀಯರಲ್ಲಿ ಗಂಟಲ ಮಣಿ ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲ.

ಸ್ತ್ರೀಯರ ಮುಂಡದ ಆಕಾರವೇ ಪುರುಷರ ಮುಂಡದ ಆಕಾರಕ್ಕಿಂತ ಬೇರೆ ಯಾಗಿದೆ. ಸ್ತ್ರೀಯ ನಡುಕಟ್ಟು ಕಿರಿದಾಗಿದೆ. ಭುಜ ಮತ್ತು ಪಕ್ಕೆಲಬುಗಳು ಕಡಿದಾಗಿವೆ. ಪಕ್ಕೆಲುಬುಗಳು ಅಸ್ತಿಕುಹರದ ನೇರದಲ್ಲಿವೆ. ಸ್ತ್ರೀಯ ಅಸ್ತಿಕುಹರ ಪುರುಷನ ಅಸ್ತಿಕುಹರಕ್ಕಿಂತ ಅಗಲವಾಗಿದೆ. ಉದರ, ಪಕ್ಕೆ, ಪೃಷ್ಠಗಳ ಸ್ನಾಯುಗಳು ಹೆಚ್ಚು ಮಾಂಸ ಮತ್ತು ಕೊಬ್ಬಿನಿಂದ ಕೂಡಿರುವುದರಿಂದ ಅವು ಹೆಚ್ಚು ಕೋಮಲವಾಗಿ ಕಾಣುವುದಲ್ಲದೆ, ಮೃದುವಾಗಿವೆ. ಪಕ್ಕೆಲುಬು ಮತ್ತು ಟೊಂಕದ ಎಲುಬುಗಳು ಅಷ್ಟು ಪ್ರಧಾನವಾಗಿಲ್ಲ. ಸ್ತನಗಳ ಅಭಿವೃದ್ಧಿಯಿಂದ ಮತ್ತು ಕೊಬ್ಬಿನ ಶೇಖರಣೆ ಯಿಂದ ವಕ್ಷಸ್ಥಳವು ಬಹಳ ಸಣ್ಣದಾಗಿ ಕಾಣುತ್ತದೆ.

ಸ್ತ್ರೀಯ ಇಡೀ ದೇಹವನ್ನು ಗಮನಿಸಿದಾಗ, ಆಕೆಯ ಮುಂಡದ ಉದ್ದ ಪುರುಷನ ಮುಂಡದ ಉದ್ದಕ್ಕಿಂತಲೂ ಹೆಚ್ಚಾಗಿರುವುದೆಂದು ಜಾನ್ ರ‍್ಯಾಂಕ್ ಅಭಿಪ್ರಾಯ ಪಡುತ್ತಾನೆ. ಆಕೆಯ ಕೈಕಾಲು ಮತ್ತು ಇತರ ಅಂಗಗಳು ಚಿಕ್ಕವಾಗಿದ್ದು, ಪುರುಷನ ಅಂಗಗಳೇ ಹೆಚ್ಚು ಉದ್ದವಾಗಿರುವಂತೆ ಕಾಣುತ್ತವೆ. ಪುರುಷರ ತೊಡೆ ಗಳು ಮತ್ತು ತೋಳುಗಳು ಅವುಗಳ ಕೀಲುಗಳಿಂದ ತಳಭಾಗಕ್ಕೆ ಹೆಚ್ಚು ಉದ್ದವಾಗಿವೆ. ಅಲ್ಲದೆ, ಹೆಣ್ಣು ಧೃಡವಾದ ಅಂಗರಚನೆಯಿಂದ ಕೂಡಿದ್ದರೂ ಆಕೆಯ ಮುಖ ಕೆಲವು ವೇಳೆ ಹೆದರಿಕೆಯನ್ನು ವ್ಯಕ್ತಪಡಿಸುವಂತೆ ಕಾಣುತ್ತದೆ. ಈ ದೃಷ್ಟಿಯಲ್ಲಿ, ಮಾನವ ಶರೀರ ರಚನೆಯ ವಿಕಾಸದಲ್ಲಿ, ಪುರುಷರ ದೇಹ ಹೆಚ್ಚು ಅಭಿವೃದ್ಧಿಗೊಂಡಿದೆ ಎಂದು

ಹೇಳಬಹುದು. ಆದರೆ, ಸ್ತ್ರೀ ಈ ದಿಶೆಯಲ್ಲಿ ಅಷ್ಟು ಪ್ರಗತಿಹೊಂದಿಲ್ಲವೆಂಬುದನ್ನು ವೀಷ್‌ಬ್ಯಾಕ್‌ರವರು ಜರ್ಮನ್ ಸ್ತ್ರೀಯರ ಸಂಬಂಧವಾಗಿ ಮಾಡಿರುವ ಅಧ್ಯಯನಗಳಿಂದ ತಿಳಿಯಬಹುದು. ಸ್ತ್ರೀಯರ ತೋಳುಗಳು ಚಿಕ್ಕದಾಗಿದ್ದು, ಹಸ್ತ ಮತ್ತು ಮಧ್ಯದ ಬೆರಳುಗಳು ಉದ್ದವಾಗಿವೆ. ಸ್ತ್ರೀಯರ ತೊಡೆಗಳು ಉದ್ದವಾಗಿದ್ದು ಪಾದಗಳು ಅಗಲವಾಗಿವೆ.

ಸಾಮಾನ್ಯವಾಗಿ ಗಂಟಲು, ಮೂಗು, ಭುಜ, ನಿತಂಬ ಮೊದಲಾದ ಅಂಗಗಳ ರೂಪರೇಖೆಗಳು ಹೆಣ್ಣಿಗೆ ಸೌಂದರ್ಯದ ಮೆರಗನ್ನು ಕೊಟ್ಟಿವೆ. ಈ ಅಂಗರಚನೆಯ ವೈಶಿಷ್ಟ್ಯದೊಂದಿಗೆ ಸ್ತ್ರೀಯರಲ್ಲಿ ಆಂತರಿಕ ಅವಯವಗಳು ಮತ್ತು ಜೀವದ್ರವ್ಯ ಪರಿಣಾಮಗಳು ಸಹ ಬೇರೆಯಾಗಿಯೇ ಇವೆ. ಪುರುಷರಿಗಿಂತ ಸ್ತ್ರೀಯರಿಗೆ ಆಹಾರದ ಅವಶ್ಯಕತೆ ಕಡಿಮೆಯಾಗಿದ್ದು, ಹೆಣ್ಣು ಹಸಿವು ಮತ್ತು ಬಾಯಾರಿಕೆಗಳನ್ನು ತಡೆಯಬಲ್ಲಳು. ಪುರುಷರಲ್ಲಿ ಹೃದಯ ಮತ್ತು ರಕ್ತನಾಳಗಳು ಹೆಚ್ಚು ಶಕ್ತಿಯುತವಾಗಿವೆ. ಧಮನಿಗಳ ಕವಚಗಳು ಹೆಚ್ಚು ಮಂದವಾಗಿಯೂ ಧೃಡವಾಗಿವೆ. ಆದರೆ, ಹೆಂಗಸರಲ್ಲಿ ರಕ್ತದ ಸಾಂದ್ರತೆ ಅಷ್ಟು ಮಂದವಾಗಿರುವುದಿಲ್ಲ. ಪುರುಷರ ಪ್ರತಿಯೊಂದು ಘನ ಮಿಲಿಮೀಟರ್ ರಕ್ತದಲ್ಲಿ ಸ್ತ್ರೀಯರ ರಕ್ತದಲ್ಲಿರುವುದಕ್ಕಿಂತ ಸುಮಾರು ಐದು ದಶಲಕ್ಷಕ್ಕೂ ಮೀರಿದ ಕೆಂಪು ರಕ್ತ ಕಣಗಳಿರುತ್ತವೆ. ಸ್ತ್ರೀಯರ ರಕ್ತದಲ್ಲಿ ನೀರಿನ ಅಂಶ ಹೆಚ್ಚಾಗಿರುವುದರಿಂದ ಪುರುಷರ ದೇಹಕ್ಕಿಂತ ಸ್ತ್ರೀಯರ ದೇಹದಲ್ಲಿ ರಕ್ತ ಹೆಚ್ಚು ಶೀಘ್ರವಾಗಿ ಹರಿಯುತ್ತದೆ.

ಸಾಮಾನ್ಯವಾಗಿ ಪುರುಷನಿಗೆ ತನ್ನ ಹೊರತು ಸರ್ವಸ್ವವೂ ಬಹಿರಂಗವಾಗಿರುವಂತೆ ತೋರುತ್ತದೆ. ಅವನ ಮರ್ಮಾಂಗವು ಸಹ ಬಾಹ್ಯವಾಗಿ ಕಾಣುವುದಾಗಿದೆ. ಲೈಂಗಿಕ ಕ್ರಿಯೆಯೂ ಪುರುಷನಿಗೆ ಬಾಹ್ಯ ಕ್ರಿಯೆಯಾಗಿಯೇ ಕಾಣುತ್ತದೆ. ಪುರುಷನ ಪ್ರತಿಯೊಂದು ಕ್ರಿಯೆಯೂ ಹೊರ ರೂಪವನ್ನು ತಾಳುತ್ತದೆ. ಆದರೆ ಸ್ತ್ರೀಗೆ ತನ್ನ ವ್ಯಕ್ತಿತ್ವ ಆಂತರಿಕ ಮತ್ತು ಅಂತರ್ದೃಷ್ಟಿಯುದಾಗಿರುತ್ತದೆ. ಗರ್ಭಧಾರಣೆ ಅವಳ ಶರೀರದಲ್ಲಿ ಉಂಟಾಗುತ್ತಲ್ಲದೆ, ಶಿಶುವಿಗೆ ಹಾಲು ಉಣಿಸುವ ಕಾರ್ಯವೂ ಅವಳದೇ ಆಗಿರುತ್ತದೆ.

ಈ ಕಾರಣಗಳಿಂದಾಗಿ, ಸ್ತ್ರೀಯು ಶಾರೀರಕವಾಗಿ ಪುರುಷನಿಗೆ ಭಿನ್ನವಾಗಿಯೇ ಇರುವಳು. ಈ ಭಿನ್ನತೆ ಪ್ರಪಂಚದ ಎಲ್ಲಾ ಸ್ತ್ರೀಯರ ಬಗ್ಗೆ ಒಂದೇ ರೀತಿಯದೆ ಎಂಬುದನ್ನು ಪರಿಶೀಲಿಸಿ ನೋಡುವುದು ಸೂಕ್ತವಾಗಿದೆ: ಚೀಣಾ ದೇಶದ ಸ್ತ್ರೀಯರು ಕುಳ್ಳಗಿದ್ದು, ಅವರ ದೇಹವು ದುರ್ಬಲವಾಗಿರುತ್ತದೆ. ಅವರ ತಲೆ ಎತ್ತರವಾಗಿಯೂ ದೊಡ್ಡದಾಗಿಯೂ ಇದ್ದು, ಮುಖವು ಚಾಚಿಕೊಂಡಿರುತ್ತದೆ. ಗಲ್ಲದ ಎಲುಬು ಸಣ್ಣದು. ಅವರ ಮೂಗು ಉಬ್ಬಿಕೊಂಡು ಸಣ್ಣದಾಗಿರುತ್ತದೆ. ಬಾಯಿಯೂ ಕೂಡ ಸಣ್ಣದು. ಎದೆಯ ಅಳತೆ ಕಡಿಮೆ; ಕತ್ತು ಸಣ್ಣಗಿರುತ್ತದೆ. ಶರೀರದ ಮೇಲ್ಭಾಗದ ಅವಯವಗಳು ತೆಳುವಾಗಿವೆ. ಮೇಲ್ತೋಳು ಕೊಳವೆಯಾಕಾರದಿಂದ

ಕೂಡಿ ಮಧ್ಯದ ಬೆರಳುಗಳು ಉದ್ದವಾಗಿಯೂ, ಸಣ್ಣಗೂ ಇರುತ್ತವೆ. ತೊಡೆ ಮತ್ತು ಮೊಳಕಾಲು ದಪ್ಪವಾಗಿರುತ್ತವೆ. ಪಾದವು ಚಿಕ್ಕದು.

ಜಾವಾ ಸ್ತ್ರೀಯರಿಗೆ ದೇಹದ ಮೇಲೆ ಕಡಿಮೆ ಕೂದಲಿರುತ್ತದೆ. ಅವರು ವೇಗ ವಾಗಿ ನಡೆಯುತ್ತಾರೆ. ದೇಹವು ಅಷ್ಟು ಗಟ್ಟಿಮುಟ್ಟಾಗಿಲ್ಲ. ಮುಖ ಅಗಲವಾಗಿದ್ದು, ಕೆನ್ನೆ ಎಲುಬು ವಿಶಾಲವಾಗಿದ್ದರೂ, ಕೆಳದವಡೆಯ ತಿರುವಿನಲ್ಲಿ ಅಗಲ ಕಡಮೆ. ಕತ್ತು ದಪ್ಪಗೂ, ಉದ್ದವಾಗಿಯೂ ಇದ್ದು, ಎದೆಗೂಡು ಮೋಟಾಗಿರುತ್ತದೆ. ಕೈ ಕಾಲುಗಳು ಕೂಡ ಮೋಟಾಗಿರುತ್ತವೆ.

ಸೂಡಾನಿನ ಸ್ತ್ರೀಯರು ಗಿಡ್ಡಾಗಿದ್ದರೂ, ಅಷ್ಟು ದೃಢಕಾಯರಲ್ಲ. ಮುಖ ಅಗಲವಾಗಿದ್ದರೂ ಅಷ್ಟಾಗಿ ಹೊರಕ್ಕೆ ಚಾಚಿಕೊಂಡಿರುವುದಿಲ್ಲ. ಕತ್ತು ಸಣ್ಣಗೆ ಉದ್ದವಾಗಿದ್ದು ವಕ್ಷಸ್ಥಳದ ಅಗಲ ಕಡಿಮೆ ಇರುತ್ತದೆ. ಮೇಲ್ತೋಳು ಉದ್ದವಾಗಿದ್ದು ತೋಳಿನ ಮಿಕ್ಕ ಭಾಗ ದಪ್ಪಗೂ, ತುಂಡಾಗಿಯೂ ಇದೆ. ಆಸ್ಟ್ರೇಲಿಯಾದ ಸ್ತ್ರೀಯ ರಿಗೂ ಸೂಡಾನಿನ ಸ್ತ್ರೀಯರಿಗೂ ವ್ಯತ್ಯಾಸವಿದೆ. ಆಸ್ಟ್ರೇಲಿಯಾದ ಸ್ತ್ರೀಯರ ತಲೆ ಅಗಲವಾಗಿದ್ದು ಮುಖಭಾಗದಲ್ಲಿ ಹುಬ್ಬು ಕೆಳಕ್ಕಿಳಿದು, ಮೂಗು ಸಣ್ಣಗಿರುತ್ತದೆ. ಅವರ ದೇಹ ದೃಢವಾಗಿದ್ದು, ನಡು ಅಗಲವಾಗಿರುತ್ತದೆ. ಎದೆ ಮತ್ತು ಸ್ತನಗಳ ಅಳತೆ ಒಂದೇ ಆಗಿರುವುದಿಲ್ಲ. ತೋಳುಗಳು ಉದ್ದವಾಗಿರುತ್ತವೆ.[5]

ಪ್ರಕೃತಿಯೇ ಸ್ತ್ರೀ ಮತ್ತು ಪುರುಷರನ್ನು ಬೇರೆ ಬೇರೆಯಾಗಿ ಸೃಷ್ಟಿಸಿದೆ. ಎಫ್. ಡಬ್ಲ್ಯೂ. ಬೈನ್‌ರವರು ತಮ್ಮ 'ಡಿಜಿಟ್ ಆಫ್ ದಿ ಮೂನ್' ಎಂಬ ಗ್ರಂಥ ದಲ್ಲಿ ಹೀಗೆಂದಿದ್ದಾರೆ : 'ಸ್ವಸ್ತ್ರೀ, (Swasthri) ಸ್ತ್ರೀಯನ್ನು ಸೃಷ್ಟಿಸಲು ಪ್ರಾರಂಭಿಸಿ ದಾಗ, ಆತನಿಗೆ ಪುರಷನನ್ನು ಸೃಷ್ಟಿಸುವುದರಲ್ಲೇ ಎಲ್ಲಾ ಸಾಮಗ್ರಿಗಳೂ ಮುಗಿದು ಹೋಗಿದ್ದುವು. ಗಟ್ಟಿಯಾದ ಯಾವ ವಸ್ತುವೂ ಸಿಗದ ಕಾರಣ ಅವನು ಇಕ್ಕಟ್ಟಿಗೆ ಸಿಕ್ಕಿ ಸ್ತ್ರೀಯನ್ನು ಮೃದುವಾದ ವಸ್ತುಗಳಿಂದ ಸೃಷ್ಟಿಸಿ ಅವಳನ್ನು ಅಬಲೆಯನ್ನಾಗಿ ಮಾಡಿದನು. ಚಂದ್ರನ ಗುಂಡು ಆಕಾರ, ಲತೆಯ ಬಳಕು, ಬಳ್ಳಿಯ ಸೇರಿಕೆ ಮತ್ತು ಕಂಪನ, ಜೊಂಡಿನ ದುರ್ಬಲತೆ, ಪುಷ್ಪದ ವಿಕಾಸ, ಎಲೆಗಳ ಹಗುರ, ಆನೆಯ ಸೊಂಡಿ ಲಿನ ಚೂಪು, ಹರಿಣಿಗಳ ದೃಷ್ಟಿ, ದುಂಬಿಯ ಝೇಂಕಾರ, ಸೂರ್ಯರಶ್ಮಿಯ ಸಂತಸ ಹಾಗೂ ಉಲ್ಲಾಸ, ಮೇಘಗಳ ರೋದನ, ಮೊಲದ ಅಂಜಿಕೆ, ನವಿಲಿನ ವೈಯಾರ, ಗಿಣಿಯ ಅಂತರ್ಯದ ಮೃದುತ್ವ, ವಜ್ರದ ಕಠಿಣತೆ, ಮದುವಿನ ಮಧುರತೆ, ಹುಲಿಯ ಕ್ರೂರತೆ, ಅಗ್ನಿಯ ಬೆಳಕು, ನೀಲಕಂಠ ಪಕ್ಷಿಯ ವಟಗುಟ್ಟುವಿಕೆ, ಕೋಗಿಲೆಯ ಮೇಲುಧ್ವನಿ, ಬಕಪಕ್ಷಿಯ ಬೂಟಾಟಿಕೆ, ಚಕ್ರವಾಕ ಪಕ್ಷಿಯ ವಿಧೇಯತೆ—ಇವು ಗಳೆಲ್ಲವೂ ಸೇರಿದಂತೆ ಸೃಷ್ಟಿಕರ್ತ ಸ್ತ್ರೀಯನ್ನು ರೂಪಿಸಿ ಮಾನವನಿಗೆ ನೀಡಿದ'. ಈ ಹೇಳಿಕೆಯಲ್ಲಿ ಸ್ತ್ರೀ ಮತ್ತು ಪುರುಷರ ಸಂಬಂಧವಾದ ಸೃಷ್ಟಿವೈವಿಧ್ಯ ಕಾಣುತ್ತದೆ.

ಇನ್ನು, ಮಾನವನ ಬೆಳವಣಿಗೆಯಲ್ಲಿನ ವಿವಿಧ ಕಾಲಗಳಲ್ಲಿ ಸ್ತ್ರೀ–ಪುರುಷರ ನಡುವಣ ವ್ಯತ್ಯಾಸಗಳನ್ನು ತಿಳಿಯಲು ಪ್ರಯತ್ನಿಸೋಣ: ಚಿಕ್ಕ ಮಕ್ಕಳ ಅಂಗಾಂಗಗಳ ಅಳವು ವಯಸ್ಕ ಸ್ತ್ರೀ ಪುರುಷರ ಅಂಗಾಂಗಗಳಿಗಿಂತ ಬೇರೆಯಾಗಿವೆ. ಜನಿಸಿದ ಶಿಶುವಿನ ತಲೆ ಮತ್ತು ಕೈ–ಕಾಲುಗಳು, ಮುಂಡದೊಡನೆ ಹೋಲಿಸಿದಾಗ, ಉದ್ದವಾಗಿ ಕಾಣುತ್ತವೆ. ಇದಕ್ಕೆ ಶಿಶುವಿನ ಪಿತ್ತಜನಕಾಂಗ ದೊಡ್ಡದಾಗಿದ್ದು, ಶ್ವಾಸಕೋಶದ ಅಂಗಗಳು ಆಗ ತಾನೇ ಕಾರ್ಯ ಪ್ರಾರಂಭಿಸುವುದು ಕಾರಣವೆಂದು ಹೇಳಬಹುದು. ಗಂಡು ಮತ್ತು ಹೆಣ್ಣು ಮಕ್ಕಳ ಜನನದಲ್ಲಿ ಈ ಬಗ್ಗೆ ಯಾವ ವ್ಯತ್ಯಾಸವೂ ಇರುವುದಿಲ್ಲ.

ಮಗುವಿನ ಮೊದಲ ವರುಷಗಳ ಬೆಳವಣಿಗೆಯಲ್ಲಿ ಅಷ್ಟಾಗಿ ವ್ಯತ್ಯಾಸ ಕಾಣ ಬರುವುದಿಲ್ಲ. ಎತ್ತರ ಮತ್ತು ತೂಕಗಳನ್ನು ಬಿಟ್ಟರೆ, ನಾಲ್ಕು ವರ್ಷಗಳ ವರೆವಿಗೆ ವ್ಯತ್ಯಾಸ ಕಾಣುವುದಿಲ್ಲ. ಜನಿಸುವಾಗಲೆ ಹೆಣ್ಣು ಮಗುವಿಗಿಂತ ಗಂಡು ಮಗುವಿನ ತೂಕ ಮತ್ತು ಎತ್ತರ ಹೆಚ್ಚಾಗಿರುತ್ತದೆ. ಮೊದಲ ಎರಡು ವರುಷಗಳಲ್ಲಿ ಬೆಳವಣಿಗೆ ಹೆಚ್ಚಾಗಿದ್ದು, ಮೂರು ಮತ್ತು ನಾಲ್ಕನೇ ವಯಸ್ಸಿನಲ್ಲಿ ನಿಧಾನವಾಗಿರುತ್ತದೆ. ಈ ವಯಸ್ಸಿನಲ್ಲಿ ಮಕ್ಕಳಿಗೆ ಪುಷ್ಟಿಕರವಾದ ಆಹಾರಗಳನ್ನು ಕೊಡುವುದರಿಂದ ದೇಹ ಮಾಂಸಗಳಿಂದ ಕೂಡಿಕೊಂಡು ಕೈ ಕಾಲುಗಳು ದುಂಡಗಿರುತ್ತವೆ. ನಾಲ್ಕು ಮತ್ತು ಐದನೆ ವರುಷಗಳಲ್ಲಿ ಮಕ್ಕಳು ಇದ್ದಕ್ಕಿದ್ದಂತೆ ಬೇಗ ಬೆಳೆದುಬಿಡುತ್ತಾರೆ. ಇದು ಬೆಳವಣಿಗೆಯಲ್ಲಿ ಮೊದಲ ಹಂತ.

ಆರನೆಯ ವರ್ಷದ ನಂತರ ಕ್ರಮಕ್ರಮವಾಗಿ ದೇಹ ತುಂಬಿಕೊಂಡು, ಹೆಚ್ಚು ಲೈಂಗಿಕ ವ್ಯತ್ಯಾಸಗಳು ಪ್ರದರ್ಶಿತವಾಗುತ್ತವೆ. ಸೊಂಟದ ಸುತ್ತ, ತೊಡೆ, ಮಂಡಿ, ಭುಜಗಳಲ್ಲಿ ಮತ್ತು ವಕ್ಷಸ್ಥಳದ ಮೇಲ್ಭಾಗದಲ್ಲಿ ಕೊಬ್ಬು ತುಂಬಿಕೊಳ್ಳಲಾರಂಭಿಸುತ್ತದೆ. ಈ ವಯಸ್ಸಿನಲ್ಲಿ ಬಾಲಿಕೆಯರು ದುಂಡಗೂ, ನೋಡಲು ಚೆನ್ನಾಗಿಯೂ ಕಾಣಿಸುತ್ತಾರೆ. ಏಳರಿಂದ ಎಂಟನೆ ವಯಸ್ಸಿನವರೆಗೆ ಹೆಣ್ಣುಮಕ್ಕಳಲ್ಲಿ ತೂಕವೂ ಏರುತ್ತದೆ. ಇದು ಮುಂದಿನ ನಾಲ್ಕು ವರುಷಗಳವರೆಗೆ ಮುಂದುವರಿದುಕೊಂಡು ಹೋಗುತ್ತದೆ. ಇದು ಮಕ್ಕಳ ಬೆಳವಣಿಗೆಯಲ್ಲಿ ಎರಡನೆಯ ಹಂತ.

ಬಾಲಿಕೆ ಹನ್ನೊಂದರಿಂದ ಹದಿನಾಲ್ಕನೆಯ ವಯಸ್ಸಿನ ಅವಧಿಯಲ್ಲಿ ತನ್ನ ಬೆಳವಣಿಗೆಯಲ್ಲಿ ಮೂರನೆಯ ಹಂತವನ್ನು ಪ್ರವೇಶಿಸುತ್ತಾಳೆ. ಇದು ಪ್ರೌಢಾವಸ್ಥೆ ಅಥವಾ ಯೌವನ. ಈ ಅವಧಿಯಲ್ಲಿ ದೈಹಿಕ ಬದಲಾವಣೆಗಳು ತ್ವರಿತವಾಗಿ ಆಗುತ್ತವೆ. ಮುಖ ಹೆಚ್ಚು ದುಂಡಾಗಿಯೂ, ಸೌಮ್ಯವಾಗಿಯೂ ಇರುತ್ತದಲ್ಲದೆ, ದೇಹದ ತೂಕವೂ ಹೆಚ್ಚುತ್ತದೆ. ಧ್ವನಿ ಈಗ ಮಾರ್ಪಟ್ಟು ಮಧುರವಾಗಿರುತ್ತದೆ. ಸೊಂಟವು ಅಗಲ ವಾಗುವುದಲ್ಲದೆ ಸ್ತನಗಳು ಹಿಗ್ಗುತ್ತವೆ. ಜನನೇಂದ್ರಿಯಗಳಲ್ಲಿ ಗಮನಾರ್ಹ

ಬದಲಾವಣೆಗಳಾಗುತ್ತವೆ. ಕಂಕುಳಗಳಲ್ಲಿ ಮತ್ತು ಜನನೇಂದ್ರಿಯದ ಸುತ್ತ ರೋಮಗಳು ಬೆಳೆಯಲಾರಂಭಿಸುವುದಲ್ಲದೆ ರಜೋದರ್ಶನ ಪ್ರಾರಂಭವಾಗುತ್ತದೆ. ಆಕೆಯ ಬೆಳವಣಿಗೆಯು ಅನುಕೂಲ ವಾತಾವರಣವನ್ನು, ಅದರಲ್ಲೂ ಹೆಚ್ಚಾಗಿ ಆಕೆಯ ಕುಟುಂಬದ ಜೀವನ ವಿಧಾನವನ್ನು ಅವಲಂಬಿಸಿರುತ್ತದೆ. ಯೌವನ ಬಾಲಕರಿಗಿಂತ ಬಾಲಿಕೆಯರಲ್ಲಿ ಬೇಗ ಕಾಣಿಸಿಕೊಳ್ಳುವುದೆಂದೂ, ಕೀಳುಜನಾಂಗಗಳಲ್ಲಿ ಹುಡುಗಿಯರು ಬೇಗ ಪುಷ್ಪವತಿಯರಾಗುವರೆಂದೂ ಹ್ಯಾವ್‌ಲಾಕ್ ಎಲೀಸ್ ಅಭಿಪ್ರಾಯ ಪಡುತ್ತಾರೆ. ಬೇಗ ಋತುಮತಿಯಾದರೆ, ಹಾಗೂ ಲೈಂಗಿಕ ಜೀವನ ಪ್ರಾರಂಭವಾದಂತೆ, ದೇಹದ ಬೆಳವಣಿಗೆ ಮೊಟಕಾಗುತ್ತದೆ.

ಪ್ರಾಯ ಬಂದಮೇಲೆ ಹುಡುಗ ಹುಡುಗಿಯರ ಬೆಳವಣಿಗೆಯಲ್ಲಿ ಸ್ವಾಭಾವಿಕವಾಗಿಯೇ ವ್ಯತ್ಯಾಸವು ಕಂಡುಬರುತ್ತದೆ. ಹೆಣ್ಣು ನಿಯತಕಾಲಿಕ ಕ್ಷೋಭೆಗಳಿಗೆ ಈಡಾಗುತ್ತಾಳೆ. ಆಕೆ ಮಕ್ಕಳನ್ನು ಹೆರಬೇಕಾಗುವುದಲ್ಲದೆ, ಮಕ್ಕಳಿಗೆ ಸ್ತನ್ಯಪಾನ ಮಾಡಿಸುವ ಹೊಣೆಯನ್ನೂ ಹೊತ್ತಿರುತ್ತಾಳೆ. ಆದರೆ, ಗಂಡಿಗೆ ಈ ತೆರನ ಯಾವ ಕ್ಷೋಭೆಯೂ ಇರುವುದಿಲ್ಲ. ಸ್ತ್ರೀಯ ಜೀವನದಲ್ಲಿ ಮೂರು ಶಾರೀರಕ ಹಂತಗಳಿರುತ್ತವೆ. ಮೊದಲನೆಯದಾಗಿ ಪ್ರಾಯದ ಪೂರ್ವ ಹಂತ. ಈ ಅವಧಿಯಲ್ಲಿ ಬಾಲಕ ಬಾಲಕಿಯರಲ್ಲಿ ಹಲವಾರು ಅನುರೂಪತೆಯನ್ನು ಕಾಣಬಹುದಲ್ಲದೆ 6ರಿಂದ 7 ವರ್ಷಗಳ ನಂತರ ಸೂಕ್ಷ್ಮ ವ್ಯತ್ಯಾಸಗಳನ್ನು ಗಮನಿಸಬಹುದು. ಈ ಕಾಲದಲ್ಲಿ ಅವರ ದೇಹಗಳು ಅಷ್ಟು ಅಭಿವೃದ್ಧಿ ಹೊಂದಿರುವುದಿಲ್ಲ. ಈ ಹಂತದಿಂದ ಬಾಲಿಕೆಯರು ತಾರುಣ್ಯಕ್ಕೆ ಕಾಲಿಟ್ಟಾಗ ಗಮನಾರ್ಹ ದೈಹಿಕ ಬದಲಾವಣೆಗಳನ್ನು ಪ್ರದರ್ಶಿಸುವರು. ತರುವಾಯದ ಹಂತ ಕುಟುಂಬ ಜೀವನ. ಕೊನೆಯ ಹಂತವೆಂದರೆ ಸ್ತ್ರೀಯರ ನಿಯತಕಾಲಿಕ ಮುಟ್ಟು ನಿಲ್ಲುವಿಕೆ, ಮಕ್ಕಳನ್ನು ಹೆರುವುದರಿಂದ ಬಿಡುಗಡೆ ಮತ್ತು ಲೈಂಗಿಕ ವಿಶ್ರಾಂತಿ.

## ಮುಟ್ಟು

ಸ್ತ್ರೀಯರಲ್ಲಿ ಉಂಟಾಗುವ ರಜಸ್ಸು ಅಥವಾ ಮುಟ್ಟಿನ ಬಗ್ಗೆ ಪ್ಲಾಸ್ ಮತ್ತು ಬಾರ್ಟೆಲ್ಸ್ ಎಂಬಿಬ್ಬರು ತಜ್ಞರ ಅಭಿಪ್ರಾಯಗಳು ಗಮನಾರ್ಹವಾಗಿವೆ. ಗರ್ಭಕೋಶ ಸ್ತ್ರೀಯ ವೈಶಿಷ್ಟ್ಯಪೂರ್ಣವಾದ ಅಂಗ. ಅಗೋಚರತೆಯಿಂದ ಸಕ್ರಿಯೆಗೆ ಅದರ ಅಭಿವೃದ್ಧಿ ಹಠಾತ್ತನೆ ಉಂಟಾಗದೆ, ಕ್ರಮಕ್ರಮವಾಗಿ ಆಗುತ್ತದೆ. ಸಾಕಷ್ಟು ಬೆಳೆಯುವವರೆಗೆ ಗರ್ಭಚೀಲ ಬಿರಿಯುವುದಿಲ್ಲ ಮತ್ತು ಪೂರ್ಣ ಅಂಗ ಬೆಳೆಯುವವರೆವಿಗೆ 'ಕಾರ್ಪಸ್ ಲೂಟಿಯಂ'ನ (Corpus lutem) ರಚನೆಯಾಗುವುದಿಲ್ಲ. ಟ್ಯುನಿಕ ಅಲ್ಬುಜೀನಿಯದ (Tunica albuginea) ತಳಭಾಗದಲ್ಲಿ ಪ್ರಾಥಮಿಕ ಕೋಶಗಳು ದೊಡ್ಡ ಕೋಶಗಳೊಡನೆ ಇರುತ್ತವೆ. ಬಾಲ್ಯಾವಸ್ಥೆಯಲ್ಲಿ ಗ್ರಾಫಿನ್ ಅಂಡಾಶಯ ಕೋಶವು ಅಭಿವೃದ್ಧಿಹೊಂದಿದರೂ, ಸಹಜ ಗುಣವಳಿದು ಬೀಜಕೋಶ

ಗಳು ಹೊರಬರುವುದಿಲ್ಲ. ಪ್ರಾಯಕ್ಕೆ ಬಂದಾಗ ಮಾತ್ರ ಕೋಶಗಳು ಮೇಲ್ಮೈಗೆ ಬಂದು ಅಂಡಾಣುವನ್ನು ಹೊರಹಾಕುತ್ತವೆ. ಆದುದರಿಂದ, ಮೈನೆರೆಯುವ ಸ್ಥಿತಿಯು ಅನಿರೀಕ್ಷಿತ ಉತ್ಕಟ ಪರಿಸ್ಥಿತಿಯಾಗಿರದೆ ಒಂದು ಕ್ರಮಬದ್ಧ ವಿಧಾನವಾಗಿರುತ್ತದೆ. ವಿಜ್ಞಾನಿಗಳು ಮೊದಲು ಕೋಶವು ಬಿರಿಯುವ ಅಥವಾ ಮೊದಲ ಅಂಡಾಣುವಿಕೆಯ ಬಗ್ಗೆ ಸರಿಯಾದ ವಿವರಣೆ ಕೊಡುವುದರಲ್ಲಿ ವಿಫಲರಾಗಿದ್ದಾರೆ. ಈ ವಿಫಲತೆಗೆ ಒಂದು ಗೊತ್ತಾದ ವಯಸ್ಸಿನಲ್ಲೇ ಮೈನೆರೆಯಬೇಕೆಂಬ ನಿಯಮವಿಲ್ಲದೆ, ಕೋಶದ ಚೋದಕ ದ್ರವಗಳು ಸಾಕಷ್ಟು ದ್ರವಿಸಿದಾಗ ಮಾತ್ರವೇ ಮೈನೆರೆಯುವುದು ಕಾರಣವಾಗಿದೆ ಎಂದು ಹೇಳಬಹುದು. ಪ್ರಾಯದ ಸಮಯದಲ್ಲಿ ಜನನೇಂದ್ರಿಯದ ಸುತ್ತ ಪೂರ್ಣ ವಾಗಿ ಕಾಣಿಸಿಕೊಳ್ಳುವ ರೋಮ, ಅಲ್ಲದೆ ಪ್ರಾಯ ಮತ್ತು ವಿವಾಹಯೋಗ್ಯ ಕಾಲ ದಲ್ಲಿ ಉಂಟಾಗುವ ಅವ್ಯಕ್ತ ಸ್ಥಿತಿ—ಇವು ಮುಟ್ಟಿನ ಅಂಡಾಣುಗಳ ವಿಕಸನವನ್ನು ತೋರಿಸುತ್ತವೆ. ಆದುದರಿಂದಲೇ ಮಹಿಳೆಯರಲ್ಲಿ ನಿಯತಕಾಲಿಕ ಕ್ಷೋಭೆಯು ಹಲವು ತೊಡರುಗಳಿಂದ ಕೂಡಿರುತ್ತದೆ. ಈ ಮೇಲಿನ ಅವಧಿಯಲ್ಲಿಯೇ ಲೈಂಗಿಕ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ.

ರಜಸ್ಸಿನ ರಕ್ತದಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸವಿರುತ್ತದೆ. ವ್ಯಕ್ತಿಯ ದೇಹ ರಚನೆಯನ್ನು ಈ ವ್ಯತ್ಯಾಸ ಅವಲಂಬಿಸಿರುತ್ತದೆ. ಚೀಣಾದಲ್ಲಿನ ವೈದ್ಯಕೀಯ ತಜ್ಞ ದಾಬ್ರೀ, ಸ್ತ್ರೀಯರಲ್ಲಿ ಹದಿನಾಲ್ಕನೇ ಅಥವಾ ಹದಿನೈದನೇ ವಯಸ್ಸಿನಿಂದ ಋತು ಪ್ರಾರಂಭವಾಗಬಹುದೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತ ಪಡಿಸಿದ್ದಾರೆ. ರಕ್ತಸ್ರಾವವು ಸುಮಾರು 2½ ದಿನಗಳಿಂದ ನಾಲ್ಕು ದಿನಗಳವರೆವಿಗೆ ಹರಿಯುವುದಲ್ಲದೆ, ಪ್ರತಿ ಮೂವತ್ತು ದಿನಗಳಿಗೊಮ್ಮೆ (ಗರ್ಭವತಿಯರಾಗುವ ಕಾಲವನ್ನು ಬಿಟ್ಟು) ಋತುಬಂಧದವರೆಗೆ ಕಾಣಿಸಿಕೊಳ್ಳುತ್ತದೆ. ರಕ್ತಸ್ರಾವದ ಅವಧಿ ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸಹೊಂದಿ, ಕೆಲವೊಮ್ಮೆ ಅವ್ಯವಸ್ಥಿತವಾಗಿ ಆಗುವುದೂ ಉಂಟು. ರಕ್ತಸ್ರಾವ ಆಂತರಿಕ ಸ್ಥಿತಿಗತಿಗಳಿಗನುಸಾರವಾಗಿ ವಿವಿಧ ರೀತಿಯದಾಗಿರುತ್ತದೆ. ಶುದ್ಧ ಹೊಳಪಿನ ಕೆಂಪುಬಣ್ಣದ ಮುಟ್ಟು ವ್ಯಕ್ತಿಯು ಆರೋಗ್ಯಕರವಾಗಿರುವುದನ್ನು ಸೂಚಿಸುತ್ತದೆ. ಶೀತದ ದೇಹವೇನಾದರೂ ಆಗಿದ್ದರೆ ಋತು ಬಿಳಿಯ ಬಣ್ಣದಿಂದ ಕೂಡಿದ್ದು ದೇಹದ ನಿಶ್ಯಕ್ತತೆಯನ್ನು ಸೂಚಿಸುತ್ತದೆ. ದೇಹವೇನಾದರೂ ಉಷ್ಣದ್ದಾಗಿದ್ದರೆ ರಜಸ್ಸು ಕಪ್ಪಗಿರುತ್ತದೆ. ರಕ್ತಸ್ರಾವ ಹಳದಿ ಬಣ್ಣದಿಂದ ಕೂಡಿದ್ದರೆ ಮೈಯಲ್ಲಿರಬಹುದಾದ ವಿಪರೀತ ಪಿತ್ತರಸವನ್ನೂ, ನೀಲಿ ಬಣ್ಣದಿಂದ ಕೂಡಿದ್ದರೆ ಮುಟ್ಟಿನ ಅವಧಿ ಹೆಚ್ಚಾಗುವುದರಿಂದ ಉಂಟಾಗುವ ಶೈತ್ಯ ವನ್ನೂ ತೋರಿಸುತ್ತದೆ.

ಮುಟ್ಟಿನ ರಕ್ತದ ಜೊತೆಗೆ ದೇಹದ ಅನೇಕ ಪ್ರಮುಖ ದ್ರವಗಳೂ ನಾಶವಾಗು ತ್ತವೆ. ನಾಶವಾಗುವ ಈ ದ್ರವಗಳು ಸರಾಸರಿ 4 ರಿಂದ 5 ಔನ್ಸ್‌ಗಳವರೆವಿಗೆ

ಕೂಡಿರುತ್ತದೆಂದು ಅಂದಾಜುಮಾಡಲಾಗಿದೆ. ಈ ನಾಶವಾಗುವ ದ್ರವಗಳ ಪ್ರಮಾಣದಲ್ಲಿ ಹೆಂಗಸಿಂದ ಹೆಂಗಸಿಗೆ ವ್ಯತ್ಯಾಸವಿರುತ್ತದೆ. ಜೊಂಡೆಕ್ ಮತ್ತು ಸ್ಟಿಕಲ್ ಎಂಬ ವೈದ್ಯಕೀಯ ತಜ್ಞರು ಮುಟ್ಟಿನ ರಕ್ತವನ್ನು ಪರೀಕ್ಷಿಸಿ ಈ ಮುಂದೆ ಕಾಣಿಸಿರುವ ವಿಷಯಗಳನ್ನು ಹೊರಗೆಡವಿದ್ದಾರೆ. ಸ್ತ್ರೀ ದೇಹದ ಇತರ ಭಾಗಗಳಿಂದ ತೆಗೆದ ರಕ್ತವನ್ನು ಮುಟ್ಟಿನ ರಕ್ತದೊಂದಿಗೆ ಹೋಲಿಸಿದಾಗ ಮುಟ್ಟಿನ ರಕ್ತದಲ್ಲಿ ಈ ಅಂಶಗಳು ಕಾಣುತ್ತವೆ.[೩]

(1) ಒಲಿಗೊಸೈಥೊಯೂರಿಯ (Oligocythoeuria) : ಸುಮಾರು 30,00,000 ಕೆಂಪು ರಕ್ತಕಣಗಳಿಗೆ ಸುಮಾರು 3,000 ಬಿಳಿಯ ರಕ್ತಗಳು ಇದ್ದು, ಬಿಳಿಯ ರಕ್ತಕಣಗಳಲ್ಲಿ ಲಿಂಫೊಸೈಟ್‌ಗಳು (Lymphocytes) ನ್ಯೂಟ್ರೋ-ಫಿಲಸ್‌ಗಳಿಗಿಂತ (Neutrophilus) ಹೆಚ್ಚಾಗಿರುವುದು ಕಂಡುಬಂದಿದೆ.

(2) ರಕ್ತವರ್ಣಜನಕಗಳ ಇಳಿತ : ಕೆಂಪು ರಕ್ತಕಣಗಳಲ್ಲಿಯ ವರ್ಣದ್ರವ ಇಳಿತವು ಎರಿತ್ರೋಸೈಟ್ ಕಣಗಳ (Erythrocyte) ಇಳಿತಕ್ಕಿಂತ ಕಡಿಮೆ ಇರುತ್ತದೆ.

(3) ದೈಹಿಕ ಲಕ್ಷಣಗಳ ಇಳಿಮುಖ : ಹೈಡ್ರೇಮಿಯಾದ (Hydraemia) ಇರುವಿಕೆ. ಇದರ ವಿಶೇಷ ಲಕ್ಷಣವು ಗರ್ಭಾಶಯದ ಲೋಳಿಯೊಡನೆ ಸಂಪರ್ಕ ಹೊಂದಿದಾಗ ಮಾತ್ರ ಬದಲಾಗುತ್ತದೆ.

ಮೊಟ್ಟಮೊದಲು ರಜಸ್ವಲೆಯಾಗಲು ಅನೇಕ ಅಂಶಗಳು ಕಾರಣವಾಗಿವೆ. ವಾಯುಗುಣಕ್ಕೆ ಸಂಬಂಧಿಸಿದ ಕಾರಣಗಳು ಬೇರೆ ಎಲ್ಲಾ ಕಾರಣಗಳಿಗಿಂತ ಮುಖ್ಯವಾದುವು. ಭಾರತದಲ್ಲಿ ಹೆಣ್ಣುಮಕ್ಕಳು ಸರಿಸುಮಾರು ಹನ್ನೆರಡನೆಯ ವಯಸ್ಸಿನಲ್ಲಿ ಪುಷ್ಪವತಿಯರಾಗುತ್ತಾರೆ. ಇಟಲಿ ದೇಶದಲ್ಲಿ ಹುಡುಗಿಯರು ತಮ್ಮ ಹದಿನಾಲ್ಕು ಅಥವಾ ಹದಿನೈದನೆಯ ವಯಸ್ಸಿನಲ್ಲಿ ಋತುಮತಿಯರಾಗುತ್ತಾರೆ. ಭೂಮಧ್ಯ ರೇಖೆಯ ಹತ್ತಿರವಿರುವ ದೇಶಗಳಲ್ಲಿ ಬಾಲಿಕೆಯರು ಬಹುಬೇಗ ಪ್ರಾಯಕ್ಕೆ ಬರುತ್ತಾರೆ. ಸಮುದ್ರದಿಂದ ಬಹುದೂರವಿರುವ ಜನರಲ್ಲಿ ಮುಟ್ಟು ಬೇಗನೆ ಪ್ರಾರಂಭವಾಗುವಲ್ಲಿ, ಸಮುದ್ರತೀರ ಪ್ರದೇಶದ ಜನರಲ್ಲಿ ಹೆಣ್ಣು ಮಕ್ಕಳು ನಿಧಾನವಾಗಿ ಋತುಮತಿಯರಾಗುತ್ತಾರೆ.

ಎನ್‌ಜೆಲ್‌ಮನ್‌ರವರು[೪] ವಿವಿಧ ದೇಶಗಳ ಜನರಲ್ಲಿ, ಹೆಣ್ಣು ಮಕ್ಕಳು ಬೇಗ ಋತಿಮತಿಯರಾಗಲು ವಾಯುಗುಣ ಹೇಗೆ ಸಹಾಯ ಮಾಡುವುದೆಂಬುದನ್ನು ತಮ್ಮ ಪರಿಶೋಧನೆಗಳ ಮೂಲಕ ತೋರಿಸಿದ್ದಾರೆ—

| | ಪರಿಶೋಧನೆಯ ಸಂದರ್ಭಗಳು : (ಬಾಲಿಕೆಯರ ಸಂಖ್ಯೆ) | ಮೈನೆರೆಯುವ ಸರಾಸರಿ ವಯಸ್ಸು |
|---|---|---|
| ಅತ್ಯಂತ ಶೀತ ಪ್ರದೇಶದ ಜನರಲ್ಲಿ (ಉತ್ತರ ಧ್ರುವ) | 624 | 14·6 |
| ಆರ್ಟಿಕ್ ಪ್ರದೇಶದ ಇಂಡಿಯನ್ಸ್ ಜನಾಂಗದಲ್ಲಿ | 500 | 12·6 |
| ಸೌಮ್ಯವಾತವರಣದ ಯೂರೋಪ್ ಜನರಲ್ಲಿ | 58,737 | 15·5 |
| ಡೆನ್ಮಾರ್ಕ್ ಮತ್ತು ನಾರ್ವೆ ದೇಶದ ಜನರಲ್ಲಿ | 8,943 | 16·5 |
| ಜರ್ಮನಿ ದೇಶದ ಜನರಲ್ಲಿ | 21,258 | 16 |
| ಇಂಗ್ಲೆಂಡ್ ದೇಶದವರಲ್ಲಿ | 12,247 | 15 |
| ಉತ್ತರ ಅಮೆರಿಕಾದಲ್ಲಿ | 10,531 | 13·9 |
| ಉತ್ತರ ವಲಯ ಮತ್ತು ಅಧೀನ ಉತ್ತರ ವಲಯ | 2,733 | 14·8 |
| ದಕ್ಷಿಣ ಏಷ್ಯಾ ಭಾಗದ ಜನರಲ್ಲಿ | 1,140 | 12·9 |
| ಉಷ್ಣ ಪ್ರದೇಶಗಳಲ್ಲಿ | 1,593 | 15·8 |

ಈ ಮೇಲಿನ ತಃಖ್ತೆಯು ಒಂದೇ ಹವಾಗುಣವಿರುವ ಒಂದು ದೇಶದಿಂದ ಮತ್ತೊಂದು ದೇಶಕ್ಕೆ ಇರುವ ಅಂತರವನ್ನು ತೋರಿಸುವುದಲ್ಲದೆ, ಒಂದೇ ಪ್ರದೇಶದ ಜನರಲ್ಲಿರುವ ವ್ಯತ್ಯಾಸವನ್ನೂ ತೋರಿಸುತ್ತದೆ. ಹವಾಗುಣ ಒಂದೇ ಪ್ರಥಮ ರಜಸ್ಸಿಗೆ ಕಾರಣವಲ್ಲವೆಂಬ ಅಂಶವನ್ನು ಇದು ಶೃತಪಡಿಸುತ್ತದೆ.

ಹುಡುಗಿಯರು ಸರಾಸರಿಯಾಗಿ, ಸ್ವೀಡಿಷ್ ಲಾಪ್ಲಾಂಡ್‌ನಲ್ಲಿ 18ನೇ ವಯಸ್ಸಿನಲ್ಲೂ, ಓಸ್ಲಾದಲ್ಲಿ 16 ವರ್ಷ 9 ತಿಂಗಳು 25 ದಿನಗಳಲ್ಲೂ, ಸ್ಟಾಕ್‌ಹೋಂನಲ್ಲಿ 15 ವರ್ಷ 6 ತಿಂಗಳು 22 ದಿನಗಳಲ್ಲೂ, ಕೋಪನ್‌ಹೇಗನ್‌ನಲ್ಲಿ 16 ವರ್ಷ 8 ತಿಂಗಳು 12 ದಿನಗಳಲ್ಲೂ, ಬರ್ಲಿನ್‌ನಲ್ಲಿ 15 ವರ್ಷ 7 ತಿಂಗಳು 6 ದಿನಗಳಲ್ಲೂ, ವಿಯೆನ್ನಾದಲ್ಲಿ 15 ವರ್ಷ 8 ತಿಂಗಳು 15 ದಿನಗಳಲ್ಲೂ, ಮ್ಯಾಂಚೆಸ್ಟರ್‌ನಲ್ಲಿ 15 ವರ್ಷ 6 ತಿಂಗಳು 23 ದಿನಗಳಲ್ಲೂ, ಮರ್ಸೈಲ್ಸ್‌ನಲ್ಲಿ 13 ವರ್ಷ 11 ತಿಂಗಳು 11 ದಿನಗಳಲ್ಲೂ, ಅಕ್ಮಿನ್ (ಈಜಿಪ್ಟ್)ನಲ್ಲಿ 10ನೇ ವಯಸ್ಸಿನಲ್ಲೂ, ಸೀರಾಲಿಯೋವಿನಲ್ಲಿ 10ನೇ ವಯಸ್ಸಿನಲ್ಲೂ, ಪ್ಯಾರಿಸ್‌ನಲ್ಲಿ 15 ವರ್ಷ 5 ತಿಂಗಳು 18 ದಿವಸಗಳಲ್ಲೂ, ಕಲ್ಕತ್ತಾದಲ್ಲಿ 12 ವರ್ಷ 6 ತಿಂಗಳಲ್ಲೂ, ಲಿಯಾನ್ಸ್‌ನಲ್ಲಿ 14 ವರ್ಷ 5 ತಿಂಗಳು 29 ದಿವಸಗಳಲ್ಲೂ, ಟುಲಾನ್‌ನಲ್ಲಿ 14 ವರ್ಷ 4 ತಿಂಗಳು 5 ದಿನಗಳಲ್ಲೂ,

ಮಾಂಟ್‌ಪೆಲಿಯರ್‌ನಲ್ಲಿ 14 ವರ್ಷ 2 ತಿಂಗಳು 1 ದಿನದಲ್ಲೂ ಋತುಮತಿಯ ರಾಗುತ್ತಾರೆ. ಕ್ರೈಗರ್ ಎಂಬ ವಿಜ್ಞಾನಿ ನೀಡಿರುವ ಈ ಅಂಶಗಳು ಪ್ರಥಮ ರಜಸ್ಸಿನ ಕಾಣುವಿಕೆಗೆ ಕಾರಣವಾದ ಇತರ ಅಂಶಗಳ ಕಡೆ ನಮ್ಮ ಗಮನವನ್ನು ಕೊಂಡೊಯ್ಯುತ್ತವೆ.

ಜನಾಂಗಗಳ ಶಾರೀರಕ ಸ್ವಭಾವ ಮತ್ತು ದೇಶದ ಹವಾಮಾನ ಪ್ರಥಮ ರಜೋದರ್ಶನವನ್ನು ನಿರ್ಧರಿಸುತ್ತವೆಯೆಂಬುದು ಖಚಿತ ವಿಷಯ. ಕೆಲವು ಯಹೂದಿ ಮತ್ತು ಹಿಬ್ರ್ಯೂ ಜನಾಂಗದವರು ಯಾವ ದೇಶದಲ್ಲಿದ್ದರೂ, ಅವರಲ್ಲಿ ಬಾಲಿಕೆಯರು 13ನೇ ವಯಸ್ಸಿನಲ್ಲಿ ಋತುಮತಿಯರಾಗುತ್ತಾರೆ. ವಿವಿಧ ಜನಾಂಗದವರ ದೈಹಿಕ ಲಕ್ಷಣವೇ ಅಲ್ಲದೆ ಸಾಮಾಜಿಕ ಸ್ಥಿತಿಗತಿಗಳೂ ಪ್ರಥಮ ರಜಸ್ಸಿನ ಮೇಲೆ ತನ್ನ ವರ್ಚಸ್ಸನ್ನು ಬೀರುತ್ತದೆ. ಸಾಮಾಜಿಕ ಸ್ಥಿತಿಗತಿಗಳಲ್ಲಿ ಗ್ರಾಮೀಣ ಮಹಿಳೆಯರು ನಗರದ ಮಹಿಳೆಯರಿಗಿಂತ ಭಿನ್ನವಾಗಿರುತ್ತಾರೆ. ಅವರು ನಿರತರಾಗುವ ಉದ್ಯೋಗ ಗಳೂ ಕೂಡ ಪ್ರಥಮ ರಜಸ್ಸಿನ ತೋರಿಕೆಗೆ ಕಾರಣವಾಗಿರುತ್ತವೆ.

ವೈದ್ಯಕೀಯ ತಜ್ಞ ಬೆನ್‌ಸೆನ್‌ಜರ್, ಮಾಸ್ಕೋ ನಗರದಲ್ಲಿ 5,611 ಬಾಲಿಕೆಯರ ಮೇಲೆ ಈ ಬಗ್ಗೆ ಪ್ರಯೋಗ ನಡೆಸಿ, ಪ್ರಯೋಗಕ್ಕೀಡಾದ ಬಾಲಿಕೆಯ ರನ್ನು ಮೂರು ಪಂಗಡಗಳಾಗಿ ವಿಂಗಡಿಸಿದನು. ಮೊದಲನೆಯ ಪಂಗಡದಲ್ಲಿ 9ರಿಂದ 12 ವರ್ಷಗಳಲ್ಲಿ ರಜಸ್ವಲೆಯಾದವರೂ ಎರಡನೆಯ ಪಂಗಡದಲ್ಲಿ 13ರಿಂದ 16 ವರ್ಷ ಗಳಲ್ಲಿ ಋತುಮತಿಯರಾದವರೂ ಮತ್ತು ಮೂರನೆಯ ಪಂಗಡದಲ್ಲಿ 17ರಿಂದ 22ನೇ ವಯಸ್ಸಿನಲ್ಲಿ ಪುಷ್ಪವತಿಯರಾದವರೂ ಇದ್ದರು.[10] ಈ ಮೂರು ಗುಂಪಿನ ಜನರ ಸಾಮಾಜಿಕ ಸ್ಥಿತಿಗತಿಗಳನ್ನು ಪ್ರಯೋಗದಲ್ಲಿ ಗಣನೆಗೆ ತೆಗೆದುಕೊಳ್ಳಲಾಗಿತ್ತು. ಮೊದಲನೆಯ ಪಂಗಡದಲ್ಲಿ ಉತ್ತಮ ಉದ್ಯೋಗಗಳಲ್ಲಿ ಕಾರ್ಯನಿರತರಾಗಿದ್ದ ಪರದೇಶ ದವರೂ, ಎರಡನೆಯದರಲ್ಲಿ ವರ್ತಕರು ಅಥವಾ ವೈದಿಕ ವರ್ಗದವರೂ ಮತ್ತು ಮೂರನೆಯ ಪಂಗಡದಲ್ಲಿ ಕೇವಲ ರೈತರು ಮಾತ್ರ ಇದ್ದರು.

ಪ್ಯಾರಿಸ್ ನಗರದ ಜನರಲ್ಲಿ ಸರಾಸರಿಯಾಗಿ ಮಧ್ಯಮ ವರ್ಗದ ಹುಡುಗಿಯರು 15 ವರ್ಷ 2 ತಿಂಗಳಿಗೂ, ಶ್ರಮಜೀವಿಗಳ ವರ್ಗದ ಬಾಲಕಿಯರು 15 ವರ್ಷ 10 ತಿಂಗಳಿಗೂ, ಸೇವಾವೃತ್ತಿ ಮನೆಗೆಲಸ ಮೊದಲಾದ ಕೆಲಸಗಳಲ್ಲಿ ನಿರತರಾದವರಲ್ಲಿ (ದಾಸಿಯರು) 16 ವರ್ಷ 2 ತಿಂಗಳಿಗೂ ಮತ್ತು ಕೈಗಾರಿಕೆಗಳಲ್ಲಿ ಕೆಲಸಮಾಡುವ ಸ್ತ್ರೀಯರು 16 ವರ್ಷ $1\frac{1}{8}$ ತಿಂಗಳಿಗೂ ಋತಿಮತಿಯರಾಗುವರೆಂದು ಬ್ರಯರಿ-ಡ-ಬಾಯ್ಸ್ ಅವರು ತಿಳಿಸುತ್ತಾರೆ.

ಈ ಮುಂದೆ ಕೊಟ್ಟಿರುವ ದೃಷ್ಟಾಂತವು ಹೇಗೆ ಒಂದೇ ಸಾಮಾಜಿಕ ಸ್ಥಿತಿಗತಿಗೆ ಸೇರಿದ ತರುಣಿಯರು ಏಕಕಾಲದಲ್ಲಿ ಋತುಮತಿಯರಾಗುವರೆಂಬುದನ್ನು ತೋರಿಸು ತ್ತದೆ: ಇಬ್ಬರು ಜಪಾನಿ ವೇಶ್ಯೆಯರು ಅವಳಿಯಾಗಿ ಹುಟ್ಟಿ ಒಂದೇ ವಾತಾವರಣದಲ್ಲಿ

ಬೆಳೆದರು. ಇಬ್ಬರೂ ಒಂದೇ ದಿನ ಶಾಲೆಗೆ ಸೇರಿ, ಒಂದೇ ದಿನ ಶಾಲೆಯಿಂದ ಹೊರ ಬಂದರಲ್ಲದೆ, ಒಂದೇ ದಿನ ವೇಶ್ಯಾವಾಟಿಕೆಗೆ ಸೇರಿ, ಇಬ್ಬರೂ ಒಂದೇ ದಿವಸ ಋತು ಮತಿಯರಾದರು.

ಮುಟ್ಟಾದ ಕಾಲದಲ್ಲಿ ಸ್ತ್ರೀಯರು ಅಶುಚಿಯಾಗಿರುತ್ತಾರೆಂದು ನಂಬಿಕೆ. ಈ ಅವಧಿಯಲ್ಲಿ ದೇಹವು ಅನಾರೋಗ್ಯದಿಂದ ಕೂಡಿರುತ್ತದೆ. ವಿಯನ್ನಾದ ವೈದಕೀಯ ಸಂಘವೊಂದರಲ್ಲಿ ಭಾಷಣಮಾಡುತ್ತಾ ಪ್ರಾಧ್ಯಾಪಕ ಬಿ. ಶ್ಚಿಕ್ ಅವರು[11] ತಮ್ಮ ಪರಿಶೋಧನೆಯೊಂದನ್ನು ಸಭಿಕರಿಗೆ ತಿಳಿಸಿದರು: ಒಮ್ಮೆ ಅವರು ತಮ್ಮ ಸೇವಕಿಗೆ ಹೂವಿನ ಕುಂಡಕ್ಕೆ ನೀರು ತುಂಬಿ ಅದರಲ್ಲಿ ಗುಲಾಬಿಯ ಗುಚ್ಛವನ್ನಿಟ್ಟು ಶೃಂಗರಿಸು ವಂತೆ ಹೇಳಿದರು. ಆಗ ಸೇವಕಿ ರಜಸ್ಸಿನ ಅವಧಿಯಲ್ಲಿದ್ದಳು. ಮಾರನೆಯ ಬೆಳಗ್ಗೆ ಆಕೆ ಜೋಡಿಸಿದ್ದ ಹೂಗಳು ಸೊರಗಿ ಉದುರಿಹೋಗಿದ್ದವು. ಬೆರಗುಗೊಂಡ ಪ್ರಾಧ್ಯಾಪಕರು ಇದಕ್ಕೆ ಕಾರಣವನ್ನು ಕಂಡುಹಿಡಿಯಲು ಯೋಚಿಸಿದರು. ಮತ್ತೊಮ್ಮೆ ರಜಸ್ಸಿನ ಅವಧಿಯಲ್ಲಿದ್ದ ಒಬ್ಬ ಹುಡುಗಿಯನ್ನೂ ಮತ್ತು ಸಾಮಾನ್ಯ ಸ್ಥಿತಿಯಲ್ಲಿದ್ದ ಮತ್ತೊಬ್ಬ ಹುಡುಗಿಯನ್ನೂ ಹೂವಿನ ಗೊಂಚಲುಗಳನ್ನು ಕೈಯಲ್ಲಿ ಹಿಡಿದಿರುವಂತೆ ಹೇಳಿ, ಅವರು ಹಿಡಿದಿದ್ದ ಹೂಗಳನ್ನೇ ಗಮನಿಸಿದರು. ಕೆಲವು ಘಂಟೆಗಳ ನಂತರ ರಜಸ್ಸಿನ ಅವಧಿಯಲ್ಲಿದ್ದ ಹುಡುಗಿಯ ಕೈಯಲ್ಲಿದ್ದ ಹೂಗಳು ಬಾಡಿ, ಮತ್ತೊಬ್ಬ ಹುಡುಗಿಯ ಕೈಯಲ್ಲಿದ್ದ ಹೂವುಗಳು ಬಾಡದೆ ನವಸುಮಗಳಂತೆಯೇ ಇದ್ದದ್ದನ್ನು ಪ್ರಾಧ್ಯಾಪಕರು ಗಮನಿಸಿದರು.

ಹಿಂದಿನ ಕಾಲದಲ್ಲಿ ಮುಟ್ಟಾದ ಹೆಂಗಸರನ್ನು ಅಪಶಕುನಗಳೆಂದು ಭಾವಿಸು ತ್ತಿದ್ದರು. ಮುಟ್ಟಿನ ಕಾಲದಲ್ಲಿ ಪ್ರಕೃತಿಯಲ್ಲಿರಬಹುದಾದ ದುಷ್ಟಶಕ್ತಿಗಳು ಮಲಿನರಾದ ಹೆಂಗಸರ ದೇಹವನ್ನು ಪ್ರವೇಶಿಸಿ, ಅವರನ್ನು ಮಾತೆಯರಾಗಲು ಅನರ್ಹರನ್ನಾಗಿ ಮಾಡುವುವೆಂದು ಹೆದರಿ, ಅವರನ್ನು ಏಕಾಂತದಲ್ಲಿರಿಸುತ್ತಿದ್ದರಲ್ಲದೆ, ದುಷ್ಟಶಕ್ತಿಗಳಿಂದ ಅವರನ್ನು ರಕ್ಷಿಸಲು ವಿವಿಧ ಸಂಸ್ಕಾರಗಳನ್ನೂ ಮಾಡಿಸುತ್ತಿದ್ದರು. ಈ ಪದ್ಧತಿ ಆದಿವಾಸಿಗಳಲ್ಲೂ ಕಂಡುಬರುತ್ತದೆ.

ಮುಟ್ಟಿನ ರಕ್ತವನ್ನು ಔಷಧವನ್ನಾಗಿ ಉಪಯೋಗಿಸುತ್ತಿದ್ದರೆಂಬುವುದಕ್ಕೆ ಹಲವಾರು ಪುರಾವೆಗಳಿವೆ. ವಾತರೋಗ, ಗಲಗಂಡ, ಗಂಟಲಿನ ವ್ರಣ, ಹುಚ್ಚು ನಾಯಿ ಕಡಿತ, ಅಪಸ್ಮಾರ ಹಾಗೂ ಕೆಲವು ತಲೆನೋವುಗಳೇ ಮುಂತಾದ ಕಾಯಿಲೆ ಗಳಿಗೆ[12] ಆ ನೆತ್ತರನ್ನು ಉಪಯೋಗಿಸುತ್ತಿದ್ದರು. ಸ್ಟೈಂಟ್ ಹಿಲ್ಡಿಗಾರ್ಡೆ ಎಂಬ ವೈದ್ಯ ತೊನ್ನುರೋಗಕ್ಕೆ ಹೇರಳವಾಗಿ ರಜಸ್ಸಿನ ರಕ್ತಸ್ನಾನವನ್ನು ಮಾಡಿಸಲು ಸಲಹೆಮಾಡಿದ್ದನು. ಸಾಕ್ಸೆನ್ಸ್, ಟ್ರಿನ್ಸಿಲ್‌ವೇನಿಯಾ ಜನಾಂಗದವರು ಮತ್ತು ಜಿಪ್ಸಿಗಳು ದುರ್ಬಲ ಹಾಗೂ ನಿಶ್ಯಕ್ತರಾದ ಮಕ್ಕಳನ್ನು ಮುಟ್ಟಿನ ರಕ್ತದಿಂದ ಸ್ನಾನ ಮಾಡಿಸುತ್ತಿದ್ದರು. ಆದಿವಾಸಿ ಜನರು–"ಶುಭವೆಲ್ಲವೂ ಹಿಂತಿರುಗಲಿ, ಮುಂದೆ

ಕೆಡುಕಾಗದಿರಲಿ"[13] ಎಂದು ರೋದಿಸುವ ನಾಯಿಗಳ ಮೇಲೆ ರಜಸ್ಸಿನ ರಕ್ತವನ್ನು ಸುರಿಯುತ್ತಿದ್ದರು.

ಸ್ತ್ರೀಯರು ಆಕಾರ ಮತ್ತು ಗಾತ್ರದಲ್ಲಿ ಸಣ್ಣಗಿರುವುದರಿಂದ ಪುರುಷರಷ್ಟು ಶಕ್ತಿಯುತರಾಗಿಲ್ಲವೆಂದು ಹೇಳುವುದು ಸರ್ವೇಸಾಮಾನ್ಯ. ಹೆಂಗಸರು ನಿಯಮಿತ ಕ್ಷೋಭೆಗಳಿಗೆ ತುತ್ತಾಗಿರುವುದೂ, ಅವರ ಮಾಂಸಖಂಡಗಳು ಮೃದುವಾಗಿರುವುದೂ ಹಾಗೂ ಅವರ ಜೀವನದಲ್ಲಿ ಮಕ್ಕಳನ್ನು ಹೆರುವುದು ಒಂದು ಪ್ರಮುಖ ಘಟನೆಯಾಗಿರುವುದೂ ಈ ಅಭಿಪ್ರಾಯಕ್ಕೆ ಕಾರಣವಿರಬಹುದು. ಆದರೆ, ಸ್ತ್ರೀಯು ಪುರುಷನಷ್ಟೇ ಬಲಶಾಲಿ ಎಂಬುದನ್ನು ಸಮರ್ಥಿಸಲು ಸಾಕಷ್ಟು ಕಾರಣಗಳಿವೆ. ಅಶಾಂತಿ, ನಾಟೇಟ ಮತ್ತು ಸೋಮಾಲಿಯಾದ ಹೆಂಗಸರು ಶಕ್ತಿಯುತ ಮಾಂಸಖಂಡಗಳಿಂದ ಕೂಡಿದ್ದು, ಪುರುಷರಿಗಿಂತ ಗಟ್ಟಿಯಾಗಿರುತ್ತಾರೆ. ಕಿಕುಯೂ ಜನರು ತಮ್ಮ ತಾಟ್‌ಲೆಡ್ಜ್ ಪಂಗಡದ ಪುರುಷರು ಭಾರ ಹೊರುವುದರಲ್ಲಿ ಹೆಂಗಸರಿಗಿಂತ ಕೀಳು ಎಂದು ಹೇಳಿಕೊಳ್ಳುತ್ತಾರೆ. ಆ ಪಂಗಡದ ಪುರುಷರು ಎತ್ತರವಾಗಿ, ಶಕ್ತಿವಂತರಾಗಿದ್ದರೂ ತಮ್ಮ ಹೆಂಡಂದಿರು ಹೊರುವಷ್ಟು ಸೌದೆಯನ್ನು ಹೊರಲಾರರು. ಆ ಪಂಗಡದ ಸ್ತ್ರೀಯರು ಭಾರವಾದ ಹೊರೆಗಳನ್ನು ಹೊತ್ತು ಎಷ್ಟು ದೂರವಾದರೂ ನಡೆದುಕೊಂಡೇ ಹೋಗುತ್ತಾರೆ. ಗಯಾನದ ಹೆಂಗಸರು ತಲೆಯ ಮೇಲೆ ತೂಕ ಹೊತ್ತು ಜೋರಾಗಿ ಓಡಬಲ್ಲರು. ನೈಜೀರಿಯಾದ ಐಯಾಶಿ ಹೆಂಗಸರು ಪುರುಷರಿಗಿಂತ ದೈಹಿಕವಾಗಿ ಗಟ್ಟಿಮುಟ್ಟಾಗಿರುತ್ತಾರೆ. ಲಾಲ ಬುಡಕಟ್ಟಿನ ಹೆಂಗಸರು ಗಂಡಸರಿಗಿಂತ ಶಕ್ತಿಯುತರಾಗಿರುತ್ತಾರೆ. ಕ್ಯಾಲಿಫೋರ್ನಿಯಾದ ದೇಶೀಯ ಜನರಲ್ಲಿ ಗಂಡಸರು ಎತ್ತರವಾಗಿ ಕಂಡರೂ, ಹೆಂಗಸರು ದೈಹಿಕವಾಗಿ ಶಕ್ತಿಯುತವಾಗಿರುತ್ತಾರೆಂದು ಅಡ್ಮಿರಲ್ ವ್ರಾಂಗೆಲ್ ತಿಳಿಸಿದ್ದಾರೆ. ಕೆನಡಾದ ಇಂಡಿಯನ್ ಜನರಲ್ಲಿ ಇಬ್ಬರು ಗಂಡಸರು ಹೊರುವ ಭಾರವನ್ನು ಒಬ್ಬಳೇ ಹೆಂಗಸು ಹೊರಬಲ್ಲಳು. ಚಿರೋಕಿ ಜನರಲ್ಲಿ, 50 ವರುಷ ವಯಸ್ಸಿನ ಕಿರಿಯ ಮಗನಿರುವ ಒಬ್ಬ ಮುದುಕಿ ಪ್ರತಿದಿನ ತನ್ನ ಬೆನ್ನಿನ ಮೇಲೆ 200 ಪೌಂಡುಗಳಷ್ಟು ತೂಕವನ್ನು ಹೊತ್ತು ಎರಡು ಮೈಲಿಗಳಷ್ಟು ದೂರ ಹೋಗಬಲ್ಲಳಂತೆ. ಫ್ಯೂಜಿಯ, ಅರೇಬಿಯ ಮತ್ತು ಟಿಬೆಟ್ ಪ್ರಾಂತ್ಯಗಳಲ್ಲಿ ಹೆಂಗಸರು ಗಂಡಸರಿಗಿಂತ ಬಲಿಷ್ಠರು ಮತ್ತು ದೃಢಕಾಯರಾಗಿರುತ್ತಾರೆ. ಭೂತಾನದಲ್ಲಿ ಹೆಂಗಸು ಒಬ್ಬ ಗಂಡಸನ್ನು ಹೆಗಲಮೇಲೆ ಹೊತ್ತುಕೊಂಡು ಪ್ರಯಾಣ ಮಾಡಬಲ್ಲಳು. ಡಾಯಕ್ ದೇಶದ ಹೆಂಗಸರ ಗುಂಪೊಂದು ಮಲೆಯಾದ ಪುರುಷರ ಗುಂಪೊಂದನ್ನು ಸೋಲಿಸುವಷ್ಟು ಸಾಮರ್ಥ್ಯವನ್ನು ತೋರಿಸಿದ್ದಾರೆ. ಮಲೇಶಿಯಾದ ಸ್ತ್ರೀ, ತಲೆಯ ಮೇಲೆ ಸೌದೆ, ಬೆನ್ನಿನ ಮೇಲೆ ಮಗು, ಭುಜದ ಮೇಲೆ ನೀರಿನ ಪಾತ್ರೆಗಳನ್ನು ಇಟ್ಟುಕೊಂಡು ನಡೆಯಬಲ್ಲಳು. ಆಸ್ಟ್ರೇಲಿಯಾದಲ್ಲಿ ಒಬ್ಬ ಗಂಡಸನ್ನು ಹೆಂಗಸು ಬಲವಾಗಿ ಹೊಡೆದು ಗಾಯಗೊಳಿಸುವುದು ಅಪೂರ್ವವಾದ

ಸಂಗತಿ ಅಲ್ಲ. ಬಂಟು ಜನರಲ್ಲಿ ಹೆಂಗಸು ಯಾರು, ಗಂಡಸು ಯಾರು ಎಂದು ಹಿಂದಿನಿಂದ ನೋಡಿದಾಗ ಗುರ್ತಿಸಲು ಸಾಧ್ಯವಾಗುವುದಿಲ್ಲ.

ಈ ಸಾಕ್ಷ್ಯಗಳಿಂದ ಸ್ತ್ರೀ ಪುರುಷರು ಶಕ್ತಿಯಲ್ಲಿ ಸಮಾನರೆಂದು ಹೇಳಲು ಸಾಧ್ಯವೆ? ಹಾಗೆ ಹೇಳಲಾಗುವುದಿಲ್ಲ. ಏಕೆಂದರೆ, ಹೆಂಗಸರು ಪುರುಷರಿಗಿಂತ ಬಲಿಷ್ಠರಾಗಿರುವ ಕೆಲವು ಸಂದರ್ಭ ವಿಶ್ವ ಜನಾಂಗಗಳಲ್ಲಿ ಇರಬಹುದು. ಆದರೆ, ಅವು ಕೇವಲ ಅಪವಾದಗಳು ಮಾತ್ರ.

ಸ್ತ್ರೀ ಪುರುಷರಲ್ಲಿ ಪರಸ್ಪರ ವ್ಯತ್ಯಾಸವಿರುತ್ತದೆ. ಈ ವ್ಯತ್ಯಾಸದಿಂದ ಅವರಲ್ಲಿ ಒಬ್ಬರಿಗಿಂತ ಮತ್ತೊಬ್ಬರು ಕೀಳೆಂದು ಹೇಳಲಾಗುವುದಿಲ್ಲ. ವ್ಯತ್ಯಾಸಗಳಿದ್ದರೂ, ಇಬ್ಬರೂ ಪೂರಕರಾಗಿರುತ್ತಾರೆ. ಒಬ್ಬರ ವಿಶಿಷ್ಟತೆ ಇನ್ನೊಬ್ಬರಲ್ಲಿಲ್ಲ. ಪುರುಷ ದುಡಿಯುವವನಲ್ಲದೆ ರಕ್ಷಕನೂ ಕೂಡ. ಅವನ ಶಕ್ತಿ ಯುದ್ಧ ಮತ್ತು ಸಾಹಸ ಕಾರ್ಯಗಳಿಗೆ ಮೀಸಲು. ಸ್ತ್ರೀ ಶಕ್ತಿಯು ಮನೆಯವ್ಯವಸ್ಥೆ ಮಾಡಿಕೊಂಡು ಗೃಹ ಜೀವನವನ್ನು ಸುಸೂತ್ರವಾಗಿ ನಡೆಸಲು ಯುಕ್ತವಾಗಿದೆ.

> "ನಕ್ಷತ್ರಗಳು ಸ್ತ್ರೀಯ ತಲೆ ಮೇಲಿರಬಹುದು
> ಮಿಣುಕುಹುಳು ಅವಳ ಪಾದದ ಹತ್ತಿರವಿರಬಹುದು
> ಆದರೆ ಅವಳೆಲ್ಲಿರುವಳೋ ಅಲ್ಲಿ ಮನೆ...."[14]

ಎಂದು ಕವಿ ರಸ್ಕಿನ್ ಹೇಳಿರುವುದಲ್ಲದೆ, ಒಬ್ಬರಿಗಿಂತ ಮತ್ತೊಬ್ಬರು ಹೆಚ್ಚು ಎಂದು ಹೇಳುವುದು ನಮ್ಮ ಭ್ರಾಂತಿ ಮತ್ತು ಅಜ್ಞಾನ ಎಂದಿದ್ದಾರೆ.

ಒಂದು ವಸ್ತುವನ್ನು ಇನ್ನೊಂದು ವಸ್ತುವಿನೊಡನೆ ಹೋಲಿಸುವಂತೆ, ಒಬ್ಬ ಹೆಂಗಸನ್ನು ಇನ್ನೊಬ್ಬ ಗಂಡಸಿಗೆ ಹೋಲಿಸುವುದು ಮೂರ್ಖತನವಾದೀತು. ಏಕೆಂದರೆ ಒಬ್ಬರಲ್ಲಿ ಇಲ್ಲದನ್ನು ಮತ್ತೊಬ್ಬರು ಹೊಂದಿರುತ್ತಾರೆ. ಒಬ್ಬರು ಮತ್ತೊಬ್ಬರಿಂದ ಪೂರ್ಣಗೊಳ್ಳುವುದಲ್ಲದೆ, ಅವರನ್ನು ತಾವೇ ಪೂರ್ಣಗೊಳಿಸುತ್ತಾರೆ. ಇಬ್ಬರ ಸಂತೋಷ ಮತ್ತು ಪರಿಪೂರ್ಣತೆ ಮತ್ತೊಬ್ಬರು ಏನು ಕೇಳಬಲ್ಲರೋ ಮತ್ತು ನೀಡಬಲ್ಲರೋ ಎಂಬುದರ ಮೇಲೆ ಅವಲಂಬಿಸಿರುತ್ತದೆ.[15]

**ಸಂದರ್ಭಸೂಚಿ :**


1. *Feminism :* by Weith-Knundsen, K. A., p. 31, Constable and Company, London, 1928.
2. *Ibid.*, p. 34.
3. *Ibid.*, p. 38.
4. *Women*, Vol. I : by Ploss, H. H., pp. 394–399, William Heinemann (Medical Books), Ltd., London, 1935.
5. *Op. Cit.*, H. H. Ploss, Vol. I, pp. 86–99.

6. *Ethics of Feminism:* A. R. Wadia, p. 20, George Allen and Unwin Ltd., London, 1928.
7. *Op. Cit.*, H. H. Ploss, p. 562.
8. *Op. Cit.*, H. H. Ploss, p. 590.
9. *Op. Cit.*, H. H. Ploss, p. 565.
10. *Op. Cit.*, H. H. Ploss, p. 567.
11. *Op. Cit.*, H. H. Ploss, pp. 590–591.
12. *Op. Cit.*, H. H. Ploss, p. 648.
13. *Op. Cit.*, H. H. Ploss, p. 649.
14. *Seasame and Lilies:* Ruskin House Edition—1925, p. 99.
15. *Ibid.*, p. 98.

## ಅಧ್ಯಾಯ ೩

# ಸ್ತ್ರೀ ಚೈತನ್ಯ

ಶರೀರದ ಮೇಲೆ ಮಾನಸಿಕ ಪ್ರಭಾವ ಎಷ್ಟಿದೆಯೊ, ಅಷ್ಟೇ ಲೈಂಗಿಕ ಪ್ರಭಾವವೂ ಇದೆ. ಶರೀರಶಾಸ್ತ್ರಜ್ಞರು ಮತ್ತು ಮನೋವಿಜ್ಞಾನಿಗಳು ದೇಹ ಮತ್ತು ಮನಸ್ಸನ್ನು ವಿಂಗಡಿಸುವ ದ್ವೈತತತ್ತ್ವವನ್ನು ತಪ್ಪು ಕಲ್ಪನೆ ಎಂದು ಸಾರಿದ್ದಾರೆ. ಅಂಥ ವಿಂಗಡಣೆ ಯಿಂದ ಅಸ್ಫುಟವಾಗಿ ಪ್ರತಿಪಾದನೆಯಾಗುವ ತತ್ತ್ವದಿಂದ ಪ್ರಾಯೋಗಿಕ ತಾರತಮ್ಯ ಗಳೂ ಉಂಟಾಗುತ್ತವೆ. ಮನೋವಿಜ್ಞಾನದ ಮತ್ತು ಶರೀರಶಾಸ್ತ್ರಗಳೆರಡರ ಮೂಲವಸ್ತು ಜೀವಿ. ಮಾನವನ ಶರೀರ ರಚನೆ ಮತ್ತು ಮಾನಸಿಕ ವರ್ತನೆ—ಇವು ಗಳ ಸಂಕೀರ್ಣ ಸ್ವಭಾವದ ಬಗ್ಗೆ ಶರೀರಶಾಸ್ತ್ರಜ್ಞ ಮತ್ತು ಮನೋವಿಜ್ಞಾನಿಗಳಲ್ಲಿ ಒಮ್ಮತವಿದೆ. ಆದುದರಿಂದ, ಲಿಂಗ ವಿಶಿಷ್ಟತೆ ಅಥವಾ ಲೈಂಗಿಕತ್ವದ ದ್ವಿರೂಪ ಮಾನಸಿಕವಾಗಿ ಮತ್ತು ದೈಹಿಕವಾಗಿ ಮಾನವನಲ್ಲಿ ಹರಡಿಕೊಂಡಿದೆ.[1] ಲೈಂಗಿಕ ಪ್ರವೃತ್ತಿ ದೈಹಿಕ ಲಕ್ಷಣದಂತೆ ಮಾನಸಿಕ ಲಕ್ಷಣವೂ ಕೂಡ.[2] ದೇಹದಲ್ಲಿ ಲೈಂಗಿಕ ಪ್ರವೃತ್ತಿ, ಅಂದರೆ ಲೈಂಗಿಕಾಕರ್ಷಣೆ, ಹೇಗೆ ಸ್ಪಷ್ಟವಾಗಿ ಹಾಗೂ ಸ್ವತಂತ್ರ ವಾಗಿರುತ್ತದೆಯೋ ಹಾಗೆಯೇ ಮನಸ್ಸಿನಲ್ಲೂ ಸ್ವತಂತ್ರವಾಗಿ, ಆದರೆ ಅನಿಶ್ಚಿತವಾಗಿ ಇರುವುದನ್ನು ಕಾಣಬಹುದು. ಅಡ್ಡದಾರಿಯಲ್ಲಿ ಹೊರಟ ಸ್ತ್ರೀ–ಪುರುಷರ ವ್ಯಕ್ತಿತ್ವ ಗಳಲ್ಲಿ ಲೈಂಗಿಕಾಕರ್ಷಣೆ ಮಾನಸಿಕವಾಗಿ ಹೆಚ್ಚು ಪ್ರಧಾನವಾಗಿರುವುದನ್ನು ಕಾಣ ಬಹುದು.

ದ್ವಿಲಿಂಗತ್ವದ ಅಂದರೆ ಸಂಯೋಜಿತ ಸ್ತ್ರೀ–ಪುರುಷ ಲಕ್ಷಣಗಳ ಬಗ್ಗೆ ನಾವು ಈಗಾಗಲೇ ಪ್ರಸ್ತಾಪಿಸಿದ್ದೇವೆ: ಹಲವು ಪುರುಷರು ಸ್ತ್ರೀ ಸಹಜವಾದ ಅಂಗಾಂಗಗಳ ಮೃದುತ್ವವನ್ನು ಹೊಂದಿರುತ್ತಾರೆ. ಅವರ ಮೇಲ್ತುಟಿಯ ಮೇಲೆ ರೋಮವಿರುವುದಿಲ್ಲ. ಶರೀರದ ವಿವಿಧ ಭಾಗಗಳಲ್ಲಿ ಕೊಬ್ಬಿನ ವಿತರಣೆ ಹೆಚ್ಚಾಗಿದ್ದು ಕಿರಿದಾದ ಎದೆ ಹೊಂದಿರುತ್ತಾರೆ. ಹೀಗೆಯೇ ಹಲವು ಸ್ತ್ರೀಯರಲ್ಲಿ ಪುರುಷರ ದೈಹಿಕ ಲಕ್ಷಣಗಳನ್ನು ಕಾಣಬಹುದು. ಈ ಕಾರಣದಿಂದ ಶರೀರಶಾಸ್ತ್ರಜ್ಞರು ಮತ್ತು ಮನೋವಿಜ್ಞಾನಿಗಳು ಸ್ತ್ರೀ–ಪುರುಷರಲ್ಲಿ ದ್ವಿಲಿಂಗತ್ವವಿದೆ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಈ ಆಧಾರದ ಮೇಲೆ ಸ್ತ್ರೀ–ಪುರುಷರಲ್ಲಿ ಶಾರೀರಕ ಅಪೇಕ್ಷೆಗಳು ಮತ್ತು ವ್ಯಕ್ತಿತ್ವದ ಮೌಲ್ಯಗಳು ಒಂದೇ ಪ್ರಮಾಣದಲ್ಲಿವೆಯೆಂದು ನಿಶ್ಚಯಿಸಲಾಗುವುದಿಲ್ಲ. ಸ್ತ್ರೀ–ಪುರುಷ ಲಕ್ಷಣಗಳು ಒಂದೇ ಸಮಾನವಾಗಿರುವ ವ್ಯಕ್ತಿಯನ್ನು ನಪುಂಸಕ ಇಲ್ಲವೆ ನಿರ್ಲಿಂಗ ವ್ಯಕ್ತಿ ಯೆಂದು ಪರಿಗಣಿಸಲಾಗದು.[3] ಅಂಥ ವ್ಯಕ್ತಿಯ ದೈಹಿಕ ರಚನೆ ಹೇಗೆ ಅಸಮವೋ

ಹಾಗೆಯೇ ಅವನ ಲೈಂಗಿಕ ವರ್ತನೆಯಲ್ಲಿಯೂ ವಕ್ರತೆ ಇರುತ್ತದೆ.[4] ಇದು ರೋಗ ವಿಜ್ಞಾನಕ್ಕೆ ಪ್ರಕೃತಿಸಿದ್ಧ ಸಮಸ್ಯೆ. ವ್ಯಕ್ತಿಯ ದೈಹಿಕ ಮತ್ತು ಬಾಹ್ಯರೂಪಿನಲ್ಲಿ ದ್ವಿಲೈಂಗಿಕ ಲಕ್ಷಣಗಳು ಸ್ಪಷ್ಟವಾಗಿ ಕಂಡುಬಂದಾಗ ಅಂಥ ಲಕ್ಷಣಗಳನ್ನು ದೈವದತ್ತ ಲಕ್ಷಣಗಳೆಂದು ಪರಿಗಣಿಸುತ್ತಾರೆ. ದೈವದತ್ತ ಲಕ್ಷಣಗಳನ್ನು ಕವಿಗಳು ಕಲೆಗಾರರು, ಆಧ್ಯಾತ್ಮವಾದಿಗಳು ಮುಂತಾದವರಲ್ಲಿ ಕಾಣಬಹುದು. ವೀಣೆಯಂತೆ ಪ್ರತಿಯೊಂದು ಸ್ಪರ್ಶಕ್ಕೂ ಪುಲಕಿತರಾಗುವ ವ್ಯಕ್ತಿಗಳು ಸಹಜವಾದ ವಿಷಯಗಳಿಗೆ ಸುಲಭವಾಗಿ ಮಣಿಯುತ್ತಾರೆ. ಇಂಥವರನ್ನು ಅರ್ಧನಾರೀಶ್ವರರೆನ್ನುತ್ತಾರೆ. ಇವರಿಗೆ ಭೂತ–ಭವಿಷ್ಯತ್ ಘಟನೆಗಳಲ್ಲಿ ನಂಬಿಕೆಯುಂಟು.

ಮಾನವನ ಅನೇಕ ಸೂಕ್ಷ್ಮ ಅಭಿರುಚಿಗಳನ್ನು ಅವನಲ್ಲಿ ನಿರಂತರವಾಗಿ ಪ್ರವಹಿಸುತ್ತಿರುವ ಸಮ್ಮಿಶ್ರ ಚೈತನ್ಯದಿಂದ ಅಳೆಯುತ್ತೇವೆ. ಏಕೆಂದರೆ, ಮಾನವ ವ್ಯಕ್ತಿತ್ವವು ಸಮಾನತೆ ಮತ್ತು ಸಾಮರಸ್ಯಗಳ ಸಂಯೋಜನೆ. ಮಾನವನ ವ್ಯಕ್ತಿತ್ವ ಅಸ್ತಿ–ಪೊರೆಯ, ಸ್ನಾಯು–ನರಗಳ, ದುಃಖ–ಸಂತೋಷಗಳ, ಬೇಕು–ಬೇಡಗಳ ಕಾವ್ಯ ವಿದ್ದಂತೆ. ಇದು ಮೂಲತಃ ಕಲೆಯ ಗೆಯ್ಮೆ. ಪ್ರಕೃತಿ ರೂಪಿಸುವ ಕಲೆಯು ಚಿತ್ರಕಾರನ, ಸಂಗೀತಗಾರನ, ನಾಟಕಕಾರನ ಇಲ್ಲವೇ ಕವಿಯ ಕಲೆಗಿಂತ ಏನೂ ಕಡಿಮೆಯಲ್ಲ. ನಾವು ಎಲ್ಲಿ ಒಂದು ರೂಪನ್ನು ಕಾಣುತ್ತೇವೆಯೋ ಅಲ್ಲಿ ಅದನ್ನು ಹೊಂದಿರುವ ವಸ್ತುವಿಗೆ ಮತ್ತು ಆ ರೂಪಕ್ಕೆ ಅರ್ಥವಿರುತ್ತದೆ. ರೂಪ ಮಾನವನದಾಗಿರಲಿ ಇಲ್ಲವೇ ಪ್ರಕೃತಿಯದೇ ಆಗಿರಲಿ, ಅಲ್ಲಿ ಕಲೆಯ ಅಸ್ತಿತ್ವವನ್ನು ಕಾಣಬಹುದು. ವ್ಯಕ್ತಿತ್ವವು ಲಲಿತಕಲೆಯಂತೆ, ವೈಯಕ್ತಿಕವಾದದ್ದು ಮತ್ತು ಅದ್ವಿತೀಯವಾದದ್ದು. ನಿರ್ದಿಷ್ಟ ಗುಣಗಳು ಮಾನವನ ವ್ಯಕ್ತಿತ್ವವನ್ನು ನಿರ್ಧರಿಸುತ್ತವೆ. ವಿವಿಧ ವ್ಯಕ್ತಿಗಳ ರೂಪದಲ್ಲಿ ವ್ಯತ್ಯಾಸವಿರುವಂತೆ ವ್ಯಕ್ತಿತ್ವದಲ್ಲೂ ವ್ಯತ್ಯಾಸಗಳಿವೆ. ಈ ದೃಷ್ಟಿಕೋನದಿಂದ, ಮನೋದೈಹಿಕ ಸಂಬಂಧವಾದ ಸಿದ್ಧಾಂತಗಳು ದೋಷಯುಕ್ತವಾದುವು. ಏಕೆಂದರೆ ಜೀವಿಯಲ್ಲಿ ಅಡಕವಾಗಿರುವ ದೈಹಿಕ, ಮಾನಸಿಕ ಗುಣಗಳು ಏನೇ ಆಗಿರಲಿ, ವ್ಯಕ್ತಿತ್ವಕ್ಕೆ ಆವಶ್ಯಕವಾದ ಜೀವನ ಮೌಲ್ಯಗಳು ವ್ಯಕ್ತಿಯಲ್ಲಿ ಸರ್ವಸಾಮಾನ್ಯವಾಗಿ ನೆಲೆಸಿರುವುದಿಲ್ಲ. ಶಿಲೆಯನ್ನು ಕೆತ್ತಿ ಹೇಗೆ ಮೂರ್ತಿಯನ್ನು ಶಿಲ್ಪಿ ರಚಿಸುವನೋ ಅದೇ ರೀತಿ, ದೇಹ ಮತ್ತು ಮನಸ್ಸಿಗೆ ಸಂಬಂಧಪಟ್ಟ 'ಟೆಲೋಸ್' (telos) ಎಂಬ ವಸ್ತು ಮಾನವನಲ್ಲಿ ವ್ಯಕ್ತಿತ್ವವನ್ನು ರೂಪಿಸುತ್ತದೆ. 'ಟೆಲೋಸ್'ನ ಇರುವಿಕೆಯನ್ನು ವ್ಯಕ್ತಿತ್ವ ಏನು ಮಾಡುತ್ತದೆ, ಯಾವುದನ್ನು ಗ್ರಹಿಸಿಕೊಂಡು ತನ್ನದಾಗಿಸಿಕೊಳ್ಳುತ್ತದೆ ಎಂಬುವುದರಿಂದ ನಿರ್ಧರಿಸಬಹುದು. ಜೀವಿತ ಕಾಲದಲ್ಲಿ ವ್ಯಕ್ತಿಯ ಪ್ರತಿಯೊಂದು ಅಂಗವೂ ತನ್ನ ಸಹಜ ಗುರಿಯನ್ನು ಹೊಂದಿರುತ್ತದೆ. ಆ ಗುರಿಯನ್ನು ಸಾಧಿಸುವ ಬಗ್ಗೆ ಅಂಗಗಳು ತಮ್ಮ ಪ್ರಕೃತಿಯನ್ನು ತಾವೇ ಆಯ್ದುಕೊಳ್ಳುತ್ತವೆ. ಗರ್ಭಧಾರಣೆ, ತಾಯ್ತನ ಮುಂತಾದವುಗಳಿಂದ ಕೂಡಿದ ಹೆಣ್ಣಿನ ವ್ಯಕ್ತಿತ್ವವನ್ನು 'ಟೆಲೋಸ್' ರೂಪಿಸುತ್ತದೆ.

ಒಬ್ಬ ಸ್ತ್ರೀ, ಒಬ್ಬ ವ್ಯಕ್ತಿಯೊಡನೆ ಸಾಮಾಜಿಕವಾಗಿ ಪ್ರೇರೇಪಿತಳಾಗಿ ಹೇಗೆ ವರ್ತಿಸುವಳು ಮತ್ತು ಆ ವ್ಯಕ್ತಿ ಆಕೆಯೊಡನೆ ಹೇಗೆ ವರ್ತಿಸುವನು ಎಂಬ ಆಕೆಯ ಸ್ವಾನುಭವವು ಮಾನಸಿಕವಾದದ್ದು ಎಂದು ತಪ್ಪು ತಿಳಿಯಬಾರದು.[5] ಮನಸ್ಸು ಮನೋದೈಹಿಕ ಪ್ರವೃತ್ತಿಗಳನ್ನು ರಚನಾತ್ಮಕವಾಗಿ ನಿಯಂತ್ರಿಸಲು ಗುಪ್ತವಾಗಿ ಅಡಗಿರುವ ಒಂದು ಶಕ್ತಿ[6]. ಈ ಶಕ್ತಿ ಲಕ್ಷಾಂತರ ಅಶ್ವಗಳ ಪ್ರಚಂಡ ಶಕ್ತಿ ಇದ್ದಂತೆ. ಮನಸ್ಸು ದೈಹಿಕ ಪ್ರಚೋದಕ ಶಕ್ತಿಯಲ್ಲದೆ, ಅಪೇಕ್ಷೆಗಳ ಅಮೂಲ್ಯ ಕೇಂದ್ರವೂ ಹೌದು. ಸ್ತ್ರೀಯ ಮನದ ಅಗತ್ಯಗಳು ಮತ್ತು ಪ್ರವೃತ್ತಿಗಳು, ಸ್ವಭಾವತಃ ಇಲ್ಲವೇ ಸ್ಫೂರ್ತಿಯ ಮೂಲಕ ಮನಸ್ಸಿನ ಕೇಂದ್ರದಿಂದ ನಿಯಂತ್ರಗೊಳ್ಳುತ್ತವೆ. ದೈಹಿಕ ಬದಲಾವಣೆಗಳೆಲ್ಲವೂ ಮನಸ್ಸಿನ ಹೋರಾಟದ ಪ್ರತೀಕವಾಗಿರುತ್ತವೆ.

ಸ್ತ್ರೀ-ಪುರುಷರ ಜೀವನವನ್ನು ಕೂಲಂಕಷವಾಗಿ ಅಧ್ಯಯನಮಾಡಲು, ಶಿಶು ತಾಯಿಯ ಗರ್ಭದಲ್ಲಿರುವಾಗಿನಿಂದ ಆರಂಭಿಸಿ, ಜೀವನ ಅಂತ್ಯವಾಗುವವರೆಗಿನ ವ್ಯಕ್ತಿಯ ಎಲ್ಲಾ ಪ್ರವೃತ್ತಿಗಳನ್ನೂ ಗಮನಿಸಬೇಕು. ವ್ಯಕ್ತಿತ್ವವು ಮಾನವನಿಗೆ ಸಂಬಂಧಪಟ್ಟ ಬಾಹ್ಯ ಹಾಗೂ ಆಂತರಿಕ ವಿಷಯಗಳಿಂದ ಕೂಡಿರುತ್ತದೆ. ದೇಹದ ನಿಜವಾದ ಸ್ವರೂಪ ವ್ಯಕ್ತಿಯ ಮನಸ್ಸು. ಆದುದರಿಂದ, ದೇಹದ ವ್ಯಕ್ತ ಹಾಗೂ ಅವ್ಯಕ್ತ ವಿದ್ಯಮಾನಗಳ ನೆರವಿನಿಂದ ವ್ಯಕ್ತಿಯ ಮನಸ್ಸಿನ ವಿಶ್ಲೇಷಣೆಯನ್ನು ಮಾಡ ಬಹುದು.[7]

ಪುರುಷ ಜೀವನದ ಗತಿಗಿಂತಲೂ ಸ್ತ್ರೀಯ ಜೀವನಗತಿಯಲ್ಲಿ ನಾನಾ ಎಡರು ತೊಡರುಗಳಿರುವುದನ್ನು ನಾವು ಕಾಣಬಹುದು. ಸ್ತ್ರೀ ಗರ್ಭ ಧರಿಸಿ ಮಗುವನ್ನು ಹಡೆಯುವುದು ಕಷ್ಟಕರ ಘಟನೆಯೇ ಸರಿ. ಶಿಶುವಿನ ಭ್ರೂಣಜೀವನದಲ್ಲಿ ಅಂಗಾಂಗ ಗಳು ಕ್ರಮಕ್ರಮವಾಗಿ ಬೆಳೆಯುತ್ತಾ ಬರುತ್ತವೆ. ಚರ್ಮ ಮೊದಲು ಕಾಣಿಸಿಕೊಳ್ಳದೆ, ತರುವಾಯ ಬಾಯಿ, ಆಸನದ್ವಾರ, ಜನನೇಂದ್ರಿಯಭಾಗ ಮೊದಲಾದ ಕಡೆ ಕಾಣಿಸಿಕೊಳ್ಳುತ್ತದೆ.

ಫ್ರಾಯ್ಡ್ ಮಹಾಶಯನು ಲೈಂಗಿಕ ಶಕ್ತಿಯ (ಕಾಮ) ವಿವಿಧ ಅಂಗಗಳ ಬೆಳವಣಿಗೆ ಮತ್ತು ಅವುಗಳಿಗೆ ಸಂಬಂಧಪಟ್ಟ ಸೂಕ್ಷ್ಮವಿಷಯಗಳನ್ನು ತಿಳಿಸಿರುತ್ತಾನೆ[8]:

ಫ್ರಾಯ್ಡ್‌ನ ಸಿದ್ಧಾಂತ, ಮಗುವಿನ ಐದು ವರುಷಗಳಲ್ಲಿಯ ಮೊದಲ ಸ್ವಶರೀರ ಪ್ರೇಮದ (Narcissistic) ಅವಸ್ಥೆಯಿಂದ ಹಿಡಿದು, ಸಜಾತಿಯ ಲೈಂಗಿಕತೆ, ವಿಜಾತಿಯ ಲೈಂಗಿಕತೆ ಮೊದಲಾದ ವಿಷಯಗಳಿಗೆ ಅನ್ವಯಿಸುವುದಾಗಿದೆ. ವ್ಯಕ್ತಿಯ ಕಾಮ, ಅಂದರೆ ಲೈಂಗಿಕ ಶಕ್ತಿಯು, ಅಂತರ್ಮುಖ ಹಾಗೂ ಬಹಿರ್ಮುಖ ಶಕ್ತಿ ಯಾಗುವುದನ್ನು ವಿವರಿಸುವಾಗ ವಾಚಿಕ (Oral), ಗುದದ್ವಾರ (Anal) ಮತ್ತು ಪ್ರಾಣ್ಯುತ್ಪತ್ತಿ (Genital)—ಈ ಮೂರು ವಿಷಯಗಳನ್ನು ಮನೋವಿಜ್ಞಾನಿ ಫ್ರಾಯ್ಡ್ ಪರಿಗಣಿಸಿದ್ದಾನೆ. ಪ್ರಾಣ್ಯುತ್ಪತ್ತಿಯಲ್ಲಿ, ಅಂದರೆ ಜನನೇಂದ್ರಿಯಗಳ

ಬೆಳವಣಿಗೆಯಲ್ಲಿ, ಐದನೆಯ ವರ್ಷದವರೆಗೆ ಯಾವ ವಿಧವಾದ ಹೆಚ್ಚಿನ ಮಾರ್ಪಾಡು ಗಳಿರುವುದಿಲ್ಲ. ಆರನೇ ವರ್ಷದಿಂದ ಹನ್ನೆರಡು ಇಲ್ಲವೇ ಹದಿನಾಲ್ಕು ವರುಷಗಳ ನಡುವಣ ವಯಸ್ಸನ್ನು ಪ್ರೌಢಾವಸ್ಥೆಯ ಪರ್ವಕಾಲವೆಂದು ಫ್ರಾಯ್ಡ್ ತಿಳಿಸುತ್ತಾನೆ. ಆತನ ಪ್ರಕಾರ ಈ ಅವ್ಯಕ್ತ ಅವಧಿಯಲ್ಲಿ, ಅಂದರೆ ಪರ್ವಕಾಲದಲ್ಲಿ, ಶಾರೀರಕವಾಗಿ ಗಂಡು–ಹೆಣ್ಣು ಗಳಲ್ಲಿ ಯಾವ ವ್ಯತ್ಯಾಸವೂ ತೋರಿಬರುವುದಿಲ್ಲ. "ಲೈಂಗಿಕ ವಿಕಾಸ" ಎಂಬ ತಮ್ಮ ಕೃತಿಯಲ್ಲಿ ಮರೆನಾನ್, ಯೌವನದ ಅವ್ಯಕ್ತ ಕಾಲದಲ್ಲಿ "ಹುಡುಗನ ಆಕಾರ, ಹುಡುಗಿಯ ಆಕಾರಕ್ಕೆ ಸರಿಹೊಂದುವಂತೆ, ಹುಡುಗಿಯ ಆಕಾರ ಹುಡುಗನ ಆಕಾರಕ್ಕೆ ಸರಿಹೊಂದುವುದಿಲ್ಲ" ಎಂದಿದ್ದಾರೆ. ಈ ಕಾಲದಲ್ಲಿ ದೇಹದಲ್ಲಿ ರೋಮಗಳ ವಿತರಣೆ, ಕೊಬ್ಬಿನ ಹಂಚಿಕೆ, ಅಂಗಸೌಷ್ಠವ, ಧ್ವನಿ, ದ್ವಿತೀಯ ಲೈಂಗಿಕ ಅನುಕ್ರಮ —ಇವು ಹುಡುಗರಲ್ಲಿ, ಹುಡುಗಿಯರಲ್ಲಿರುವಂತೆಯೇ ಇರುತ್ತದೆ. ಪುರುಷತ್ವದ ಗುರುತುಗಳಾದ ಗಂಟಲ ಗಂಟು, ಹಾಗೂ ಮಣಿಕಟ್ಟಿನ ಕೆಳಗೆ ಮತ್ತು ಪಾದದ ಮೇಲೆ ಎದ್ದು ಕಾಣುವ ನರಗಳು ಪ್ರೌಢಾವಸ್ಥೆಯ ಹೊಸ್ತಿಲನ್ನು ದಾಟುವವರೆವಿಗೆ ಹುಡುಗನಲ್ಲಿ ಕಾಣಿಸಿಕೊಳ್ಳುವುದಿಲ್ಲ. ಭುಜಗಳು ಕತ್ತು ಮತ್ತು ಮುಂಡ–ಕೈಕಾಲು ಪ್ರಮಾಣಗಳಲ್ಲಿ ಗಂಡು–ಹೆಣ್ಣು ಗಳಲ್ಲಿ ಸಮನಾಗಿರುತ್ತವೆ. ಪ್ರೌಢಾವಸ್ಥೆಯ ಹೊಸ್ತಿಲಲ್ಲಿ ಬದಲಾವಣೆಗಳು ಪ್ರಾರಂಭವಾಗಿ, ಹುಡುಗರು ಪುರುಷ ಬಾಹ್ಯರೂಪ ದತ್ತಲೂ, ಹುಡುಗಿಯರು ಸ್ತ್ರೀ ಬಾಹ್ಯರೂಪದತ್ತಲೂ ಸಾಗಿ ತಮ್ಮದೇ ಆದ ವಿಶಿಷ್ಟ ಬೆಳವಣಿಗೆಯನ್ನು ಹೊಂದುತ್ತಾರೆ.

ಹುಡುಗನ ಜೀವನದಲ್ಲಿ, ತಾರುಣ್ಯ ಪ್ರಾಪ್ತವಾಗುವ ಕಾಲ ಬಹಳ ಏರಿಳಿತ ಗಳಿಂದ ಕೂಡಿ, ಸಂದಿಗ್ಧ ಪರಿಸ್ಥಿತಿಯೊದಗುತ್ತದೆ.[೨] ಹುಡುಗಿಯರು ತಾರುಣ್ಯಕ್ಕೆ ವಿಕಾಸಗೊಳ್ಳುವಾಗ ಸೌಮ್ಯ ಹಾಗೂ ನೆಮ್ಮದಿಯ ಬದಲಾವಣೆಗಳಾಗುತ್ತವೆ. ಯುವಕರು ವಿಕಾಸಕ್ಕೆ ಒಳಗಾದಾಗ, ಹಲವಾರು ಬಯಕೆಗಳಿಂದ ಕೂಡಿದ್ದರೂ ಪ್ರೀತಿ ಯಲ್ಲಿ ಸುರಕ್ಷಿತವಾಗಿರಬೇಕೆಂಬ ಭ್ರಮೆಯನ್ನು ತಾಳುತ್ತಾರೆ. ಸಾಹಸಮಯ ಜೀವನದ ಆಕರ್ಷಣೆಗೆ ಒಳಗಾಗಿ, ಏಕಾಂತವಾಸ ಬಯಸುತ್ತಾರೆ, ಹಾಗೂ ತಾಯಿಯ ಆಶ್ರಯವನ್ನು ಅಪೇಕ್ಷಿಸುತ್ತಾರೆ. ಆದರೆ ತರುಣಿ ಈ ರೀತಿಯ ತೊಂದರೆಗಳಿಗೆ ಹಾಗೂ ಮಾನಸಿಕ ಆಂದೋಲನಕ್ಕೆ ಒಳಗಾಗುವುದು ಅಪರೂಪ. ಯೌವನದಲ್ಲಿ ಶರೀರ ಪೂರ್ಣವಾಗಿ ಬೆಳೆದುಕೊಳ್ಳುವುದಲ್ಲದೆ ಮನಸ್ಸು ಸಹ ಹದಕ್ಕೆ ಬರುತ್ತದೆ; ವಿವೇಚನಾಶಕ್ತಿ ಹೆಚ್ಚಿ, ವೈಯಕ್ತಿಕವಾಗಿ ಆಲೋಚಿಸುವ ಸಾಮರ್ಥ್ಯ ಕಾಣಿಸಿಕೊಳ್ಳು ತ್ತದೆ. ಇದನ್ನು ವ್ಯಕ್ತಿತ್ವದ ವಿಕಾಸವೆನ್ನಬಹುದು. ತರುಣಿಯ ಹರೆಯ ಹುಡುಗನ ಜೀವನದಲ್ಲಿ ಬಿರುಗಾಳಿಯಂತೆ ಬೀಸುತ್ತದೆ: ಯುವಕರಲ್ಲಿ ಉನ್ಮಾದ, ಮಾನಸಿಕ ವೈಪರೀತ್ಯಗಳು ಮತ್ತು ನರಗಳ ಅಸ್ವಸ್ಥತೆಗಳ ಬಗ್ಗೆ ಅಂಕಿ–ಅಂಶಗಳನ್ನು ಸಂಗ್ರಹಿಸಿ ದಾಗ ಇಂಥ ವೈಪರೀತ್ಯಗಳಿಗೆ ಪ್ರಾಯ ಹಾಗೂ ಪುರುಷತ್ವದ ಪ್ರಭಾವವೇ ಕಾರಣ ವೆಂಬುದು ವ್ಯಕ್ತಪಟ್ಟಿದೆ. ದೈಹಿಕ–ಮಾನಸಿಕ ಬೆಳವಣಿಗೆಯನ್ನು ಲೈಂಗಿಕ–ಮಾನಸಿಕ

ಬೆಳವಣಿಗೆಯ ಮೂಲಕ ಗಮನಿಸಿದಾಗ ತರುಣ-ತರುಣಿಯರ ವ್ಯಕ್ತಿತ್ವ, ಈ ವಿಕಾಸ ಕಾಲದಲ್ಲಿ ಸಂದಿಗ್ಧ ಪರಿಸ್ಥಿತಿಗೊಳಗಾಗುವುದು ಕಾಣಿಸುತ್ತದೆ.[10]

ಸ್ತ್ರೀಯ ಅಂಗಗಳ ಕ್ರಿಯೆ ತಾರುಣ್ಯದಿಂದ ಹಿಡಿದು ರಜಸ್ಸು ನಿಲ್ಲುವವರೆವಿಗೆ ಅಗೋಚರವಾಗಿಯೇ ಇರುತ್ತದೆ. ಈ ಕಾಲದಲ್ಲಿ, ಸ್ತ್ರೀಯ ಒಳಾಂಗಗಳ ಕ್ರಿಯೆಗಳೆಲ್ಲವೂ ಪುರುಷನ ಒಳಾಂಗಗಳ ಕ್ರಿಯೆಯೊಡನೆ (ಗರ್ಭಕೋಶದ ವಿನಹ) ಹೋಲಿಸಿದಾಗ, ಯಾವ ವ್ಯತ್ಯಾಸವೂ ಇಲ್ಲದಂತೆ ಕಾಣುತ್ತದೆ. ದೈಹಿಕ ಮತ್ತು ಅದಕ್ಕೆ ಸಂಬಂಧಿಸಿದ ಮಾನಸಿಕ ಕ್ರಿಯೆಗಳೆಲ್ಲವೂ ಅಂಡಾಶಯದಲ್ಲಿ ಉಂಟಾಗುವ ನಿಯತಕಾಲಿಕ ಬದಲಾವಣೆಗಳಿಗೆ ಒಳಪಟ್ಟಿರುತ್ತವೆ.[11] ಸ್ತ್ರೀಯ ಸೂಕ್ಷ್ಮ ದೇಹದಲ್ಲಿ ಪ್ರಕೃತಿಯು ನಿಯತಕಾಲಿಕ ರಜೋವರ್ಶನದ ಆವರ್ತವಿಧಾನವನ್ನು ರಚಿಸಿ ಆಕೆಯ ಲಕ್ಷಣಗಳ ವೈವಿಧ್ಯವನ್ನು ತೋರಿಸುತ್ತದೆ. ಅವು ಸಾಗರಗಳ ತಳದಲ್ಲಿ ಅಪೂರ್ವ ಪ್ರವಾಹಗಳಿದ್ದಂತೆ. ಸ್ತ್ರೀಯ ದೈಹಿಕ-ಮಾನಸಿಕ ರಚನೆ ಆಕೆಯ ಅಂತರಾಳವನ್ನು ಮರೆಮಾಚುತ್ತದೆ. ಸಮುದ್ರದ ಆಳವನ್ನು ಅಳೆಯಬಹುದಾದರೂ ಸ್ತ್ರೀಯ ಮನಸ್ಸನ್ನು ಅಳೆಯುವುದು ಕಷ್ಟ.

ಸ್ತ್ರೀ ಋತುಮತಿಯಾದ ಮೇಲೆ ಹಲವಾರು ದೈಹಿಕ ಬದಲಾವಣೆಗಳಾಗುತ್ತವೆ. ರಜಸ್ಸಿನ ವೃತ್ತದಲ್ಲಿಯೇ "ಫಾಲಿಕ್ಯುಲರ್" (Follicular) ಮತ್ತು 'ಲ್ಯೂಟಿಯಲ್' (Luteal) ದ್ರವಗಳ ಏರಿಳಿತಗಳಿರುತ್ತವೆ. ಇವು 'ಎಂಡೋಮೆಟ್ರಿಯಂ' (Endometrium) ಗರ್ಭಚೀಲದ ಪೊರೆಯಲ್ಲಿ ಉಬ್ಬರ ಮತ್ತು ದ್ರವಶೇಖರಣೆಯ ರೂಪದಲ್ಲಿ ಉಂಟಾಗುವ ಬದಲಾವಣೆಗಳಿಗೆ ಹೊಂದಿಕೊಂಡಿರುತ್ತವೆ. 'ಫಾಲಿಕ್ಯುಲರ್' ಗ್ರಂಥಿಗಳ ರಸ ಮತ್ತು 'ಲೂಟಿಯಲ್' ದ್ರವಗಳಲ್ಲಿನ ವ್ಯತ್ಯಾಸವು ಸ್ತ್ರೀ ದೇಹದಲ್ಲಿ ದ್ವಿತೀಯ ಲೈಂಗಿಕ ಚಿನ್ಹೆಗಳನ್ನು ತೋರಿಸುತ್ತದೆ. 'ಲೂಟಿಯಲ್' ದ್ರವ ಹೆಚ್ಚಾದರೆ ಸ್ತ್ರೀಯ ಮೇಲ್ತುಟಿಯ ಮೇಲೆ ರೋಮಗಳು ಕಾಣಿಸಿಕೊಳ್ಳುವುದಲ್ಲದೆ, ಆಕೆಯ ಧ್ವನಿಯನ್ನು ಪುರುಷ ಧ್ವನಿಗೆ ಬದಲಾಯಿಸುತ್ತದೆ. ಆದರೆ, 'ಫಾಲಿಕ್ಯುಲರ್' ಗ್ರಂಥಿಯ ರಸದ ಹೆಚ್ಚಳವು ಸ್ತ್ರೀಯಲ್ಲಿ ಸ್ತ್ರೀತ್ವವನ್ನು ಕಾಪಾಡುತ್ತದಲ್ಲದೆ ಹೆಚ್ಚು ಸ್ಫುಟವಾಗಿ ಕಾಣುವಂತೆ ಮಾಡುತ್ತದೆ. ಗರ್ಭಿಣಿ ಸ್ತ್ರೀಯಲ್ಲಿನ ರಕ್ತಸ್ರಾವದಲ್ಲಿ 'ಫಾಲಿಕ್ಯುಲರ್' ಗ್ರಂಥಿಯ ಸಾರವು ಇದ್ದಕ್ಕಿದ್ದಂತೆ ಹೆಚ್ಚಾದರೂ ಸರಿ, ಇಲ್ಲವೆ ಅಸ್ವಾಭಾವಿಕವಾಗಿ ಚುಚ್ಚುಮದ್ದಿನಿಂದ ಹೆಚ್ಚಾದರೂ ಸರಿ, ಗರ್ಭ ಅಸ್ತವ್ಯಸ್ತವಾಗುವ ಸಂಭವವುಂಟು.[12] ಇದೇ ರೀತಿ ಶಿಶುಜನನದ ನಂತರ, ಅಂದರೆ ಸ್ತನದಲ್ಲಿ ಹಾಲು ತುಂಬಿಕೊಂಡ ಮೊದಲ ದಿವಸಗಳಲ್ಲಿ ಫಾಲಿಕ್ಯುಲರ್ ಮತ್ತು ಲೂಟಿಯಲ್ ರಸಗಳ ಸಮತೆಯು ಲೂಟಿಯಲ್ ದ್ರವದ ಬಲದಿಂದ ವ್ಯತ್ಯಾಸಗೊಂಡರೆ ಮತ್ತೊಮ್ಮೆ ಧ್ವನಿ ಬದಲಾವಣೆ, ತುಟಿಯ ಮೇಲೆ ಮತ್ತು ದೇಹದ ಇತರ ಭಾಗಗಳಲ್ಲಿ ರೋಮಗಳು ಕಾಣಿಸಿಕೊಳ್ಳುವಿಕೆ ಮುಂತಾದ ಬದಲಾವಣೆಗಳು ಉಂಟಾಗುತ್ತವೆ.[13]

ಸ್ತ್ರೀಯ ಜೀವನದಲ್ಲಿನ ಈ ಅವ್ಯಕ್ತ ವಿಷಯಗಳತ್ತ ಗಮನ ಹರಿಸುವ ಮುಖ್ಯ ಉದ್ದೇಶ, ಸ್ತ್ರೀಯ ವಿಶಿಷ್ಟ ಸೃಷ್ಟಿಯನ್ನು ತೋರಿಸುವುದು ಮಾತ್ರವಾಗಿದೆ. ಸ್ತ್ರೀಯ ದ್ವಿಲಿಂಗತ್ವವು, ಅಂದರೆ ದ್ವೈಲೈಂಗಿಕ ಲಕ್ಷಣವು, ಸಾಮಾನ್ಯವಾಗಿ ಸಮತೂಕದಲ್ಲಿರುತ್ತದೆ. ಅನೇಕ ವೇಳೆ ಸ್ತ್ರೀ-ಪುರುಷರಲ್ಲಿ ದ್ವಿತೀಯ ಲೈಂಗಿಕ ಲಕ್ಷಣ ಬಾಹ್ಯರೂಪವನ್ನೂ ತಾಳುತ್ತದೆ. ಸ್ತ್ರೀ ಪುರುಷನಷ್ಟು ಪರಿಪೂರ್ಣಳಲ್ಲ. "ಅರ್ಧನಾರೀಶ್ವರ"ನೆಂಬ ಹಿಂದೂ ಭಾವನೆಯಲ್ಲಿ ಪ್ರಕೃತಿ-ಪುರುಷರ ಯಾವ ಭಾಗವನ್ನೂ ಪ್ರಧಾನವಾಗಿ ಕಾಣಿಸದೆ, ಪುರುಷನ ವ್ಯಕ್ತಿತ್ವಕ್ಕಿಂತ ಸ್ತ್ರೀಯ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಸ್ತ್ರೀಯ ಮಾನಸಿಕ ವಿಕಸನ ಪುರುಷನ ಮಾನಸಿಕ ವಿಕಾಸಕ್ಕಿಂತ ಉತ್ತಮವಾದದ್ದು. ಆಕೆಯ ಬುದ್ಧಿವಂತಿಕೆಯಲ್ಲಿ ಅವಳ ಆತ್ಮಸೌಂದರ್ಯವನ್ನು ಅಳವಡಿಸಲಾಗಿದೆ.[14] ಪ್ರಕೃತಿಯು ಆಕೆಯನ್ನು ಸ್ತ್ರೀ-ಪುರುಷರ ತಾಯಿಯಾಗುವಂತೆ ರೂಪಿಸಿದೆ. ಪುರುಷ, ಪ್ರಕೃತಿಯು ಈ ಅತ್ಯದ್ಭುತಪಾತ್ರದಿಂದ ಹಿಂದೆ ತಳ್ಳಲ್ಪಟ್ಟಿರುವುದರಿಂದ, ಅವನು ಅಪ್ರಮುಖ ವ್ಯಕ್ತಿಯಂತೆ ಕಾಣುತ್ತಾನೆ. ಪುರುಷ, ಪ್ರಕೃತಿಯ ಉತ್ಕೃಷ್ಟ ಮಾದರಿಯಾಗಿರದೆ, ಅವನ ವ್ಯಕ್ತಿತ್ವ ಅಪೂರ್ಣವಾಗಿಯೇ ಇದೆ. ಅವನು ಪರಿಪೂರ್ಣತೆಯನ್ನು ಹೊಂದಲೆಂದೇ ಸ್ತ್ರೀಯ ಸೃಷ್ಟಿಯಾಗಿರಬೇಕು.[15]

ಈ ಸಿದ್ಧಾಂತವನ್ನು ಸಮರ್ಥಿಸಲು ನಾವು ವಿಕಾಸ ನಕ್ಷೆಯ ತಳಭಾಗದಲ್ಲಿ ಕಾಣಿಸಿರುವ ಜೀವಿಗಳತ್ತ ನಮ್ಮ ಗಮನವನ್ನು ಹರಿಸಬೇಕು. ಈ ವಿಕಾಸದ ಯಾವುದೋ ಹಂತದಲ್ಲಿ ಪುರುಷ ಪ್ರಾಣಿಯ ಆಕಾರ ರಚನೆಯಾಗಿ ತರುವಾಯ ಆ ಆಕಾರವನ್ನು ಅವನು ತ್ಯಜಿಸಿರುವುದು ಗೋಚರವಾಗುತ್ತದೆ. ಮಾನವನೊಂದಿಗೆ ಪ್ರಾಣಿಗಳನ್ನು ಹೋಲಿಸುವುದು ಈ ಸಂದರ್ಭದಲ್ಲಿ ಅಷ್ಟು ಉಪಯುಕ್ತವಲ್ಲವೆಂಬುದು ನಮ್ಮ ನಂಬಿಕೆ. ಆದರೂ ಸ್ತ್ರೀಯ ಶ್ರೇಷ್ಠತೆಯನ್ನು ನಿರ್ಧರಿಸಲು ಪುರುಷನನ್ನು ಅಲ್ಲಗಳೆಯುವುದು ಸರಿಯಲ್ಲ. ಅಲ್ಲದೆ ಪುರುಷನ ಪ್ರತಾಪವನ್ನು ಹೊಗಳಿ ಸ್ತ್ರೀತನವನ್ನು ತೆಗಳುವ ನಿಲುವನ್ನು ಸಡಿಲಗೊಳಿಸುವಂಥ ವೈಜ್ಞಾನಿಕ ಕ್ರಮವೊಂದನ್ನು ಅನುಸರಿಸುವುದು ಯುಕ್ತವಾಗಿದೆ. ಬಹು ಹಿಂದಿನಿಂದಲೂ ಯಾವ ಪ್ರತಿಭಟನೆಗೂ ಒಳಗಾಗದ ಐತಿಹಾಸಿಕ ಮತ್ತು ಸಾಂಸ್ಕೃತಿಕ ವಿಷಯಗಳ ಸಂಶೋಧನೆಗೆ ತಳಹದಿ ಹಾಕಲು ಮಾನವನಿಗೆ ಈಗ ಸರಿಯಾದ ಅವಕಾಶ ಸಿಕ್ಕಿದೆ. ಸ್ತ್ರೀಯ ಜೀವನಕ್ಕೆ ಕಳಂಕ ತರುವ ಪದ್ಧತಿಗಳನ್ನು ಮತ್ತು ಆಕೆಯನ್ನು ತುಳಿಯಲು ಹಿಂದಿನಿಂದಲೂ ಏರ್ಪಟ್ಟಿರುವ ಕ್ರೂರ ಕಟ್ಟಳೆಗಳನ್ನು ಬಯಲಿಗೆ ತರುವ ಕೃತಿಗಳು ಹೊರಬರಬೇಕು. ಅಡಾಮನನ್ನು ಕೆಡಿಸಲು ಸೈತಾನನು ಈವಾಳನ್ನು ಉಪಯೋಗಿಸಿಕೊಂಡನೆಂಬುವುದು ಸತ್ಯಕ್ಕೆ ದೂರವಾದದ್ದು. ಸ್ತ್ರೀ ಇತಿಹಾಸವನ್ನು ಸತ್ಯವಾಗಿ ಬರೆದಾಗ, ಸೈತಾನನ ನೆರವಿನಿಂದ ಅಡಾಮನನ್ನು ನಾಶಗೊಳಿಸಲು ಸ್ವರ್ಗಶಕ್ತಿಯನ್ನು ದುರುಪಯೋಗ ಮಾಡಿಕೊಳ್ಳಲಾಯಿತೆಂಬುವುದಕ್ಕೆ ನಿಜವಾದ ಸಾಕ್ಷ್ಯ ಸಿಗುತ್ತದೆ.[16]

ನಮ್ಮ ನಡವಳಿಕೆಗಳು ಸಾಂಸ್ಕೃತಿಕ ಮತ್ತು ಸಾಮಾಜಿಕ ಪ್ರಭಾವಗಳಿಗೊಳ ಪಟ್ಟು ನಮ್ಮ ಮನಸ್ಸಿನಿಂದ ನಿರ್ದೇಶಿತವಾಗಿರುತ್ತವೆ. ವ್ಯಕ್ತಿ ವಾಸಿಸುವ ಸಮಾಜಿಕ ಪರಿಸರ, ಅದರಲ್ಲೂ ಹೆಚ್ಚಾಗಿ ಬಾಲ್ಯದ ಪರಿಸರ, ವ್ಯಕ್ತಿಯ ಇಚ್ಛಾಶಕ್ತಿ ಮತ್ತು ಮನೋಬಲಗಳಿಂದ ಈ ನಡವಳಿಕೆಗಳು ರೂಪುಗೊಳ್ಳುತ್ತವೆ.

ಇದು ಗಂಡು, ಇದು ಹೆಣ್ಣು, ಒಂದು ಒಳ್ಳೆಯದು ಮತ್ತೊಂದು ಕೆಟ್ಟದ್ದು, ಒಂದು ಗೌರವಾರ್ಹ ಮತ್ತೊಂದು ನಿಂದ್ಯಾತ್ಮಕವೆಂಬ ಭಾವನೆಗಳು ಸಾಮಾಜಿಕವಾಗಿ ಬರುತ್ತವೆ. ಉದಾಹರಣೆಗೆ, ನಿಷ್ಠುರ ನೋಟ ತಾಳಿ ಉತ್ತಮನಂತೆ 'ವಿಗ್' ಕೂದಲು ಟೋಪಿಯನ್ನು ಧರಿಸಿರುವವನನ್ನು ಪಾಶ್ಚಾತ್ಯ ದೇಶಗಳಲ್ಲಿ ನ್ಯಾಯಾಧೀಶನೋ ಅಥವ ನಾಟಕಮಂದಿರದ ದ್ವಾರಪಾಲಕನೊ ಇರಬೇಕೆಂದು ತಿಳಿಯುತ್ತಾರೆ. ಇದೇ ರೀತಿ ಯಾವನಾದರೂ ವ್ಯಕ್ತಿ ಹುಬ್ಬುಗಂಟಿಕ್ಕಿಕೊಂಡು, ತಗ್ಗಾದ ಟೊಪ್ಪಿಯನ್ನು ಧರಿಸಿ, ಕತ್ತಿನ ಸುತ್ತಲೂ ವರ್ಣವಸ್ತ್ರ ಕಟ್ಟಿಕೊಂಡು ತನ್ನ ಎರಡು ಕೈಗಳನ್ನು ಕೋಟಿನ ಜೇಬಿನೊಳಗೆ ಇಳಿಬಿಟ್ಟಿದ್ದರೆ ಅಂತಹವನನ್ನು 'ಬೊಲ್ಷೇವಿಕ್' (Bolshevik) ಕ್ರಾಂತಿ ಕಾರನೆಂದು ಪರಿಗಣಿಸುತ್ತಾರೆ. ಹೀಗೆ ಸಮಾಜದ ಜನರನ್ನು ಸುಲಭವಾಗಿ ಬೇರ್ಪಡಿಸಿ, ಅವರ ನಡವಳಿಕೆಗಳನ್ನು ಗ್ರಹಿಸುವಂಥ ಪೂರ್ವಕಲ್ಪಿತ ಚಿತ್ರಗಳನ್ನು ಸಮಾಜವು ನಮ್ಮ ಮೇಲೆ ಹೇರುತ್ತದೆ.

ಸ್ತ್ರೀಯ ಸ್ಥಾನಮಾನಗಳು ಸಮಾಜದಿಂದ ನಿರ್ಧರಿತವಾಗಿರುತ್ತವೆ. ತಮ್ಮ ಬಗ್ಗೆ ಸಮಾಜದ ಕಲ್ಪನೆಗಳು, ಮೌಲ್ಯ ನಿರ್ಧಾರಗಳು, ಭಾವನೆಗಳು, ಸಾಂಪ್ರದಾಯಿಕ ನಂಬಿಕೆ, ಕಟ್ಟಳೆ, ಆದರ್ಶ—ಇವುಗಳಿಂದ ಪ್ರಭಾವಿತರಾಗಿ ಮತ್ತು ಅವುಗಳನ್ನೊಪ್ಪಿ ಕೊಂಡು ತಮ್ಮ ಸ್ತ್ರೀಯರು ಜೀವಿತವನ್ನು ರೂಪಿಸಿಕೊಳ್ಳುತ್ತಾರೆ. ಹಾಸ್ಯ ನಟ ತನ್ನ ನಡವಳಿಕೆಗಳನ್ನು ಹಾಸ್ಯಗಾರನಂತೆ ನಾಟಕದಲ್ಲಿ ಪರಿವರ್ತಿಸಿಕೊಳ್ಳುವಂತೆ, ಸ್ತ್ರೀಯರೂ ತಮ್ಮ ವರ್ತನೆಗಳನ್ನು ಸಮಾಜದಲ್ಲಿ ಹೊಂದಿಸಿಕೊಳ್ಳುತ್ತಾರೆ. ಈ ಮಾತು ಪುರುಷರ ವಿಷಯದಲ್ಲೂ ಸತ್ಯ.[17]

ಸ್ತ್ರೀಯ ನಡವಳಿಕೆ, ರೂಢಿಸಿಕೊಂಡಿರುವ ನಡವಳಿಕೆಯೇ ಇಲ್ಲವೆ ದೈಹಿಕ ಮತ್ತು ಮಾನಸಿಕ ಪರಿಸ್ಥಿತಿಗಳಿಗನುಗುಣವಾಗಿ ನಿರ್ಧಾರವಾದ ನಡವಳಿಕೆಯೇ ಎಂದು ಹೇಳುವುದು ಕಷ್ಟವಾಗುತ್ತದೆ. ಈ ಸಮಸ್ಯೆಯನ್ನು ಬಿಡಿಸಿದ ಹೊರತು, ಆಕೆಯ ನಡವಳಿಕೆಯು ರೂಢಿಸಿಕೊಂಡದ್ದೆಂದು ಹೇಳಬೇಕಾಗುತ್ತದೆ. ಇದು ಯುಕ್ತ ವಲ್ಲ. ಸ್ತ್ರೀಯರು ಸಮಾಜದಲ್ಲಿ ರೂಢಿಯಲ್ಲಿರುವ ನಿಯಮಗಳಿಗನುಸಾರವಾಗಿ ನಡೆದುಕೊಳ್ಳುವರಲ್ಲದೆ, ತಮ್ಮ ಆದರ್ಶಗಳಿಗೆ ತಕ್ಕಂತೆ ಜೀವಿತವನ್ನು ರೂಪಿಸಿಕೊಳ್ಳು ತ್ತಾರೆ. ಇದಕ್ಕಿಂತಲೂ ಆಶ್ಚರ್ಯಕರ ಸಂಗತಿ ಎಂದರೆ, ಸ್ತ್ರೀ ಮನೋಧರ್ಮ ವನ್ನು ಅಭ್ಯಾಸಿಸುವ ಅತಿ ಬುದ್ಧಿವಂತನೂ ಕೂಡ ಸ್ತ್ರೀಯ ವ್ಯಕ್ತಿತ್ವ, ಗುಣ ಮತ್ತು ನಡವಳಿಕೆಗಳ ಬಗ್ಗೆ ವಿವಾದಾತ್ಮಕವಾದ ಮತ್ತು ಅಪೂರ್ಣವಾದ ವರ್ಣನೆ ಗಳನ್ನೇ ಕೊಡುತ್ತಾನೆ. ಸ್ತ್ರೀಯ ವಿಷಯದಲ್ಲಿ ಪೂರ್ವಕಲ್ಪಿತ ಅಭಿಪ್ರಾಯಗಳಿಂದ

ಪ್ರಭಾವಿತನಾಗಿರದೆ, ಪಕ್ಷಪಾತವಿಲ್ಲದೆ ಪರಿಶೋಧನೆಗಳನ್ನು ನಡೆಸುವ ವ್ಯಕ್ತಿಗಳು ಅಪರೂಪ. ಸ್ತ್ರೀಯ ವ್ಯಕ್ತಿತ್ವ ಮತ್ತು ಮನಸ್ಸಿನ ಬಗೆಗೆ ಅಧ್ಯಯನ ನಡೆಸುವ ಸಂಶೋಧಕರಿಗೆ, ಯುಕ್ತ ಕ್ರಮಗಳನ್ನು ಒತ್ತಿಹೇಳುವುದು ಸಾಧ್ಯವಿಲ್ಲ. ಏಕೆಂದರೆ ಅಂಥವರು ಪರಿಜ್ಞಾನ ಶೂನ್ಯತೆ, ದುರಭಿಪ್ರಾಯ ವಿಕಾರ–ವಿರೂಪತೆಗಳಿಗೆ ಒಳಗಾಗಿರುತ್ತಾರೆ.[18] ಸಾಹಿತ್ಯ, ಗಾದೆಗಳು, ಸಂಪ್ರದಾಯ, ಪದ್ಧತಿ ಇವೇ ಮೊದಲಾದುವುಗಳ ಮೂಲಕ ಪ್ರಚಲಿತವಾಗಿರುವ ಸ್ತ್ರೀ ಸಂಬಂಧವಾದ ತಪ್ಪು ಭಾವನೆಗಳನ್ನು ತೊಡೆದು ಹಾಕಿದ ಹೊರತು ಸಮಾಜವಲ್ಲಿ ಸ್ತ್ರೀಯ ಅಂತಸ್ತು ಕುದುರಲಾರದು.[19] ಬೇಟೆಗಾರನ ಬಲೆಗೆ ಸಿಕ್ಕಿಕೊಂಡ ಮೊಲದಂತೆ ಸ್ತ್ರೀ ಸಮಾಜದ ಬಲೆಗೆ ಸಿಕ್ಕಿಕೊಂಡಿದ್ದಾಳೆ.

ಚಿಂತನೆ ಮತ್ತು ನುಡಿ, ವಿಶ್ಲೇಷಣೆಯ ಸಾಧನಗಳು. ಅಭಿಪ್ರಾಯಗಳನ್ನು ಪರಸ್ಪರ ವಿನಿಮಯ ಮಾಡಿಕೊಳ್ಳುವಾಗ ಈ ಸಾಧನಗಳನ್ನು ನಾವು ಉಪಯೋಗಿಸುತ್ತೇವೆ.[20] ಸ್ತ್ರೀಯ ಚಿಂತನಾಶಕ್ತಿ ಅದ್ಭುತವಾಗಿದ್ದರೂ, ತಾನು ಗ್ರಹಿಸಿದ ವಿಷಯಗಳನ್ನು ತಿಳಿಸುವಾಗ ಹೆಚ್ಚಿನ ವಾಚಾಳಿತನದಿಂದ ಮಾತಿಗೆ ಸಿಕ್ಕಿಕೊಳ್ಳುವುದು, ನೇರವಾಗಿ ಮಾತನಾಡದೆ ಸುತ್ತುವರಿದು ಮಾತನಾಡುವುದು ಆಕೆಯ ಸ್ವಭಾವ. ಸ್ತ್ರೀಯರು ಇನ್ನೊಬ್ಬರೊಡನೆ ಮಾತನಾಡುವಾಗ, ಎಷ್ಟೋ ಸಾರಿ—'ನಾನು ಹೇಳುವುದು ಏನೆಂದರೆ' 'ಪ್ರಾಯಶಃ ನಾನು ಹೇಳುವುದು ನಿಮಗೆ ಅರ್ಥವಾಗಲಾರದು' ಎಂದಾಗಲಿ ಅಥವ ವಾದದಲ್ಲಿ ಸೋತಾಗ—'ನಿಮ್ಮೊಡನೆ ವಾದಿಸಿ ಪ್ರಯೋಜನವಿಲ್ಲ, ಏಕೆಂದರೆ ನಿಮಗೆ ನನ್ನಲ್ಲಿ ನಂಬಿಕೆ ಇಲ್ಲ' 'ನಿಮ್ಮ ಮಾತೆ ನಿಮಗೆ ದೊಡ್ಡದು' 'ನೀವು ತಪ್ಪುತಿಳಿದುಕೊಂಡಿದ್ದೀರಿ ಎಂದು ಹೇಳಲಾರೆ'—ಎಂದಾಗಲಿ ಹೇಳಿ ಸಂಭಾಷಣೆಯಿಂದ ತಮ್ಮಲ್ಲಾದ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುತ್ತಾರೆ.

ಸ್ತ್ರೀಯರು ತೋರುವ ಮುಖಭಾವನೆಗಳು, ಅವರ ವಾದಸರಣಿ ತರ್ಕಬದ್ಧವಾಗಿಲ್ಲದಿರುವುದು, ಅನುಭವಗಳನ್ನು ಜೀವಿತದಲ್ಲಿ ಹೊಂದಿಸಿಕೊಳ್ಳುವುದರಲ್ಲಿ ತೋರುವ ಅಸಮರ್ಥತೆ—ಇವುಗಳೆಲ್ಲವೂ ಸ್ತ್ರೀಯರಲ್ಲಿ ಮಂದಬುದ್ಧಿಯ ಚಿನ್ಹೆಗಳೆಂದು ಭಾವಿಸಲಾಗದು. ಯೌವನದಲ್ಲಿ ಸ್ತ್ರೀಗಿಂತಲೂ ಪುರುಷನ ಬುದ್ಧಿವಂತಿಕೆ ಮತ್ತು ಗ್ರಹಣಶಕ್ತಿ ಹೆಚ್ಚಿನದಾಗಿರುತ್ತದೆಂದು ಹೇಳುವುದು ತಪ್ಪಾಗದು. ವಾನ್ ಕೈಸರ್, ಸುಪ್ರಸಿದ್ಧ ಮನೋವಿಜ್ಞಾನಿ ಯೂಂಗ್ ಮತ್ತು ಇತರರು ಸಮಸ್ಯಾತ್ಮಕ ಸಂದರ್ಭಗಳಲ್ಲಿ ಸ್ತ್ರೀಯರು ಹೆಚ್ಚು ಯೋಚಿಸದೆ, ಸಮಸ್ಯೆಗಳನ್ನು ಬಿಡಿಸಲು ಯುಕ್ತವಾದ ಉತ್ತರಗನ್ನು ಕೊಡುವುದನ್ನು ಗಮನಿಸಿದ್ದಾರೆ. ವಿವೇಚನೆಯಲ್ಲಿ ಸ್ತ್ರೀ ಕೀಳ್ಮಟ್ಟದವಳೆಂಬುದನ್ನು ಯಾವ ಸಿದ್ಧಾಂತವೂ ಸೂಚಿಸುವುದಿಲ್ಲ. ಆದರೆ, ಸ್ತ್ರೀಯ ತರ್ಕಶಕ್ತಿ ಕಡಿಮೆ ಎಂಬುದನ್ನು ಮಾತ್ರ ಒಪ್ಪಿಕೊಳ್ಳಬಹುದು. ಮಾನವನು, ಭಾವನೆಗಳ ಅಂತರಸಂಪರ್ಕಗಳಿಗೆ ಯಾವುದಾದರೂ ಒಂದು ವಿಧಾನವನ್ನು ಕಂಡುಹಿಡಿದಿದ್ದರೆ, ಇಲ್ಲವೆ ಅನುಭವಗಳ ಅಂತರಸಂಪರ್ಕಕ್ಕೆ ಸಾಧನವೇನನ್ನಾದರೂ ಕಂಡುಹಿಡಿದಿದ್ದರೆ ಅಥವ ಒಂದು ಮನಸ್ಸಿನಿಂದ ಮತ್ತೊಂದು ಮನಸ್ಸಿಗೆ ಅನುಭವಗಳನ್ನು ಸ್ಪರ್ಶೋ

ಚ್ಚಾರಣೆಗಳ ಮೂಲಕವಲ್ಲದೆ ಬೇರೆ ಯಾವುದಾದರೂ ವಿಧವಾದ ಸಾಧನವೊಂದನ್ನು ಕಂಡುಹಿಡಿದಿದ್ದರೆ—ಆಗ ಸ್ತ್ರೀಯು ಬುದ್ಧಿವಂತಿಕೆಯಲ್ಲಿ ಪುರುಷನನ್ನು ಮೀರಿಸುತ್ತಿದ್ದಳು. ಸಾಮಾನ್ಯವಾಗಿ ಸ್ತ್ರೀ ತನ್ನ ಭಾವನೆಗಳನ್ನು ಮಾತಿಗೆ ಬದಲಾಗಿ ಮೌನದಲ್ಲಿ ತೋರಿಸುವ ಶಕ್ತಿಯನ್ನು ಹೊಂದಿದ್ದಾಳೆ.[21] ವಸ್ತುಗಳ ಗೂಢಾರ್ಥವನ್ನು ತಿಳಿಯುವ ಚಾತುರ್ಯ ಸ್ತ್ರೀಯದು. ಸ್ತ್ರೀಯ ಮೃದು ಸ್ವಭಾವ ಮತು ತಾಳ್ಮೆ ಕುಟುಂಬ ಜೀವನಕ್ಕೆ ಅವಶ್ಯಕ. ಈ ಗುಣಗಳಿಂದಲೇ ಮಕ್ಕಳನ್ನು ಶೈಶವಾವಸ್ಥೆಯಲ್ಲಿ ಆಕೆ ಪುರುಷರಿಗಿಂತ ಚೆನ್ನಾಗಿ ಪೋಷಿಸಬಲ್ಲಳು.[22] ಮಕ್ಕಳು ಹೆಂಗಸರೊಡನೆ ಬೇಗ ಹೊಂದಿಕೊಳ್ಳುವರಲ್ಲದೆ, ಹೆಂಗಸರು ಮಕ್ಕಳನ್ನು ಮಮತೆಯಿಂದ ನೋಡಿಕೊಳ್ಳುತ್ತಾರೆ. ಸ್ತ್ರೀಯ ಕೋಮಲ ಹೃದಯ ತಾಳ್ಮೆಯ ಬೆಳಕನ್ನು ಹರಿಸಬಲ್ಲದು. ಪುರುಷ ಕಣ್ಣಿನಿಂದ ನೋಡಲಾಗದ್ದನ್ನು ಸ್ತ್ರೀ ಹೃದಯದ ಮೂಲಕ ಕಂಡುಕೊಳ್ಳುತ್ತಾಳೆ. ಜನರನ್ನು ಅರ್ಥಮಾಡಿಕೊಳ್ಳುವ ಜಾಣ್ಮೆಯಲ್ಲಿ ಸ್ತ್ರೀ ಪುರುಷನಿಗಿಂತ ಮುಂದಿದ್ದಾಳೆ. ಸ್ತ್ರೀಯ ಬುದ್ಧಿ ಸೂಕ್ಷ್ಮವಾದದ್ದು. ಗಂಡುನಾಯಿಗಿಂತ ಹೆಣ್ಣುನಾಯಿಗಳಲ್ಲಿ ಬುದ್ಧಿ ಬಲು ಸೂಕ್ಷ್ಮವೆಂದು ಹೇಳುತ್ತಾರೆ: ಪ್ರಾಣಿವರ್ಗದ ಇಂಥ ಸಾಕ್ಷ್ಯಗಳ ಆಧಾರಗಳ ಮೇಲೆ ನಡೆಸಿದ ಅಧ್ಯಯನಗಳಿಂದ ಪುರುಷರಿಗಿಂತ ಸ್ತ್ರೀಯರಲ್ಲಿ ಉನ್ನತ ಮಟ್ಟದ ಮನೋ ಸೂಕ್ಷ್ಮತೆಯನ್ನು ಮನೋವಿಜ್ಞಾನಿಗಳು ಕಂಡಿದ್ದಾರೆ.

ಸೂಚನೆ, ಅನುಸರಣೆ ಮತ್ತು ಸಹಾನುಭೂತಿ–ಇವುಗಳ ಆಧಾರದ ಮೇಲೆ ಸಾಗುತ್ತಿರುವ ಸಾಮಾಜಿಕ ಜೀವನದಲ್ಲಿ ಸಂವೇಗಾತ್ಮಕ ಸಂಬಂಧಗಳನ್ನು ಬೆಳೆಸುವಲ್ಲಿ ಸ್ತ್ರೀಯು ಪುರುಷನನ್ನು ಮೀರಿಸಿದ್ದಾಳೆ. ಇತಿಹಾಸ ಪುರಾಣಗಳಲ್ಲಿ ಸ್ತ್ರೀಯರನ್ನು ಅತಿ ಭೋಗಿಗಳೆಂದೂ, ಆಶಾವಾದಿಗಳೆಂದೂ, ಅಪಶಕುನ ನುಡಿಯುವ ಮತ್ತು ಕಾಯಿಲೆ ಗುಣಪಡಿಸುವ ಮಾಟಗಾತಿಯರೆಂದೂ ಹೇಳಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ.[23]

ಸ್ತ್ರೀಯ ಮನಸ್ಸು ಸಾಧಾರಣವಾಗಿ ಅಂತರ್ಮುಖವಾದುದೆಂದು ಹೇಳುವುದಕ್ಕಾಗುವುದಿಲ್ಲ. ವ್ಯಕ್ತಿಯು ತನ್ನತನವನ್ನು ಬಿಕ್ಕಟ್ಟಿಗೆ ಗುರಿಪಡಿಸದೆ, ಪ್ರಪಂಚದ ರೀತಿ ನೀತಿಗಳಿಗೆ ತಕ್ಕಂತೆ ತನ್ನ ಅಭಿಲಾಷೆಗಳನ್ನು ಹೊಂದಿಸಿಕೊಳ್ಳಲು ಆತನ ಆಂತರಿಕ ಮತ್ತು ಬಾಹ್ಯ ಪ್ರವೃತ್ತಿ ನೆರವಾಗುವುವು. ಅದುದರಿಂದ, ಅಂತರ್ಮುಖತೆ ಮತ್ತು ಬಹಿರ್ಮುಖತೆ ಎಂಬ ಪ್ರಶ್ನೆ ಇಲ್ಲಿ ಉದ್ಭವಿಸುವುದಿಲ್ಲ. ಪ್ರಪಂಚದ ರೀತಿ–ನೀತಿಗಳನ್ನರಿತು, ಅವುಗಳಿಗೆ ತಕ್ಕಹಾಗೆ ನಡೆದುಕೊಳ್ಳುವುದು ಪುರುಷನ ಕೆಲಸ. ಪುರುಷನ ಸೂಕ್ಷ್ಮ ಮನಸ್ಸು ಬಾಣದ ತುದಿ ಇದ್ದಂತೆ. ಅದರ ಹಿಡಿತಕ್ಕೆ ಸಿಗುವ ಎಲ್ಲವನ್ನೂ ಭೇದಿಸಿ ಹರಿಯುವುದೇ ಅದರ ಕೆಲಸ. ಅದರಿಂದ ಪ್ರೇರೇಪಿತವಾಗಿ ಪ್ರಭಾವಕ್ಕೆ ಬಂದದ್ದು ತಿಳುವಳಿಕೆ. ಮಾನವ, ಪ್ರಾಥಮಿಕವಾಗಿ, ಪ್ರಪಂಚ ಸುಧಾರಕ. ಅವನ ಸ್ಮೃತಿ ಕೇಂದ್ರಿಕೃತವಾದದ್ದು, ಅದು ವ್ಯಾಪಕವಾದದ್ದು ಹಾಗೂ ಜ್ಞಾನವನ್ನು ಅನ್ವೇಷಿಸತಕ್ಕದ್ದು. ತಾನು ಸೃಷ್ಟಿಸದ ಪ್ರಪಂಚದಲ್ಲಿ ಮನುಷ್ಯ ಎಲ್ಲದರಲ್ಲೂ ಸುಖವಾಗಿದ್ದಾನೆ. ತನ್ನ ಅವಶ್ಯಕತೆಗಳಿಗೆ ಎಲ್ಲಿಯವರೆವಿಗೆ ಸಮಾಜ ನೆರವು ನೀಡು

ವುದೋ ಅಲ್ಲಿಯ ವರೆವಿಗೆ ಸಂತೃಪ್ತಿಯಿಂದ ಜನರೊಂದಿಗೆ ಬೆರೆಯುತ್ತಾನೆ. ತನ್ನ ಅವ್ಯಶಕತೆಗಳಗೆ ಪ್ರತಿಯಾಗಿ ಸಮಾಜ ವರ್ತಿಸಿದಾಗ ಅದರಿಂದ ದೂರವಾಗಿ, ರೇಷ್ಮೆಯ ಹುಳುವಿನಂತೆ ಮಾನಸಿಕವಾಗಿ ತನ್ನದೇ ಆದ ಗೂಡು ಕಟ್ಟಿಕೊಂಡು ಅದರಲ್ಲಿ ಲೀನವಾಗುತ್ತಾನೆ. ಆದುದರಿಂದ, ಮನಸ್ಸಿನ ಆಂತರಿಕ ಮತ್ತು ಬಾಹ್ಯ ಸ್ವಭಾವಗಳು, ಸ್ವಾರ್ಥತೆ ಮನುಷ್ಯನಲ್ಲಿ ಎಷ್ಟರ ಮಟ್ಟಿಗೆ ಕೇಂದ್ರೀಕೃತವಾಗಿದೆ ಎಂಬುದನ್ನು ಪ್ರದರ್ಶಿಸುತ್ತವೆ.

ಸ್ತ್ರೀ–ಪುರುಷರಿಬ್ಬರೂ ಸಮಾಜದ ಮತ್ತು ಸಂಸ್ಕೃತಿಯ ಸುಳಿಗೆ ಸಿಕ್ಕಿ ಸ್ವಪ್ರಜ್ಞೆಯನ್ನು ಬೆಳೆಸಿಕೊಳ್ಳುತ್ತಾರೆ. ಈ ಸ್ವಪ್ರಜ್ಞೆಯ ಮೂಲಕ ತಮ್ಮ ಸಾಮಾಜಿಕ ಮತ್ತು ಲೌಕಿಕ ಪರಿಸರಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಈ ರೀತಿ ಯಾಗಿ ವ್ಯಕ್ತಿಯ 'ಸ್ವಾರ್ಥ' ಸಾಮಾಜಿಕವಾಗಿ ಪ್ರೇರೇಪಗೊಂಡು ಸಮಾಜದಿಂದಲೇ ಪೋಷಿತವಾಗುತ್ತದೆ. ಸ್ವಾರ್ಥ, ವ್ಯಕ್ತಿಯ ಜೀವನದ ಪ್ರಾರಂಭದಿಂದ, ಅಂದರೆ ಬಾಲ್ಯದಿಂದಲೇ, ಕುಟುಂಬದ ಆವರಣದಲ್ಲಿ ಹಾಗೂ ಅಲ್ಲಿನ ಹೋರಾಟ ಸಹಕಾರ, ಅಂಗೀಕಾರ ನಿರಾಕರಣೆ, ಪದ್ಧತಿ ಇವೇ ಮೊದಲಾದುವುಗಳಿಂದ ಪ್ರಭಾವಿತವಾಗಿ ಬೆಳೆಯತೊಡಗುತ್ತದೆ. ಬಾಲ್ಯದ ದಿನಗಳಿಂದಲೇ ಗಂಡು ಮತ್ತು ಹೆಣ್ಣು ಮಕ್ಕಳು ಈ ರೀತಿಯ 'ಅಹಂ' ಭಾವನೆಗೆ ಒಳಗಾಗುತ್ತಾರೆ.[24] ಒಂದು ಜನಾಂಗದ ಮಾನಸಿಕ ಅಂಕಿ–ಅಂಶಗಳ ನಕ್ಷೆಯಲ್ಲಿ ಯಾವುದಾದರೂ ನಿರ್ದಿಷ್ಟ ಪರಿಮಾಣದ ಜನರನ್ನು ತೆಗೆದುಕೊಂಡರೆ, ಸಮ ಪರಿಮಾಣದ ಸ್ತ್ರೀ–ಪುರುಷರಿಬ್ಬರಲ್ಲೂ ಅಂತರ್ಮುಖ ಮತ್ತು ಬಹಿರ್ಮುಖ ಸ್ವಭಾವಗಳನ್ನು ಕಾಣಬಹುದು. ಆದುದರಿಂದ, ಅಂತರ್ಮುಖ ಸ್ವಭಾವ ಸ್ತ್ರೀ ಮನದ ಗುಣವಿಶೇಷವೂ ಅಲ್ಲ, ಬಹಿರ್ಮುಖ ಸ್ವಭಾವ ಪುರುಷನ ಮನದ ಗುಣವಿಶೇಷವೂ ಅಲ್ಲ. ಇದರ ಬದಲಾಗಿ, ಮನಸ್ಸಿನ ಪ್ರವೃತ್ತಿಯನ್ನು ತಟಸ್ಥ, ಸಂಕುಚಿತ, ವಿಕಾರ ಪ್ರವೃತ್ತಿಗಳೇ ಮೊದಲಾದ ಪ್ರವೃತ್ತಿಗಳಾಗಿ ವಿಂಗಡಿಸಿ ತೋರಿ ಸುವ ಪಕ್ಷದಲ್ಲಿ ವಿಕಾಸ, ತಾಳ್ಮೆ, ಸಹಾನುಭೂತಿ ಇವೇ ಮುಂತಾದ ಪ್ರವೃತ್ತಿಗಳು ಸ್ತ್ರೀಯ ಪ್ರವೃತ್ತಿಗಳಾಗಿ ಕಾಣಿಸಿಕೊಳ್ಳುತ್ತವೆ. ಸ್ತ್ರೀಯ ಮನವು ಎಲ್ಲ ಮೃದು ಸ್ವಭಾವ ಗಳಿಗೂ ಭಂಡಾರವಾಗಿರುವುದಲ್ಲದೆ ಅದರಲ್ಲಿ ಪ್ರೇರಕಶಕ್ತಿಯೂ ಹುದುಗಿದೆ. ಅದು ತನ್ನಲ್ಲಿರುವುದನ್ನು ಎಲ್ಲರಿಗೂ ಹಂಚುವುದಲ್ಲದೆ ಇರುವುದನ್ನು ಭದ್ರವಾಗಿರಿಸುತ್ತದೆ. ಸ್ತ್ರೀಯ ಮನಸ್ಸು ಸಾಮರಸ್ಯದಿಂದ ಕೂಡಿದೆ. ಆಕೆ ಸ್ವಾವಲಂಬಿಯಾಗಿ ಹಾಗೂ ಸ್ವಪರಿಪೂರ್ಣಳಾಗಿ ಸಂತೋಷದಿಂದ ಇರುತ್ತಾಳೆ. ಸ್ತ್ರೀಯ ಪ್ರಪ್ರಥಮ ಪ್ರವೃತ್ತಿ ಉತ್ತಮ ಗುಣಗಳನ್ನು ಗ್ರಹಿಸುವುದೇ ಆಗಿದೆ. ಅವಳಲ್ಲಿ ದುರ್ಬಲತೆ ಏನಾದರೂ ಇದ್ದರೆ ಅದು ಗುಣಗ್ರಹಣವೆನ್ನಬಹುದು. ಸಾಮಾಜಿಕ ಜೀವನದಲ್ಲಿ ಈ ರೀತಿಯ ಉದಾರ ಗುಣವನ್ನು ಹಾಗೂ ವಿಶಾಲ ಹೃದಯವನ್ನು ತಪ್ಪಾಗಿ ತಿಳಿದುಕೊಳ್ಳುತ್ತಾರೆ.[25] ಒಬ್ಬ ತಂದೆ ತನ್ನ ಮಗನನ್ನು ಸಮಾಜದಲ್ಲಿ ದೊಡ್ಡ ವ್ಯಕ್ತಿಯಾಗಬೇಕೆಂಬ ಆಸೆ ಯಿಂದ ಸಾಕುತ್ತಾನೆ. ತಾಯಿ ತನ್ನ ಮಗ ಜನರ ಅಟ್ಟನೆಯಿಂದ ದೂರವಿರಬೇಕೆಂದು

ಬಯಸುವುದೇ ಅಲ್ಲದೆ ತನ್ನ ಬಾಹುಗಳಲ್ಲಿ ಇಟ್ಟು ಮಮತೆಯಿಂದ ಪೋಷಿಸುತ್ತಾಳೆ. ಸ್ತ್ರೀ, ಮಮತೆಯ ಪಡಿಯಚ್ಚಾಗಿರುವುದೇ ಇದಕ್ಕೆ ಕಾರಣ.

ಸ್ತ್ರೀಯರು ಒಳ್ಳೆಯ ಸಹವಾಸಿಗಳಾಗಲಾರರು. ಸಂಘಗಳಿಗೆ ಮತ್ತು ಗುಂಪುಗಳಿಗೆ ಅವರ ವಿಧೇಯತೆ ಬಹಳ ಕಡಿಮೆ. ಗುಂಪುಗಾರಿಕೆ ಪುರುಷಲಕ್ಷಣ. ಜನರನ್ನು ಹತೋಟಿಯಲ್ಲಿಟ್ಟು ಗಹನವಾದ ಧ್ಯೇಯಗಳನ್ನು ಸಾಧಿಸುವಂತೆ ಅವರನ್ನು ನಿಯಂತ್ರಿಸುವ ಕಾರ್ಯಗಳಲ್ಲಿ ಮತ್ತು ಸಹಕಾರ ಹಾಗೂ ವಿಧೇಯತೆ ಆವಶ್ಯಕವಾಗಿರುವ ಕೆಲಸಗಳಲ್ಲಿ ಸ್ತ್ರೀಯರು ಮುಂದುವರಿದಿರುವುದು ಅಪರೂಪ. ಆಧುನಿಕ ಜೀವನದಲ್ಲಿ ಸಹಕಾರ, ಹೊಂದಾಣಿಕೆ ಮತ್ತು ಶಿಸ್ತಿನ ಕ್ರಮಗಳು ಯಶಸ್ವಿಯಾಗಿದ್ದರೆ ಅದು ಪುರುಷನ ಪ್ರಯತ್ನದಿಂದಲ್ಲದೆ ಮತ್ತೆ ಯಾವುದರಿಂದಲೂ ಅಲ್ಲ.

ಧರ್ಮಶ್ರದ್ಧೆ, ಮಾನವಪ್ರೇಮ, ಜೀವನದ ಆದರ್ಶಗಳು, ಸಭ್ಯ ನಡತೆ ಇವೇ ಮುಂತಾದ ಗುಣಗಳು ಸಮುದಾಯಗಳಲ್ಲಿ ಮತ್ತು ಏಕಾಂತ ಜೀವಿಗಳಲ್ಲಿ ಕಂಡು ಬರುವ ಮೌಲ್ಯಗಳು. ಇಂಥ ಜೀವನದ ಮೌಲ್ಯಗಳೇ ಸಮಾಜ ಅಧೋಗತಿಗೆ ಇಳಿಯದಂತೆ ರಕ್ಷಿಸುವ ಸತ್ತ್ವಗಳು. ಅನುಭವಗಳು ಈ ಮೌಲ್ಯಗಳಿಂದ ವ್ಯಕ್ತಿಯಲ್ಲಿ ಹೊಸ ಚೈತನ್ಯ ತುಂಬುತ್ತದೆ. ಈ ಜೀವನ ಮೌಲ್ಯಗಳನ್ನು ಸ್ವೀಕರಿಸುವವರು ಪ್ರಾಪಂಚಿಕ ಜೀವನದಿಂದ ದೂರವಾದ ಯೋಗಿಗಳಂತೆ, ಪ್ರಾಪಂಚಿಕ ಗಲಭೆಗಳಿಂದ ದೂರ ವಿಟ್ಟ ಮಕ್ಕಳಂತೆ ಆಗುತ್ತಾರೆ. ಇಂಥ ಮೌಲ್ಯಗಳಿಂದ ಪ್ರಭಾವಿತನಾದ ವ್ಯಕ್ತಿ ಎಲ್ಲವನ್ನೂ ರಕ್ಷಿಸುವ ಸ್ತ್ರೀಯ ಗುಣಗಳನ್ನು ಪಡೆದುಕೊಳ್ಳುತ್ತಾನೆ. ಪರಿಶುದ್ಧನಾಗುತ್ತಾನೆ. ಹೀಗಿರುವಲ್ಲಿ ಸ್ತ್ರೀ, ವಿಶ್ವದ ಸಕಲ ಜೀವರಾಶಿಗಳನ್ನೂ ಸೃಷ್ಟಿಸಿ ರಕ್ಷಿಸುವ ಹಾಗೂ ಎಲ್ಲಾ ಜೀವಿಗಳನ್ನೂ ಸಮನಾಗಿ ಕಾಣುವ ಶಕ್ತಿಯನ್ನೇ ಹೋಲುತ್ತಾಳೆ.

**ಸಂದರ್ಭಸೂಚಿ :**


1. *The Relationship of Sexuality with the Person*: Xavier De Ligauac, in *Body and Spirit* by Audre Berge, etc., (translated by Donald All Water) Longmans Green & Co., 1939, pp. 17–32.
2. *Sexual Behavior of American Female*; G. S. Ghurye, pp. 8–10.
3. Ghurye, *Op. Cit.*, pp. 30–35.
4. *Senses and the Spirit*: Gustave Thibon in *Body and Spirit Ibid*. pp 126–147.
5. *Marriage, Morals and Sex in America*: Sidney Ditzion, Bookman Assn., 1952, pp. 417–427.
6. *Op. Cit.*, G S. Ghurye, pp. 50.

7. *Reflections on Woman* : Richard Curle, Watts and Co., 1956, pp. 106–113.
8. ಇಲ್ಲಿ ಸ್ಥಳಾಭಾವದಿಂದ ಮತ್ತು ಚರ್ಚಿಸಲು ಇರುವ ತೊಡರಿನಿಂದಾಗಿ, ಫ್ರಾಯ್ಡ್‌ರ ಅಭಿಪ್ರಾಯವನ್ನು ಸೂಚಿಸಿ ಮುಂದುವರಿದಿದ್ದೇನೆ.
9. *Op. Cit.* Richard Curle, pp. 2–5.
10. *Op. Cit.* Richard Curle, pp. 170–177.
11. *Ibid.*, pp. 74–82.
12. ಗರ್ಭಾಶಯದಲ್ಲಿ ಅಂಡಾಶಯವು ಹಾಳಾಗಿ 'ಫಾಲಿಕಾಲ್' (Follicile)ನ ಚುಚ್ಚುಮದ್ದು ಕೊಡುವುದರಿಂದ ಉಂಟಾಗುವ ಗರ್ಭಾಶಯದ ಏರಿಳಿತ ಗಳಿಂದ ಹೊರಬೀಳುತ್ತದೆ. ಕೃತಕವಾಗಿ ರಕ್ತಸ್ರಾವವನ್ನು ಹೆಚ್ಚು ಮಾಡಲು ಹೆಚ್ಚಿನ ಪರಿಮಾಣದ ಔಷಧಿಯನ್ನು ಚುಚ್ಚಬೇಕಾಗುತ್ತದೆ.
13. Luteal ದ್ರವದ ಪುರುಷ ಲಕ್ಷಣವು ಜನಜನಿತವಾದದ್ದು.
14. *Feminine Character* : Wiola Klein, Kegan Paul Trench, Trubner & Co., Ltd., 1946, pp. 37–39.
15. *Op. Cit.*, Ghurye, pp. 52-57.
16. *Op. Cit.* Wiola Klein, pp. 45–49.
17. *Sexual Adjustment in Marriage* : Henry Olson, George Allen and Unwin Ltd., 1954, pp. 40–42.
18. *Sex and Social Life* : Ed. Cybil Neville Rolfe, George Allen and Unwin Ltd., 1949, pp. 116–120.
19. *Op. Cit.*, G. S. Ghurye, pp. 20.
20. *Op. Cit.*, Sybil Nevilie Rolfe, 1949, pp. 149–153.
21. *Sexual Behavior in Society* : Alex Comfort, Gerald Duckworth & Co., Ltd., 1950, pp. 115–131,
22. *Op. Cit.* G. S. Ghurye, pp. 28.
23. ಕಾಯಿಲೆ ಗುಣಪಡಿಸುವ ಮಾಟಗಾತಿಯರೆಂದಾಗ ಅವರು ವೈದ್ಯರಲ್ಲವೆಂದಾಗುತ್ತದೆ.
24. *Op. Cit*, Alex Comfort, 1950, pp. 95–99.
25. *A Woman's Best Years* : W. Bexin Wolfe, Garden City Publishing Co., 1935, pp. 19–20.

ಅಧ್ಯಾಯ ೪

# ಮಹಿಳೆಯ ಸ್ಥಾನಮಾನಗಳು

## ಹಿಂದೂ ಸ್ತ್ರೀ

ಭಾರತದ ಸ್ತ್ರೀಯ ಐತಿಹಾಸಿಕ ಅಧ್ಯಯನ ಆಕೆಯ ಸ್ಥಾನಮಾನಗಳಲ್ಲಿದ್ದ ಏರುಪೇರುಗಳನ್ನು ವ್ಯಕ್ತಪಡಿಸುತ್ತದೆ. ವೇದಗಳ ಕಾಲದಲ್ಲಿ ಸ್ತ್ರೀಯರಿಗೆ ಹೆಚ್ಚಿನ ಗೌರವ ಸಿಕ್ಕುತ್ತಿತ್ತು. ಗಂಡಸಿಗೆ ಇದ್ದ ಎಲ್ಲಾ ಹಕ್ಕುಗಳು ಸ್ತ್ರೀಗೂ ಸಹ ಸಲ್ಲುತ್ತಿದ್ದುವು. ಸ್ತ್ರೀಯು ಪುರುಷನ ಸ್ನೇಹಿತೆ ಮತ್ತು ಸಹೋದ್ಯೋಗಿಯಾಗಿರುತ್ತಿದ್ದಳೇ ವಿನಃ ಅವನಿಗಿಂತ ಕೆಳಮಟ್ಟದಲ್ಲಿರಲಿಲ್ಲ. ಅವಳಿಗಿದ್ದ ಹಕ್ಕಿನಿಂದಾಗಿ ತನ್ನ ತಂದೆ ಮತ್ತು ಪತಿಯ ಆಸ್ತಿಗೆ ಹಕ್ಕುದಾರಳಾಗಿದ್ದಳು. "ನನ್ನ ಮಗಳಿಗೆ ಸಲ್ಲಬೇಕಾದ ಅಂತಸ್ತು, ಆಸ್ತಿ ಸಂಪಾದಿಸಲು ಅವಳಿಗಿರುವ ಅರ್ಹತೆ ಮತ್ತು ಅವಳು ಮಾಡುವ ಧರ್ಮಕಾರ್ಯಗಳಿಗೆ ಅಡ್ಡಿಮಾಡಬಾರದು" ಎಂಬ ವೇದಮಂತ್ರವು ಸ್ತ್ರೀಗೆ ಆಸ್ತಿ ಪಡೆಯಲು ಇದ್ದ ಹಕ್ಕನ್ನು ಸೂಚಿಸುತ್ತದೆ.[1]

ವಿದ್ಯೆಯಲ್ಲಿ ಸ್ತ್ರೀಯು ಪುರುಷನ ಸರಿಸಮಾನಳಾಗಿದ್ದಳು. ರಾಜಕೀಯ ಮತ್ತು ಸಾಮಾಜಿಕ ಸಮಸ್ಯೆಗಳ ಬಗ್ಗೆ ಧೈರ್ಯದಿಂದ ಚರ್ಚಿಸುತ್ತಿದ್ದಳು. ಪವಿತ್ರ ಸಮಾರಂಭಗಳಲ್ಲಿ ವೇದಮಂತ್ರಗಳನ್ನು ರಚಿಸುತ್ತಿದ್ದಳಲ್ಲದೆ, ತಾನೆ ಹಾಡುತ್ತಿದ್ದಳು. ಆತ್ರೀ ಕುಲಕ್ಕೆ ಸೇರಿದ ವಿಶ್ವವರಳೆಂಬ ಹೆಂಗಸು ಋಗ್ವೇದದ ಐದನೇ ಪರಿಚ್ಛೇದವನ್ನು ರಚಿಸಿದಳೆಂಬ ಪ್ರತೀತಿ ಇದೆ. ಅಗಸ್ತ್ಯಮಹರ್ಷಿಯ ಪತ್ನಿ ಲೋಪಾಮುದ್ರೆ ವೇದಗಳನ್ನು ರಚಿಸಿದ ಮತ್ತೊಬ್ಬ ಸ್ತ್ರೀ. ಮೈತ್ರೇಯಿಯು ತನ್ನ ಪತಿ ಯಾಜ್ಞವಲ್ಕ್ಯರೊಡನೆ ದಾರ್ಶನಿಕ ವಿಚಾರಗಳನ್ನು ತರ್ಕಿಸುತ್ತಿದ್ದಳಂತೆ.[2]

ಸ್ತ್ರೀ ತನ್ನ ಪತಿಯನ್ನು ತಾನೇ ಆರಿಸಿಕೊಳ್ಳುವ ಪದ್ಧತಿ ರೂಢಿಯಲ್ಲಿತ್ತು. ಸ್ವಯಂವರದ ಮೂಲಕವೇ ಸೀತೆ, ದಮಯಂತಿ, ದ್ರೌಪದಿ ಮೊದಲಾದವರು ತಮ್ಮ ಪತಿಯರನ್ನು ಆರಿಸಿಕೊಂಡಿದ್ದು. ವೇದದಲ್ಲಿರುವ—"ನೀನು ಸ್ನೇಹಿತೆಯಾಗಿರು, ನಮ್ಮ ಸ್ನೇಹ ಸ್ಥಿರವಾಗಿರಲಿ" ಎಂಬ ಗಂಡನ ಕೋರಿಕೆಯು ಮದುವೆಯ ಬಗೆಗಿದ್ದ ನೈಜ ಭಾವವನ್ನು ಸೂಚಿಸುತ್ತದೆ.[3] ಪತ್ನಿ ದೇವರ ವರದಿಂದ ಬಂದವಳೆಂದು ವೇದ ಕಾಲದಲ್ಲಿ ನಂಬಲಾಗಿತ್ತು.[4] ಸ್ವಯಂವರ ಪದ್ಧತಿ, ಸ್ತ್ರೀ ತನ್ನ ಪ್ರೌಢಾವಸ್ಥೆಯಲ್ಲಿ ಸ್ವಂತವಾಗಿ ತನ್ನ ವ್ಯವಹಾರಗಳನ್ನು ನಿರ್ಧರಿಸಿಕೊಳ್ಳುವ ವಿವೇಚನಾಶಕ್ತಿಯನ್ನು ಪಡೆದುಕೊಂಡಾಗ ವಿವಾಹವಾಗುತ್ತಿದ್ದಳೆಂಬುದನ್ನು ತೋರಿಸುತ್ತದೆ.

ವಿಧವಾ ವಿವಾಹಗಳು ಆಚರಣೆಯಲ್ಲಿದ್ದವು. ಪತಿ ಮೃತನಾದ ಮರುಗಳಿಗೆಯಲ್ಲಿ "ಅಜ ಪಂಚಾವನ" ವ್ರತ ಮಾಡುವುದರ ಮೂಲಕ ಸ್ತ್ರೀ ಮರುವಿವಾಹವಾಗುವ ಅವಕಾಶವಿತ್ತು. "ಮರಣಹೊಂದಿದ ಪತಿಯ ಪಕ್ಕದಲ್ಲಿರುವ ಸ್ತ್ರೀಯೆ, ಏಳು ; ನಿನ್ನ ಕೈ ಹಿಡಿಯಲು ಬಯಸುತ್ತಿರುವವನನ್ನು ಒಂದುಗೂಡು" ಎಂಬ ವೇದಮಂತ್ರವು ವಿಧವಾ ವಿವಾಹ ಆಚರಣೆಯಲ್ಲಿತ್ತೆಂಬುದನ್ನು ತೋರಿಸುತ್ತದೆ.[೫]

ಸ್ತ್ರೀಯು ಮಕ್ಕಳನ್ನು ದತ್ತುಪಡೆಯುವ ಅವಕಾಶವನ್ನು ಹೊಂದಿದ್ದಳು. ವದರಿಮತಿ ಹಿರಣ್ಯಪ್ತನನ್ನುದತ್ತು ಪಡೆದ ಮತ್ತು ಅಂಗದೇಶದ ಅರಸ ಲೋಮಪಾದನು ದಶರಥನ ಮಗಳಾದ ಶಾಂತಳನ್ನು ದತ್ತುಪಡೆದ ದೃಷ್ಟಾಂತಗಳು ದತ್ತುಸ್ವೀಕಾರ ಪದ್ಧತಿ ಜಾರಿಯಲ್ಲಿದ್ದಿತೆಂಬುದನ್ನು ಸೂಚಿಸುತ್ತವೆ.

ಕಾಲಕ್ರಮದಲ್ಲಿ ಸ್ತ್ರೀಗೆ, ವೇದಗಳ ಯುಗದಲ್ಲಿ ಇದ್ದಷ್ಟು ಪುರಸ್ಕಾರ ಸಿಕ್ಕುತ್ತಿರಲಿಲ್ಲ. ಆರ್ಯರು ತಮ್ಮ ಸಂಖ್ಯೆ ಸಿಂಧೂ ಬಯಲಿನಲ್ಲಿ ಹೆಚ್ಚಿದಂತೆ, ಉತ್ತರದಿಂದ ಕೆಳಕ್ಕೆ ವಲಸೆ ಹೊರಟರು. ದಕ್ಷಿಣಕ್ಕೆ ಹೊರಟಿದ್ದ ಇವರು ಮೂಲನಿವಾಸಿಗಳ ಪ್ರದೇಶಗಳ ಮೂಲಕ ಹಾದುಹೋಗಬೇಕಾಯಿತು. ಸಂಖ್ಯೆಯಲ್ಲಿ ಕಡಿಮೆ ಇದ್ದ ಆರ್ಯರು ಮೂಲ ನಿವಾಸಿಗಳೊಡನೆ ಜಗಳವಾಡುತ್ತಾ ಮತ್ತಷ್ಟು ಕಡಿಮೆಯಾಗಬೇಕಾಯಿತು. ಇದರಿಂದ ನಿರಾಶರಾಗಿ ಇವರು ತಮ್ಮ ಗುಂಪನ್ನು ಉಳಿಸಿಕೊಳ್ಳಲು ಗಂಡು–ಹೆಣ್ಣು ಸಂತಾನವನ್ನು ಕೊಡುವಂತೆ ಇಂದ್ರನಿಗೆ ಮೊರೆಯಿಟ್ಟರು. "ಓ ಇಂದ್ರನೆ, ಈ ಸ್ತ್ರೀ ಹತ್ತು ಗಂಡುಗಳನ್ನು ಹೆತ್ತು, ಇವಳ ಪತಿಯೇ ಕುಟುಂಬದಲ್ಲಿ ಹನ್ನೊಂದನೆಯವನಾಗಲಿ ಎಂಬ ವರವನ್ನು ಕೊಡು" ಎಂದು ಪ್ರಾರ್ಥಿಸುತ್ತಿದ್ದರು. ಆರ್ಯರಲ್ಲಿ ಹೆಣ್ಣಿಗಿಂತ ಗಂಡಿಗೆ ಹೆಚ್ಚು ಪ್ರಾಧಾನ್ಯವಿತ್ತು. ಇದರಿಂದಾಗಿ ಎಲ್ಲಾ ಗಂಡಸರನ್ನು ಹೆಚ್ಚಿನ ಗೌರವದಿಂದ ಕಾಣಲಾಗುತ್ತಿತ್ತು.[೬] ಆರ್ಯರು ಮೂಲನಿವಾಸಿಗಳೊಡನೆ ಹೋರಾಡಿ, ಅವರ ನೆಲೆಗಳನ್ನು ಆಕ್ರಮಿಸಿಕೊಂಡ ಮೇಲೆ, ಮೂಲ ನಿವಾಸಿಗಳ ಸ್ತ್ರೀಯರನ್ನು ಸೆರೆಹಿಡಿದು ತಮ್ಮ ಸೇವೆಗಾಗಿ ದಾಸಿಯರನ್ನಾಗಿ ನೇಮಿಸಿಕೊಳ್ಳುತ್ತಿದ್ದರು. ಗೆದ್ದ ಪ್ರದೇಶಗಳ ಜನರೊಡನೆ ಆರ್ಯರು ವಿವಾಹ ಸಂಬಂಧಗಳನ್ನು ಬೆಳೆಸಿಕೊಂಡುದರಿಂದ ಆರ್ಯರ ಸ್ತ್ರೀಯ ಗೌರವ–ಘನತೆಯ ಬಗ್ಗೆ ವಿಷಬೀಜ ಬಿತ್ತಿದಂತಾಯಿತು. ಇದರಿಂದಾಗಿ, ಬಹುಪತ್ನಿತ್ವವು ಆರ್ಯರ ಸಾಮಾಜಿಕ ಜೀವನದಲ್ಲಿ ಪ್ರವೇಶಿಸಿತು.

ಆರ್ಯರ ಯಜ್ಞ–ಯಾಗಗಳಲ್ಲಿ ವೇದಗಳಿಗನುಸಾರವಾಗಿ ಗಂಡ ಹೆಂಡತಿಯರು ಭಾಗವಹಿಸುತ್ತಿದ್ದರಲ್ಲದೆ, ದೇವರೇ ದಯಪಾಲಿಸಿದ "ಸೋಮರಸ"ವನ್ನು ಸೇವಿಸುತ್ತಿದ್ದರು. ಸೋಮರಸದ ಉಪಯೋಗ ಶೀತಪ್ರದೇಶದಲ್ಲಿ ಹಿತಕರವಾಗಿದ್ದರೂ, ಅದು ಉಷ್ಣಪ್ರದೇಶಗಳಲ್ಲಿ ಅಮಲೇರಿಸುವ ಪಾನೀಯವಾಗಿತ್ತು. ಈ ಮಾದಕ ಪಾನೀಯವನ್ನು ತಡೆದುಕೊಳ್ಳುವ ಶಕ್ತಿ ಸ್ತ್ರೀಯರಿಗಿರಲಿಲ್ಲ. ಆರ್ಯರು, ತಾವು "ದಸ್ಯು"ಗಳೆಂದು ಕರೆಯುತ್ತಿದ್ದ ಭಾರತದ ಮೂಲನಿವಾಸಿಗಳೊಡನೆ ಆಗಿಂದಾಗ್ಗೆ ಹೋರಾಡಬೇಕಾಗುತ್ತಿದ್ದುದರಿಂದ ಮತ್ತಷ್ಟು ಚೇತನಕಾರಿಯಾದ "ಸುರ" ಪಾನೀಯವನ್ನು ಕಂಡುಹಿಡಿ

ದರು. ಯಜ್ಞ-ಯಾಗಗಳಿಗೆ ಅವಶ್ಯಕವಾಗಿ ಬೇಕಾಗಿದ್ದ ಈ ಪಾನವನ್ನು ಹೆಂಗಸರು ಸೇವಿಸಲು ಅಸಮರ್ಥರಾದುದರಿಂದ ಅವರು ಕ್ರಮೇಣ ಮೇಲಿನ ವೈದಿಕ ಸಮಾರಂಭಗಳಲ್ಲಿ ಭಾಗವಹಿಸುವುದು ಕಡಿಮೆಯಾಯಿತಲ್ಲದೆ, ವೇದಗಳ ಪಾರಾಯಣ ಗಂಡಸರ ಹಕ್ಕಾಯಿತು. ಜ್ಞಾನದ ಏಕಮಾತ್ರ ಮೂಲವಾಗಿದ್ದ ವೇದಗಳು ಪುರುಷರ ಅಧೀನವಾದುದರಿಂದ, ಗೃಹಕೃತ್ಯಗಳನ್ನು ನೋಡಿಕೊಳ್ಳುವ ಹೊಣೆ ಸ್ತ್ರೀಯರದಾಯಿತು. ದಿನ ಕಳೆದಂತೆ ಸ್ತ್ರೀ-ಪುರುಷರಲ್ಲಿನ ಸ್ಥಾನಮಾನಗಳ ಅಂತರ ಹೆಚ್ಚಾಗತೊಡಗಿತಲ್ಲದೆ, ಇದರ ಪರಿಣಾಮವಾಗಿ ಪುರುಷನ ಜೊತೆ ಸ್ತ್ರೀಯ ಸಮಾನತೆ ಕ್ಷೀಣಿಸಲು ಪ್ರಾರಂಭವಾಗತೊಡಗಿತು.

ಇದೇ ಸಮಯದಲ್ಲಿ, ಬಾದರಾಯಣ (ವೇದವ್ಯಾಸ) ಮತ್ತು ಆತನ ಶಿಷ್ಯ ಜೈಮಿನಿ ಪುನಃ ವೇದಪಾರಾಯಣಗಳಲ್ಲಿ ಸ್ತ್ರೀಗೆ ಸ್ಥಾನ ಕಲ್ಪಿಸಿಕೊಡಲು ಮುಂದಾದರು. ಪುರುಷನಷ್ಟೇ ಸ್ತ್ರೀಗೂ ಕೂಡ ಸಮಾನ ಹಕ್ಕುಗಳಿರಬೇಕೆಂಬ ವಾದವನ್ನು ಮುಂದಿಟ್ಟರು. ಆದರೆ, ಕಾಲಪರಿಸ್ಥಿತಿ ಅವರ ವಿರುದ್ಧವಾಗಿದ್ದು, ಆ ವೇಳೆಗಾಗಲೇ ವೇದಗಳು ಸ್ತ್ರೀಯರನ್ನು ಉನ್ನತ ಸ್ಥಾನದಿಂದ ದೂರಮಾಡಿದ್ದಿತು. ಆರ್ಯರ ಸಂಸ್ಕೃತಿ ಭಾರತದ ಮೂಲನಿವಾಸಿಗಳ ಸಂಸ್ಕೃತಿಯೊಡನೆ ವಿಲೀನವಾಗಿದ್ದುದರಿಂದ, ಆರ್ಯ ಸ್ತ್ರೀಯ ಸ್ಥಾನವು ಮತ್ತಷ್ಟು ಕುಂದಿತು. ಸ್ತ್ರೀಯ ಸ್ಥಾನಮಾನಗಳಿಗೆ ಹೋರಾಡಲು ನಿಂತ ಜೈಮಿನಿ ಖಂಡನೆಗೆ ಗುರಿಯಾದ. ಸ್ತ್ರೀಯು ವೇದಗಳನ್ನು ಪಾರಾಯಣ ಮಾಡಲು ಮತ್ತು ಯಜ್ಞ-ಯಾಗಾದಿಗಳಲ್ಲಿ ಭಾಗವಹಿಸಲು ಅನರ್ಹಳೆಂದು ಗೌತಮನು ಘೋಷಿಸಿದನು. ಸ್ತ್ರೀಯರನ್ನು ಆಸ್ತಿಯ ಒಂದು ಭಾಗವೆಂದು ಪರಿಗಣಿಸಿದ್ದುದರಿಂದ ಅವರಿಗೆ ಆಸ್ತಿಯ ಮತ್ತು ದತ್ತುಸ್ವೀಕಾರದ ಹಕ್ಕು ಇಲ್ಲದಂತಾಯಿತು. ಸ್ತ್ರೀಯನ್ನು ಭೂಮಿ, ದನಕರುಗಳು ಮತ್ತು ಇತರ ಸಂಪತ್ತುಗಳಂತೆ ಸಂಪತ್ತಿನ ಒಂದು ಭಾಗವೆಂದು ಗೌತಮನು ಸಾರಿದನಲ್ಲದೆ, ತನ್ನ ಗಂಡನಿಂದ ಸಂತಾನವಿಲ್ಲದೆ ಹೋದರೆ, ಆಕೆ ಬೇರೊಬ್ಬನಿಂದ ಸಂತಾನ ಪಡೆಯಬಹುದೆಂದು ಸೂಚಿಸಿದನು; ವಿಧವೆಗೆ ಮಕ್ಕಳಿಲ್ಲದೆ ಹೋದರೆ ಆಕೆಗೆ ಗಂಡನ ಆಸ್ತಿಯ ಬಗ್ಗೆ ಹಕ್ಕು ಇರುತ್ತಿರಲಿಲ್ಲವಾದ್ದರಿಂದ, ಆಕೆಯು ತನ್ನ ಸಂಬಂಧಿಕರಿಂದ, ಅದರಲ್ಲೂ ವಿಶೇಷವಾಗಿ ಗಂಡನ ಸಹೋದರರ ಮೂಲಕ ಮಗುವೊಂದನ್ನು ಹಡೆಯಬಹುದಿತ್ತು. ಇಲ್ಲವಾದರೆ ಗಂಡನ ಆಸ್ತಿಯನ್ನು ಆಕೆ ಗಂಡನ ಬಂಧುಗಳೊಡನೆ ಹಂಚಿಕೊಳ್ಳಬೇಕಾಗಿತ್ತು.

ವಸಿಷ್ಠ ಮತ್ತು ಬೌಧಾಯನ ಸ್ತ್ರೀಯರ ಬಗ್ಗೆ ಕಠಿಣವಾದ ಅಭಿಪ್ರಾಯ ಹೊಂದಿದ್ದರಲ್ಲದೆ, ಪುರುಷನು ಸ್ತ್ರೀಯ ಯಜಮಾನನಾದುದರಿಂದ ಸ್ತ್ರೀಗೆ ಯಾವ ಸ್ವಾತಂತ್ರ್ಯವೂ ಇರಕೂಡದೆಂದೂ ಮತ್ತು ಸ್ತ್ರೀ ವೇದವನ್ನು ಪಠಿಸಬಾರದಾದ ಕಾರಣ ಆಕೆಗೆ ಸಮಾರಂಭಗಳಲ್ಲಿ ಪ್ರಮುಖಪಾತ್ರ ವಹಿಸಲು ಅವಕಾಶವಿರಬಾರದೆಂದೂ ಸಾರಿದರು. ಅವರ ಅಭಿಪ್ರಾಯದಲ್ಲಿ ಸ್ತ್ರೀಯರಿಗೆ ಆಸ್ತಿಗೆ ಹಕ್ಕಿರಲಿಲ್ಲ. ಸ್ತ್ರೀಯನ್ನು ಆಸ್ತಿಯ ಒಂದು ಭಾಗವೆಂದು ಪರಿಗಣಿಸಿದ್ದುದರಿಂದ "ವ್ಯಾಪರ ಮೂಲಕದ" ವಿವಾಹ

ಪದ್ಧತಿ ಆಚರಣೆಗೆ ಬಂದಿತು. ಬಂಜೆ ಹಾಗೂ ಜಗಳಗಂಟಿ ಹೆಂಡತಿಯನ್ನು ಗಂಡ ತ್ಯಜಿಸಬಹುದೆಂದು ಅವರು ಸೂತ್ರಗಳನ್ನು ರಚಿಸಿದರು. ನಿಯೋಗ ಪದ್ಧತಿಯ ವಿವಾಹವನ್ನು ಅಗೌರವದಿಂದ ಕಾಣುತ್ತಿದ್ದರಲ್ಲದೆ, ಪುನರ್ವಿವಾಹವನ್ನು ನಿಷೇಧಿಸ ಲಾಗಿತ್ತು. ವಿಧವೆಯರು ತಮ್ಮ ತಲೆಯ ಮೇಲಿನ ಕೂದಲನ್ನು ತೆಗೆದು, ವೈರಾಗ್ಯದ ಜೀವನವನ್ನು ಸಾಗಿಸಬೇಕಾಗಿತ್ತು. ಬಹುಶಃ, ಈ ಕಾಲದಿಂದಲೇ ಭಾರತೀಯ ವಿಧವೆ ಯರ ವಿರೂಪ ಆರಂಭವಾಗಿರಬೇಕೆಂದು ತೋರುವುದು.

ಈ ಯುಗದ ಅಂತ್ಯದಲ್ಲಿ ಸ್ತ್ರೀಯ ಸ್ಥಾನಮಾನಗಳ ಪುನರುತ್ಥಾನವಾದಂತೆ ಕಂಡುಬರುತ್ತದೆ. ಹಿಂದೆ ವಿಧವೆಯು ಪೂರ್ಣವಾಗಿ ತಲೆಗೂದಲನ್ನು ತೆಗೆಯ ಬೇಕೆಂದಿದ್ದ ನಿಯಮಕ್ಕೆ ಪ್ರತಿಯಾಗಿ ಎರಡು ಬೆರಳುಗಳಷ್ಟು ಉದ್ದದ ಕೂದಲನ್ನು ತೆಗೆದರೆ ಸಾಕೆಂಬ ಪದ್ಧತಿ ಆಚರಣೆಗೆ ಬಂದು ಪತಿಯ ಆಸ್ತಿಗೆ ಆಕೆ ಭಾಗಿಯಾದಳು. ಆದರೆ, ವಿಧವೆಯರಿಗೆ ವಂಶಪಾರಂಪರ್ಯವಾದ ಆಸ್ತಿಯನ್ನು ಪಡೆಯಲು ಹಕ್ಕಿರಲಿಲ್ಲ.

ವೇದಗಳ ಕಾಲದಲ್ಲಿಯೇ ಮನು ಮತ್ತು ಕಾತ್ಯಾಯನ ಸ್ತ್ರೀಯ ಸ್ಥಾನ ಮಾನಗಳನ್ನು ಎತ್ತಿಹಿಡಿದರು. ಸ್ತ್ರೀ ತನ್ನ ಪತಿ ನಿರ್ವೀರ್ಯನಾಗಿದ್ದರೆ ಅಥವಾ ಮತಿವಿಕಲ್ಪವುಳ್ಳವನಾಗಿದ್ದರೆ ಇಲ್ಲವೆ ಗುಣವಾಗದ ಕಾಯಿಲೆಯುಳ್ಳವನಾಗಿದ್ದರೆ ಆತನನ್ನು ತ್ಯಜಿಸಬಹುದೆಂದೂ, ಮೊದಲ ಪತಿಯಿಂದ ಸಂತಾನವಾಗದಿದ್ದರೆ ಪುನರ್ವಿವಾಹ ಮಾಡಿಕೊಳ್ಳಬಹುದೆಂದೂ, ಎರಡನೆಯ ಪತಿಯಿಂದ ಹುಟ್ಟಿದ ಆಕೆಯ ಮಕ್ಕಳಿಗೆ ಆಸ್ತಿಯ ಹಕ್ಕಿರಬೇಕೆಂದೂ ಮನು ಹೇಳುತ್ತಾನೆ. ಸ್ತ್ರೀಯರಿಗೆ ಎಲ್ಲಿ ಮಾನ್ಯತೆ ಇದೆಯೋ ಅಲ್ಲಿ ದೇವರಿರುವನೆಂಬುದನ್ನು ಮನು ಸಾರಿದನು. ಸ್ತ್ರೀ ಯಜ್ಞ-ಯಾಗಗಳನ್ನು ಮಾಡಲು ಯೋಗ್ಯಳಲ್ಲವೆಂದೂ, ವೇದಗಳನ್ನು ಕಲಿಯಲು ಅರ್ಹಳಲ್ಲವೆಂದೂ ಅವನು ಹೇಳಿರುತ್ತಾನೆ.

ಸ್ತ್ರೀ ತನ್ನ ಪತಿಯಲ್ಲಿ ದುರ್ಗುಣಗಳಿದ್ದರೂ ಪತಿಯೇ ದೈವವೆಂದು ತಿಳಿದು ಅವನನ್ನು ಪೂಜಿಸಿದರೆ ಸ್ವರ್ಗದಲ್ಲಿ ಹೊಗಳಿಸಿಕೊಂಡು ಮುಕ್ತಿಹೊಂದುವಳೆಂದು ಮನು ಉಪದೇಶಿಸಿದನಲ್ಲದೆ, ಗಂಡನನ್ನು ಕಡೆಗಣಿಸಿ ನಡೆದುಕೊಳ್ಳುವ ಸ್ತ್ರೀಯನ್ನು ಎಲ್ಲ ಸುಖ-ಸೌಲಭ್ಯಗಳಿಂದ, ಒಡವೆಗಳಿಂದ ಮೂರು ತಿಂಗಳ ಕಾಲ ದೂರವಿಡ ಬೇಕೆಂದು ತಿಳಿಸುತ್ತಾನೆ. ಮನು ವಿಧಿಸಿರುವ ನಿಯಮಗಳಂತೆ ಪತಿ, ಪತ್ನಿಯನ್ನು ಬಿಟ್ಟಿರಬಹುದಿತ್ತೇ ವಿನಃ, ಪತ್ನಿಯು ಪತಿಯನ್ನು ಬಿಡಲು ಅವಕಾಶವಿರಲಿಲ್ಲ. ಸ್ತ್ರೀಗೆ ಯಾವ ವಿಧವಾದ ಸ್ವಾತಂತ್ರ್ಯವೂ ಇರಬಾರದೆಂಬುದು ಮನುವಿನ ವಾದವಾಗಿತ್ತು. ಸ್ತ್ರೀ ತನ್ನ ಬಾಲ್ಯದಲ್ಲಿ ತಂದೆಯ ಆಶ್ರಯದಲ್ಲೂ, ವಯಸ್ಕಳಾದಾಗ ಪತಿಯ ರಕ್ಷಣೆ ಯಲ್ಲೂ, ವೃದ್ಧಾಪ್ಯದಲ್ಲಿ ಮಕ್ಕಳ ಆಶ್ರಯದಲ್ಲೂ ಇರಬೇಕಿತ್ತು. ಮನು ಬಾಲ್ಯ ವಿವಾಹವನ್ನು ಒಪ್ಪಿಕೊಂಡಿದ್ದನಲ್ಲದೆ, ತರುಣಿಯು ಅಯೋಗ್ಯನಾದ ವರನನ್ನು ಮದುವೆಯಾಗುವುದಕ್ಕೆ ಬದಲು, ಅವಿವಾಹಿತಳಾಗಿರುವುದೇ ಮೇಲೆಂದು ಅವನು ತಿಳಿಸಿದ್ದಾನೆ.

ವ್ಯಾಸಮಹರ್ಷಿ ಸ್ತ್ರೀಯ ಬಗ್ಗೆ ಹೇಳುತ್ತಾ ಸ್ತ್ರೀ, ಪತಿಯ ಆಸ್ತಿಯಲ್ಲಿ 2,000 ಪನಗಳಿಗೆ ಮಾತ್ರ ಅರ್ಹಳು ಎಂದಿದ್ದಾನೆ. ಆದರೆ, ಬೃಹಸ್ಪತಿಯು ವಿಧವೆ ತನ್ನ ಪತಿಯ ಎಲ್ಲ ಆಸ್ತಿಯನ್ನೂ ಪಡೆಯಬಹುದು ಎಂದಿದ್ದಾನೆ. ಹಾಗೆಯೇ, ಕಾತ್ಯಾಯನನು ಪತ್ನಿಯು ಸ್ವತಂತ್ರಳಾಗಿ ಹಣಗಳಿಸಬಹುದು, ಆದರೆ ಆಕೆಯ ಸಂಪಾದನೆ ಪತಿಗೇ ಸೇರಬೇಕು ಎಂದು ಹೇಳಿದ್ದಾನೆ ಹಾಗೂ ಬಹುಪತಿತ್ವವನ್ನು ಖಂಡಿಸಿದ್ದಾನೆ.

ಕಾಲ ಉರುಳಿದಂತೆ ಸ್ತ್ರೀ ಸ್ಥಾನ ಉತ್ತಮಗೊಳ್ಳಲು ಪ್ರಾರಂಭವಾಯಿತು. ಸ್ತ್ರೀಯ ಉನ್ನತಿಗೆ ಕಾರಣರಾದವರಲ್ಲಿ ಯಾಜ್ಞವಲ್ಕ್ಯ ಮತ್ತು ಪರಾಶರ—ಇವರಿಬ್ಬರು ಪ್ರಮುಖರು. ಇವರು ಸ್ತ್ರೀಯ ಆಸ್ತಿಯ ಹಕ್ಕನ್ನು ಎತ್ತಿಹಿಡಿದರು. ಸಂಬಂಧಿಗಳು ಸ್ತ್ರೀಗೆ ಕೊಡುವ ಯಾವ ಬಳುವಳಿಯೇ ಆಗಲಿ, ಅದು ಅವಳ ಸ್ವತ್ತೆಂದು ಅವರು ಸಾರಿದರು. ಇವರ ಕಟ್ಟಳೆಯ ಮೇರೆಗೆ ತಾಯಿಯೂ ಸಹ ಆಸ್ತಿಯಲ್ಲಿ ಪಾಲು ದಾರಳಾಗಬಹುದಿತ್ತು. ಸ್ತ್ರೀಯರಿಗೆ ಹಣಕಾಸಿನ ವ್ಯವಹಾರಗಳನ್ನು ಕೈಗೊಳ್ಳಲು ಅವಕಾಶವಿತ್ತು. ಸ್ತ್ರೀಯರ ಮೇಲೆ ಕೈಮಾಡಿದವರನ್ನು ಶಿಕ್ಷೆಗೆ ಗುರಿಮಾಡುತ್ತಿದ್ದರು. ಪತಿ ಏನಾದರೂ ವಿನಾಕಾರಣ ಪತ್ನಿಯನ್ನು ತ್ಯಜಿಸಿದರೆ, ಅವನ ಆಸ್ತಿಯಲ್ಲಿ ಮೂರನೆ ಒಂದು ಪಾಲು ಪತ್ನಿಗೆ ಸೇರುತ್ತಿತ್ತು. ವಿಧವೆಯರು ಪುನರ್ವಿವಾಹ ಮಾಡಿಕೊಳ್ಳಬಹುದೆಂದು ನಾರದ ಮತ್ತು ಪರಾಶರ ಸಾರಿದರು. ಪತಿ ನಪುಂಸಕನಾಗಿದ್ದಲ್ಲಿ ಅಥವಾ ಮೂರು ತಿಂಗಳಿಂದ ಹಿಡಿದು ಐದು ವರ್ಷಗಳ ಕಾಲ ಪತ್ನಿಯನ್ನು ಕೂಡದಿದ್ದರೆ, ಪತ್ನಿಗೆ ಪುನರ್ವಿವಾಹವಾಗುವ ಹಕ್ಕಿದ್ದಿತು. ಅಂದು ರೂಢಿಯಲ್ಲಿದ್ದ "ನೂರು ತಪ್ಪು ಮಾಡಿದರೂ ಒಂದು ಹೂವಿನ ಕಡ್ಡಿಯಿಂದಲೂ ಸ್ತ್ರೀಯನ್ನು ದಂಡಿಸಬೇಡ" ಎಂಬ ನಾಣ್ಣುಡಿ ಆಗಿನ ಕಾಲದಲ್ಲಿ ಸ್ತ್ರೀಯ ಬಗ್ಗೆ ಇದ್ದ ಗೌರವವನ್ನು ಸೂಚಿಸುತ್ತದೆ.[7]

ಇತಿಹಾಸ ಪೂರ್ವಕಾಲದಲ್ಲಿದ್ದಂತೆ, ಇತಿಹಾಸ ಕಾಲದಲ್ಲೂ ಸ್ತ್ರೀಯರಿಗೆ ಹಲವಾರು ಹಕ್ಕು ಬಾಧ್ಯತೆಗಳಿದ್ದುವು: ಕಾನ ಎಂಬ ಸ್ತ್ರೀ, ತನ್ನ ಪತಿ ತನ್ನ ಗೈರು ಹಾಜರಿಯಲ್ಲಿ ಮತ್ತೊಬ್ಬಳೊಡನೆ ಇದ್ದನೆಂಬ ನೆಪದಿಂದ ಗಂಡನ ಮನೆಗೆ ಹಿಂದಿರುಗಲು ನಿರಾಕರಿಸಿದಳು. ಬುದ್ಧದೇವನ ಬೇಡಿಕೆಯಂತೆ ಒಬ್ಬ ರಾಜ ಅವಳನ್ನು ಬರಮಾಡಿಕೊಂಡು ಗಣ್ಯನೊಬ್ಬನಿಗೆ ವಿವಾಹ ಮಾಡಿಕೊಟ್ಟನು. ಇದೇ ಕಾಲದಲ್ಲಿ ಜೀವಿಸಿದ್ದ ಇಸಿದಾಸಿ ಎಂಬ ವಿರಕ್ತೆಯೊಬ್ಬಳ ಕಥೆ ಸ್ವಾರಸ್ಯವಾಗಿದೆ: ಆಕೆ ತನ್ನ ಐಹಿಕ ಜೀವನದಲ್ಲಿ ಹಲವಾರು ಬಾರಿ ವಿವಾಹವಿಚ್ಛೇದ ಮಾಡಿಕೊಂಡಿದ್ದಳು. ಮೊದಲು ಆಕೆ ಅಯೋಧ್ಯಾಪುರಿಯ ವರ್ತಕನೊಬ್ಬನನ್ನು ವಿವಾಹವಾಗಿದ್ದು, ವಿವಾಹವಾದ ಒಂದು ತಿಂಗಳಲ್ಲೇ ಆತ ಅವಳನ್ನು ಬಿಟ್ಟು ಹೊರಟುಹೋದ; ನಂತರ ಮತ್ತೊಬ್ಬನನ್ನು ಇಸಿದಾಸಿ ಮದುವೆಯಾಗಿ, ಕೆಲವು ದಿನಗಳನಂತರ ಆತನೂ ಹೊರಟುಹೋದ. ಆಕೆಯ ತರುವಾಯದ ವಿವಾಹಗಳು ಕೇವಲ ಹದಿನೈದು ದಿನಗಳೂ ಉಳಿಯಲಿಲ್ಲ.

ಈ ನಿದರ್ಶನಗಳು, ಆ ಕಾಲದಲ್ಲಿ ವಿವಾಹವಿಚ್ಛೇದನ ಪದ್ಧತಿ ಇತ್ತೆಂಬುದನ್ನು ತೋರಿಸುತ್ತವೆ.[೮]

ಸಾಮಾನ್ಯವಾಗಿ ಸ್ತ್ರೀಯರು ದುರ್ಬಲರಾದ ಕಾರಣ ಅವರು ಪಿತೃ, ಸಹೋದರ, ಪತಿ ಮತ್ತು ಪುತ್ರರಿಂದ ರಕ್ಷಿಸಲ್ಪಡಬೇಕೆಂದು ವಿಜ್ಞಾನೇಶ್ವರನ "ಮಿತಾಕ್ಷರ" ಭಾಷ್ಯವು ತಿಳಿಸುತ್ತದೆ. ಅಲ್ಲದೆ, ಸ್ತ್ರೀಧನ ಪದ್ಧತಿ, ಸ್ತ್ರೀ ಆಸ್ತಿಹೊಂದುವ ಸಾಮರ್ಥ್ಯದ ಹೆಗ್ಗುರುತು ಎಂದು ಕೂಡ ಹೇಳಿದ್ದಾನೆ. ಇದೇ ಅಭಿಪ್ರಾಯವನ್ನೇ "ದಾಯಭಾಗ" ಆಸ್ತಿ ಸಂಬಂಧವಾದ ಕಾಯಿದೆಯ ಕರ್ತೃ ಜೀಮೂತವಾಹನನೂ ಹಾಗೂ ವಿದ್ಯಾರಣ್ಯರೂ ಹೊಂದಿದ್ದರು.

ಮಧ್ಯಯುಗದ ಭಾರತೀಯ ಮಹಿಳೆಯರು ತಮ್ಮ ಧೈರ್ಯ ಶೌರ್ಯಗಳಿಂದ, ಬುದ್ಧಿ-ಕೌಶಲದಿಂದ ಪ್ರಖ್ಯಾತರಾಗಿದ್ದಾರೆ: ವೀರಾಗ್ರಣಿ ಪದ್ಮಿನಿ, ಅಹಲ್ಯಾಬಾಯಿ ಮೊದಲಾದವರು ಇದಕ್ಕೆ ನಿದರ್ಶನ. ಇದೇ ಕಾಲದಲ್ಲಿ, ಮಧ್ವಾಚಾರ್ಯರ ಸಹೋದರಿ ಕಲ್ಯಾಣಿಯ ಕೃತಿಗಳು ಪ್ರಸಿದ್ಧವಾಗಿದ್ದವು. ಸ್ತ್ರೀಯರು ಹೆಚ್ಚಿನ ಗೌರವ ಆದರಗಳಿಗೆ ಪಾತ್ರರಾಗಿದ್ದರು.[೯]

ಬ್ರಿಟಿಷರ ಆಡಳಿತ ಪ್ರಾರಂಭವಾದ ಮೇಲೆ ಅವರು ವಿಧಿಸಿದ ಕಾನೂನುಗಳಿಂದ ಸಮಾಜದಲ್ಲಿ ಮಾರ್ಪಾಟುಗಳು ಕಂಡುಬಂದುವು; ಉತ್ತರಾಧಿಕಾರ, ಪಿತ್ರಾರ್ಜಿತ ಆಸ್ತಿಯ ಮೇಲಣ ಹಕ್ಕು, ವಿವಾಹ ಪದ್ಧತಿ ಮತ್ತು ಧಾರ್ಮಿಕ ಸಂಸ್ಥೆಗಳ ಆಡಳಿತ, ಇವು ಭಾರತದಲ್ಲಿ ರೂಢಿಯಲ್ಲಿದ್ದ ನಿಯಮಗಳಿಗನುಸಾರವಾಗಿಯೇ ನಡೆಯಬೇಕೆಂದು ಬ್ರಿಟಿಷರು ಘೋಷಿಸಿದರು. ಮಧ್ಯಸ್ಥಿಕೆಗೆ ಬರದಿರುವ ಸೂತ್ರ ಅವರದಾಗಿತ್ತು. ಬ್ರಿಟಿಷರು ಮೊದಲ ಬಾರಿಗೆ ಮನು ಸ್ಮೃತಿಯನ್ನು ಇಂಗ್ಲಿಷಿಗೆ ಭಾಷಾಂತರಿಸಿ, ಅದರ ನಿಯಮಗಳು ಆಚರಣೆಗೆ ಬರುವಂತೆ ಮಾಡಿದರು. ಅದರಲ್ಲಿನ ನಿಯಮಗಳು ಸ್ತ್ರೀಗೆ ಶಾಶ್ವತ ರಕ್ಷಣೆ ನೀಡಿದವು. ಆದರೆ, ಅಷ್ಟು ಹೊತ್ತಿಗೆ ಭಾರತ ಮಹಿಳೆ ತಾಳಲಾರದ ಸಾಮಾಜಿಕ ಕಟ್ಟಳೆಗಳಿಗೆ ಬಲಿಯಾಗಿದ್ದುದನ್ನು ಕಾಣುತ್ತೇವೆ: ಬಾಲ್ಯವಿವಾಹ, ಕನ್ಯಾ ಶುಲ್ಕ, ಸಹಗಮನ—ಈ ಪದ್ಧತಿಗಳು ಆಚರಣೆಯಲ್ಲಿದ್ದುವು: ಸ್ತ್ರೀ ಪುರುಷನೊಡನೆ ಹೊಂದಿದ್ದ ಸರಿಸಮಾನತೆ ಕಾಣದಂತಾಗಿದ್ದಿತು. ಬ್ರಿಟಿಷರು ಭಾರತೀಯರ ಮೇಲೆ ಹೊರಿಸಿದ ಹಲವಾರು ಕಾಯ್ದೆಗಳಿಂದಲೂ ಸ್ತ್ರೀಯ ಅಂತಸ್ತು ಸಡಿಲವಾಯಿತು: ಭಾರತದ 1850ರ 21ನೇ ಕ್ರಮಾಂಕದ ಕಾಯ್ದೆಯ ಪ್ರಕಾರ ಮಗನೇನಾದರೂ ಮತಾಂತರ ಹೊಂದಿದರೆ ತಾಯಿ ಮಗನನ್ನು ಕಳೆದುಕೊಳ್ಳುವುದಲ್ಲದೆ, ಬೇರೊಬ್ಬನನ್ನು ಮಗನಾಗಿ ದತ್ತುಸ್ವೀಕರಿಸುವ ಹಕ್ಕನ್ನು ಕಳೆದುಕೊಂಡಳು. 1856ರ 15ನೇ ಕಾಯ್ದೆಯ ಪ್ರಕಾರ, ವಿಧವೆ, ತಾನು ಎಷ್ಟೇ ಕುಲೀನಳಾದರೂ, ಗಂಡನ ಆಸ್ತಿಯನ್ನು ಅನುಭವಿಸಬಹುದಿತ್ತು. ಆದರೆ, ಆಕೆ ಮರುಮದುವೆಯಾದರೆ ಕೂಡಲೇ ಆ ಹಕ್ಕನ್ನು ಕಳೆದುಕೊಳ್ಳುತ್ತಿದ್ದಳು. ಈ ರೀತಿಯಾಗಿ ಸ್ತ್ರೀಯ ಸ್ಥಾನ ಕ್ರಮೇಣ ಕ್ಷೀಣಿಸ ತೊಡಗಿತು.

## ಭಾರತದಲ್ಲಿ ಸ್ತ್ರೀ ಜಾಗೃತಿ

ಕಾಲಕ್ರಮದಲ್ಲಿ, ಭಾರತದ ಸ್ತ್ರೀ ತನ್ನ ನೆಲೆಯನ್ನು ಪುನಃ ಪಡೆಯಲಾರಂಭಿಸಿದಳು. ಆಂಗ್ಲ ವಿದ್ಯಾಭ್ಯಾಸ ಮತ್ತು ಪೂರ್ವ-ಪಶ್ಚಿಮ ಸಂಸ್ಕೃತಿಗಳ ಸಂಮಿಲನದ ಫಲವಾಗಿ ಹೊಸ ದೃಷ್ಟಿಯಲ್ಲಿ ತನ್ನ ಪರಿಸರವನ್ನು ನೋಡಹತ್ತಿದ ಭಾರತೀಯ ಮಹಿಳೆ ಸಮಾಜದಲ್ಲಿ ತನ್ನ ಸ್ಥಾನ-ಮಾನಗಳ ಬಗೆಗೆ ಚಿಂತಿಸಲಾರಂಭಿಸಿದಳು. ಮುಖ್ಯ ಪಟ್ಟಣಗಳಲ್ಲಿ ಮಹಿಳಾ ಸಂಘಗಳು ಏರ್ಪಟ್ಟವು. ಆರ್ಯಸಮಾಜ ಮತ್ತು ಬ್ರಹ್ಮಸಮಾಜಗಳೇ ಮೊದಲಾದ ಹಿಂದೂ ಧರ್ಮ ಸಂಸ್ಥೆಗಳು ಸ್ತ್ರೀ ಸ್ವಾತಂತ್ರ್ಯಕ್ಕೆ ಸ್ಫೂರ್ತಿ ಕೊಟ್ಟವು. ಪುರುಷನೊಡನೆ ಸಮಾನ ಹಕ್ಕುಗಳನ್ನು ಪಡೆಯಲು ಕಲಿತ ಹೆಣ್ಣು ಮುಂದಾದಳು. ರಮಾಬಾಯಿ ರಾನಡೆ, ಪಂಡಿತ್ ರಮಾಬಾಯಿ, ಸರಳಾದೇವಿ ಚೌಧುರಾಣಿ, ಶ್ರೀಮತಿ ಸರೋಜ್ ನಳಿನಿ — ಇವರೇ ಮೊದಲಾದವರು ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಮಾಡಿದ ಸೇವೆಯನ್ನು ಇಲ್ಲಿ ಸೂಚಿಸುವುದು ಯುಕ್ತವಾಗಿದೆ.

ಈ ಸ್ತ್ರೀಯರಲ್ಲಿ ಸುಪ್ರಸಿದ್ಧ ಸಮಾಜಸೇವಕಿ ಸರೋಜ್ ನಳಿನಿ, ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಬಹಳವಾಗಿ ದುಡಿದರು. ಆಕೆ ಭಾರತದ ಆದರ್ಶ ಸ್ತ್ರೀಯ ಪ್ರತಿರೂಪವಾಗಿದ್ದರು. ಸ್ತ್ರೀಯರೆಲ್ಲ ಜಾಗೃತರಾಗಿ ಎಲ್ಲ ಹಳ್ಳಿ-ಪಟ್ಟಣಗಳಲ್ಲೂ ಮಹಿಳಾ ಸಮಿತಿಗಳನ್ನು ಸ್ಥಾಪಿಸಿ, ಸ್ತ್ರೀಯರಿಗೆ ಶಿಕ್ಷಣ ಕೊಡುವಂತೆ ಆಕೆ ಕರೆಕೊಟ್ಟರು. ಸ್ತ್ರೀ ಶಿಕ್ಷಣ ಪಡೆದ ಹೊರತು, ಅವಳ ಉದ್ಧಾರ ಸಾಧ್ಯವಿಲ್ಲವೆಂಬುದನ್ನು ಅವರು ಮನಗಂಡರು. ಅವರ ಎಡಬಿಡದ ಸಮಾಜ ಸೇವೆಯಿಂದಾಗಿ ಎಲ್ಲೆಡೆಗಳಲ್ಲೂ ಸ್ತ್ರೀ ಸಂಘಗಳು ಉದಯಿಸಿದವು. ಈ ಸಂಘ-ಸಂಸ್ಥೆಗಳು ಹಿಂದಿನಿಂದಲೂ ಬಂದಿದ್ದ ಗೋಷಾ ಪದ್ಧತಿ, ಬಾಲ್ಯವಿವಾಹ ಪದ್ಧತಿಗಳನ್ನು ಅಳಿಸಲು ಕ್ರಮ ಕೈಗೊಂಡುವಲ್ಲದೆ, ವಿಧವಾವಿವಾಹವನ್ನು ಪ್ರೋತ್ಸಾಹಿಸಿದವು. ವಿದ್ಯಾಭ್ಯಾಸ ಮತ್ತು ಮತದಾನ ಸಂಬಂಧದಲ್ಲಿ ಗಂಡಸಿನೊಡನೆ ಸಮಾನ ಹಕ್ಕುಗಳನ್ನು ಪಡೆಯಲು ಮಹಿಳೆಯರು ಹೋರಾಡತೊಡಗಿದರು. ಸಾರ್ವಜನಿಕರಲ್ಲಿ ಆರೋಗ್ಯ, ನಗರ ನೈರ್ಮಲ್ಯ—ಇವೇ ಮೊದಲಾದ ಸಾಮಾಜಿಕ ವಿಷಯಗಳ ಬಗ್ಗೆ ಅರಿವುಂಟುಮಾಡಲು ಮಹಿಳಾ ಸಂಘಗಳು ದುಡಿಯಹತ್ತಿದವು.

ಸ್ತ್ರೀ ಸಂಘ-ಸಂಸ್ಥೆಗಳ ಸೇವೆಯ ಫಲವಾಗಿ ಹಿಂದೂ ಸ್ತ್ರೀಯ ಸ್ಥಾನಮಾನಗಳಲ್ಲಿ ಬದಲಾವಣೆಗಳುಂಟಾದವು. ಸ್ತ್ರೀ ಮುಂದಾಳುಗಳು ತಮ್ಮ ನಿಲುವಿನ ಬಗ್ಗೆ ಪುರುಷರಲ್ಲೂ ಅನುಕಂಪವುಂಟಾಗುವಂತೆ ಮಾಡಿದರಲ್ಲದೆ, ಅವರ ಕ್ರಿಯಾತ್ಮಕ ಬೆಂಬಲವನ್ನೂ ಪಡೆದರು. ಸ್ತ್ರೀ ಸ್ವಾತಂತ್ರ್ಯ ಚಳುವಳಿಯಲ್ಲಿ ಶ್ರೀಮತಿ ವಿಜಯಲಕ್ಷ್ಮಿ ಪಂಡಿತ್, ಸರೋಜಿನಿ ನಾಯ್ಡು, ರಾಜ್‌ಕುಮಾರಿ ಅಮೃತ್‌ಕೌರ್—ಇವರೇ ಮೊದಲಾದ ಭಾರತ ಮಹಿಳಾಮಣಿಗಳು ಭಾಗವಹಿಸಿದ್ದರು. ಸ್ತ್ರೀ ಸಂಘ-ಸಂಸ್ಥೆಗಳ ಜೊತೆಗೆ ಕೆಲಸಮಾಡಲು ಶಾರದಾಸದನ, ಸೇವಾಸದನಗಳು ಹುಟ್ಟಿಕೊಂಡವು. ಈ ಎಲ್ಲಾ ಸಂಸ್ಥೆಗಳ ಧ್ಯೇಯ ಸ್ತ್ರೀಯ ಉದ್ಧಾರವೇ ಆಗಿದ್ದಿತು.

ಹೀಗೆ, ಇಪ್ಪತ್ತನೆಯ ಶತಮಾನ ಪ್ರಾರಂಭವಾದ ಒಂದೆರಡು ದಶಕಗಳಲ್ಲಿ ಸ್ತ್ರೀ ಸಂಘ–ಸಂಸ್ಥೆಗಳು ಹುಟ್ಟಿಕೊಂಡಿದ್ದವು. 1917ನೇ ವರ್ಷದಲ್ಲಿ ಮದ್ರಾಸ್‌ನಲ್ಲಿ ಶ್ರೀಮತಿ ದೊರತಿ ಜಿನರಾಜದಾಸರಿಂದ ಭಾರತಕ್ಕೆಲ್ಲಾ ಕೇಂದ್ರವಾಗಿರುವಂತೆ "ಭಾರತೀಯ ಮಹಿಳಾ ಸಂಘ"ವನ್ನು[10] ಏರ್ಪಡಿಸುವ ಪ್ರಯತ್ನ ನಡೆಯಿತು. ತನ್ನ ಕಾರ್ಯಕ್ಷೇತ್ರಕ್ಕೆ ಸಾಮಾಜಿಕ, ರಾಜಕೀಯ ಮತ್ತು ಶೈಕ್ಷಣಿಕ ಧ್ಯೇಯಗಳನ್ನು ಸಂಘವು ಇಟ್ಟುಕೊಂಡಿತು. ಭಾರತೀಯ ಮಹಿಳಾ ಸಂಘ 23 ಕೇಂದ್ರಗಳನ್ನೂ, 72 ಶಾಖೆಗಳನ್ನೂ ಮತ್ತು 4,000 ಸದಸ್ಯರನ್ನೂ ಹೊಂದಿತ್ತು. ಬ್ರಿಟಿಷ್ ಸರ್ಕಾರದಲ್ಲಿ ಆಗ ಸೆಕ್ರೆಟರಿ ಆಫ್ ಸ್ಟೇಟ್‌ರಾಗಿದ್ದ ಸರ್ ಮಾಂಟಿಗೋ ಅವರನ್ನು ಸರೋಜಿನಿನಾಯ್ಡು ಮತ್ತು ಶ್ರೀಮತಿ ಕ್ಯಾಸಿನ್ಸ್‌ರವರ ನೇತೃತ್ವದಲ್ಲಿ ನಿಯೋಗವೊಂದು ಭೇಟಿಮಾಡಿ, ಅವರ ಮುಂದೆ ಸ್ತ್ರೀಯರ ಕುಂದುಕೊರತೆಗಳನ್ನು ಮಂಡಿಸಿ ಪರಿಹಾರ ಕ್ರಮಗಳನ್ನೂ ಚರ್ಚಿಸಿತು. ಸರ್ ಮಾಂಟಿಗೋರವರು ಈ ಬೇಡಿಕೆಗಳನ್ನು ವಿವಿಧ ಪ್ರಾಂತ್ಯಗಳಿಗೆ ಕಳುಹಿಸಿ ಉತ್ತರ ಪಡೆದ ನಂತರ ಬೇಡಿಕೆಗಳನ್ನೆಲ್ಲಾ ಅನುಮೋದಿಸಿದರು.

1930ನೇ ಇಸವಿಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ ಸಂಸ್ಥೆ ನಾಗರಿಕ ಹಕ್ಕು ಬಾಧ್ಯತಾ ಚಳುವಳಿಯನ್ನಾರಂಭಿಸಿದಾಗ ಭಾರತ ಮಹಿಳೆಗೆ ರಾಜಕೀಯ ಕ್ಷೇತ್ರದಲ್ಲಿ ಉತ್ತೇಜನ ದೊರಕಿದಂತಾಯಿತು. ಈ ಚಳುವಳಿಯಲ್ಲಿ ಬಹುಮಂದಿ ಸ್ತ್ರೀಯರು ಮನೆಯಿಂದ ಹೊರಬಂದು ಉತ್ಸಾಹದಿಂದ ಕ್ರಿಯಾತ್ಮಕ ಪಾತ್ರ ವಹಿಸತೊಡಗಿದರು. ಹೊರಬೀದಿಯಲ್ಲಿ ಓಡಾಡದಿದ್ದ ಸ್ತ್ರೀಯರ ಕೋಮಲ ಪಾದಗಳು ರಸ್ತೆಯ ಒರಟನಿಂದ ಹೆಚ್ಚಿನ ಶಕ್ತಿಯನ್ನೇ ಪಡೆದವು. ನೂರಾರು ಸ್ತ್ರೀಯರು ಲಾಠಿ ಮತ್ತು ಗುಂಡಿನ ಏಟನ್ನು ಧೈರ್ಯವಾಗಿ ಎದುರಿಸಿ ಸೆರೆವಾಸವನ್ನೂ ಅನುಭವಿಸಿದರು. ಈ ಚಳುವಳಿ ಮಿಂಚಿನಂತೆ ಹರಡಿತು. ಸಾಮಾಜಿಕ ಸಂಪ್ರದಾಯಗಳ ಸಂಕೋಲೆಗಳಿಂದ ಬಂಧಿತರಾಗಿದ್ದ ಸ್ತ್ರೀಯರ ಹಸ್ತ ಶುಭ್ರವಾಗಿ, ಅವರ ಬಗ್ಗೆ ಇದ್ದ ಹಳೆಯ ದುರಭಿಪ್ರಾಯಗಳು ಮಾಯವಾದವು. ಸ್ತ್ರೀಯರು ಇದರಿಂದಾಗಿ ಹೊಸ ಜೀವನ ಮತ್ತು ಹೊಸ ಪ್ರಪಂಚವನ್ನು ನೋಡಿದರು. ಅವರ ಹೃದಯಗಳು ಹೆಮ್ಮೆಯಿಂದ ಆಶಾಭಾವನೆಗಳನ್ನು ತುಂಬಿಕೊಂಡುವು.

ಮಹರ್ಷಿ ದಯಾನಂದ ಸರಸ್ವತಿಯವರು[11] ಸ್ತ್ರೀಯರು ಗೃಹಕೃತ್ಯಗಳಿಗೆ ವಿಶೇಷ ಗಮನ ಕೊಟ್ಟು ಸಂಸಾರದಲ್ಲಿನ ಆರ್ಥಿಕ ಸ್ಥಿತಿಯನ್ನು ಸುಧಾರಿಸುವಂತೆ ಬೋಧಿಸಿದರು. ಅವರು ಸ್ತ್ರೀಯರು ಆಯವ್ಯಯ ಪಟ್ಟಿಯನ್ನಿಟ್ಟು, ಗೃಹದ ವೆಚ್ಚಗಳನ್ನು ಮನೆಯೊಡೆಯನ ಗಮನಕ್ಕೆ ತರುವುದು ಸೂಕ್ತವೆಂದು ತಿಳಿಸಿದರು. ಪಶುಸಂಗೋಪನೆ, ಭೂ ಅಧ್ಯಯನ, ತೋಟಗಾರಿಕೆ ಮತ್ತು ಗೃಹದ ಆರ್ಥಿಕ ವ್ಯವಸ್ಥೆ, ಜೇನು ಹಾಗೂ ಕೋಳಿ ಸಾಕಣೆ ತಮ್ಮ ಕರ್ತವ್ಯವೆಂದು ಹಿಂದೂ ಸ್ತ್ರೀಯರು ತಿಳಿದರು. ಸಮಾಜಸೇವೆಯಲ್ಲಿ ಅವರು ನಿರತರಾದುದೇ ಅಲ್ಲದೆ ರಾಜಕೀಯ ರಂಗಕ್ಕೂ ಇಳಿದರು.[12] ಇದರಿಂದಾಗಿ, ಇಂದು ಭಾರತದ ಸ್ತ್ರೀ ಭಾರತ ಪ್ರಧಾನಿಯ ಸ್ಥಾನದಿಂದ ಹಿಡಿದು

ಕಾಲೇಜಿನ ಅಧ್ಯಾಪಕರ ಸ್ಥಾನಗಳನ್ನೂ ಆಕ್ರಮಿಸಿಕೊಂಡಿದ್ದಾರೆ. ವೈದ್ಯವೃತ್ತಿ, ಸರ್ಕಾರಿ ಸೇವೆ ಹಾಗೂ ಮತ್ತಿತರ ಸಾರ್ವಜನಿಕ ಸೇವೆಗಳಲ್ಲಿ ಅವರು ಪಾಲು ಗೊಳ್ಳುತ್ತಿದ್ದಾರೆ.

ಈಗ ಸ್ತ್ರೀಗೆ ಕೊಟ್ಟಿರುವ ಸ್ಥಾನಮಾನಗಳಿಗೆ ಹಿಂದೆ ಸ್ತ್ರೀ ಸಂಘ-ಸಂಸ್ಥೆಗಳು ನಡೆಸಿದ ನಿರಂತರ ಹೋರಾಟವೇ ಕಾರಣವೆನ್ನಬಹುದು. ಸರೋಜಿನಿ ನಾಯ್ಡು, ವಿಜಯಲಕ್ಷ್ಮಿ ಪಂಡಿತ್, ಕಸ್ತೂರ್‌ಬಾ ಗಾಂಧಿ, ರಾಜಕುಮಾರಿ ಅಮೃತಕೌರ್, ಶಕುಂತಲ ತಂಬಿ, ಕಮಲಾದೇವಿ ಚಟ್ಟೋಪಾಧ್ಯಾಯ ಹಾಗೂ ಮಹಾತ್ಮಾಗಾಂಧಿ ಯವರ ಮಾರ್ಗದರ್ಶನದಲ್ಲಿ ಸ್ತ್ರೀಸಮಾಜಗಳನ್ನು ಬಲಪಡಿಸಲಾಯಿತು. ಬರೋಡಾ ಸಂಸ್ಥಾನದ ಮಹಾರಾಣಿಯವರೂ ಕೂಡ ಸ್ತ್ರೀಯರ ಸಮಾನ ಹಕ್ಕುಗಳಿಗಾಗಿ ಹೋರಾಡಿದರಲ್ಲದೆ, ಮಹಿಳಾ ಸಂಸ್ಥೆಗಳಿಗೆ ಪ್ರೋತ್ಸಾಹವನ್ನು ಕೊಟ್ಟರು. ಇಂದಿನ "ಆಲ್ ಇಂಡಿಯಾ ವಿಮೆನ್ಸ್ ಆರ್ಗನೈಸೇರ್ಷ" ಸಂಸ್ಥೆ ಸ್ತ್ರೀಯ ಸ್ಥಾನಮಾನಗಳನ್ನು ಅಭಿವೃದ್ಧಿಪಡಿಸಲು ಶ್ರಮಿಸುತ್ತಿದೆ. ಇತ್ತೀಚಿನ ವರ್ಷಗಳಲ್ಲಿ ಜಾರಿಗೆ ಬಂದ ವಿವಿಧ ಹಿಂದೂ ಶಾಸನಗಳು ಸ್ತ್ರೀಯ ಸ್ಥಾನವನ್ನು ಮತ್ತಷ್ಟು ಭದ್ರಗೊಳಿಸಿವೆ.

ವಿದ್ಯಾಭ್ಯಾಸದ ಅವಕಾಶಗಳು ಹಿಂದೂ ಸ್ತ್ರೀಯಲ್ಲಿ ಕ್ರಾಂತಿಯ ಬೀಜವನ್ನು ಬಿತ್ತಿದವು. ಹಿಂದೂ ಮಹಿಳೆ ಹಳೆಯ ಶಿಸ್ತು–ಸಂಪ್ರದಾಯಗಳ ಬಗ್ಗೆ ದೀರ್ಘವಾಗಿ ಆಲೋಚಿಸಿ, ಗಂಡಸಿನೊಡನೆ ಸಮಾನ ಹಕ್ಕುಗಳನ್ನು ಪಡೆಯಲು ಹೊರಟಳಲ್ಲದೆ, ಹಿಂದಿನಿಂದ ಬಂದ ಅಮಾನುಷ ಸಾಮಾಜಿಕ ಕಟ್ಟಳೆಗಳಿಂದ ಬಿಡಿಸಿಕೊಳ್ಳಲು ಪ್ರಯತ್ನಿಸಿದಳು.[13] ಹಿಂದೂ ವಿವಾಹ ಮತ್ತು ವಿವಾಹ ವಿಚ್ಛೇದನದ ಕಾಯಿದೆ ಹಾಗೂ ಹಿಂದೂ ಆಸ್ತಿಪಾಸ್ತಿಗಳ ಹಕ್ಕಿನ ಕಾಯಿದೆಗಳು ಸ್ತ್ರೀಗೆ ಸಾಮಾಜಿಕವಾಗಿ ಮತ್ತಷ್ಟು ಬಲವನ್ನು ಕೊಟ್ಟಿವೆ. ಈ ಎಲ್ಲ ಪ್ರಯತ್ನಗಳ ನಂತರವೂ ಭಾರತದಲ್ಲಿ ಗೋಷಾ ಪದ್ಧತಿ, ವರದಕ್ಷಿಣೆ, ಬಾಲ್ಯವಿವಾಹ ಮೊದಲಾದ ಸಮಸ್ಯೆಗಳನ್ನೂ ಮತ್ತು ವಿಧವಾ ವಿವಾಹಕ್ಕೆ ಇರುವ ಅಡ್ಡಿ ಆತಂಕಗಳೇ ಮುಂತಾದ ಸಮಸ್ಯೆಗಳನ್ನೂ ನಾವು ಇಂದಿನ ಸಮಾಜದಲ್ಲಿ ಕಾಣಬಹುದು. ಗೋಷಾ ಪದ್ಧತಿಯನ್ನು ತೆಗೆದುಹಾಕಿ ವಿಧವಾ ವಿವಾಹಕ್ಕೆ ಅವಕಾಶ ಕಲ್ಪಿಸಿದರೆ ದೇಶದಲ್ಲಿನ ಸ್ತ್ರೀಯರ ಪರಿಸ್ಥಿತಿ ಮತ್ತಷ್ಟು ಸುಧಾರಿಸುವುದರಲ್ಲಿ ಸಂಶಯವಿಲ್ಲ.

### ಮುಸ್ಲಿಂ ಸ್ತ್ರೀ

ಇತ್ತೀಚಿನವರೆವಿಗೂ ಅರಬ್ ಸಮಾಜದಲ್ಲಿ ಸ್ತ್ರೀಗೆ ಮಹತ್ವದ ಸ್ಥಾನವಿರಲಿಲ್ಲ. ಅರೇಬಿಯಾದ ಸ್ತ್ರೀಯನ್ನು ಹತ್ತಿರದ ಬಂಧುಗಳು, ತಂದೆ, ಸಹೋದರ, ಪತಿ, ಮಗ— ಇವರೆಲ್ಲರೂ ಆಸ್ತಿಯ ಒಂದು ಭಾಗವೆಂಬಂತೆ ಕಾಣುತ್ತಿದ್ದರು. ಸ್ತ್ರೀಗಿಂತ ಪುರುಷನಿಗೆ ಹೆಚ್ಚಿನ ಮಾನಮರ್ಯಾದೆಗಳಿರುತ್ತಿದ್ದವು. ಅರಬ್ಬರಲ್ಲಿ ಪುರುಷನೇನಾದರೂ ಸ್ತ್ರೀಯ ವಿಷಯದಲ್ಲಿ ಅಪರಾಧವೆಸಗಿದರೆ ಸ್ತ್ರೀಗೆ ನ್ಯಾಯ ದೊರಕುತ್ತಿರಲಿಲ್ಲ. ಪುರುಷನು

ತನ್ನ ವೈವಾಹಿಕ ಹಕ್ಕನ್ನು ಹಂಚಿಕೊಳ್ಳಬಹುದಿತ್ತಲ್ಲದೆ, ಅವನ ಮರಣಾನಂತರ ಅವನ ವಿಧವೆಯರನ್ನು ಆಸ್ತಿ ಹಂಚಿಕೊಳ್ಳುವಂತೆ ಆವನ ವಾರಸುದಾರರು ಹಂಚಿಕೊಳ್ಳಬಹುದಿತ್ತು. ಸ್ವಯಂ ಇಚ್ಛೆಯಿಂದ ಪುರುಷನು ಸ್ತ್ರೀಯನ್ನು ವಿವಾಹದಿಂದ ವಿಚ್ಛೇದಿಸಬಹುದಿತ್ತು. ತಮ್ಮ ಅತಿಥಿಗಳನ್ನು ಸಂತೋಷಪಡಿಸಲು ಅರೇಬಿಯ ದೇಶದವರು ತಮ್ಮ ಹೆಂಡತಿಯರನ್ನು ಒಪ್ಪಿಸುತ್ತಿದ್ದರು. ಸತ್‌ವಂಶದ ಪುತ್ರ ಬೇಕೆಂದು ಇಚ್ಛಿಸುವ ಅರಬ್ಬಿಯುವ ತನ್ನ ಹೆಂಡತಿಯನ್ನು ಗಣ್ಯನೊಡನೆ ಇರುವಂತೆ ಕಳುಹಿಸಿ ಅಕೆ ಗರ್ಭಿಣಿಯಾದನಂತರ ಮತ್ತೆ ಆವಳೊಡನೆ ವಾಸಮಾಡುತ್ತಿದ್ದನು.[14] ಗೃಹಸ್ಥನು ದೂರ ದೇಶಗಳಿಗೆ ಪ್ರಯಾಣಮಾಡುವ ಕಾಲದಲ್ಲಿ ಹೆಂಡತಿಯನ್ನು ತನ್ನ ಸ್ನೇಹಿತನಿಗೊಪ್ಪಿಸಿ ಹೋಗುವ ಪದ್ಧತಿ ಇವರಲ್ಲಿದ್ದಿತು. ಅರಬ್ಬೀ ಜನ ಕುರಿಕಾಯುವವರೊಡನೆ ಸಹ ಹೆಂಡಂದಿರನ್ನು ಹಂಚಿಕೊಳ್ಳುತ್ತಿದ್ದರಂತೆ. ಪತ್ನಿ ಆಸ್ತಿಯ ಒಂದು ಭಾಗವಾಗಿದ್ದುದರಿಂದ ಪುರುಷ ತನಗೆ ಸೂಕ್ತಕಂಡ ರೀತಿಯಲ್ಲಿ ಆಕೆಯನ್ನು ಬೇರೊಬ್ಬರಿಗೆ ವಹಿಸಿಬಿಡಬಹುದಾಗಿತ್ತು. ಇವರಲ್ಲಿ ಆಕ್ರಮಣ, ವ್ಯಾಪಾರ ಮತ್ತು ಒಪ್ಪಂದ ವಿಧಾನಗಳಲ್ಲಿ ವಿವಾಹ ಪದ್ಧತಿ ರೂಢಿಯಲ್ಲಿತ್ತು. ಸಾಮಾನ್ಯವಾಗಿ ಬಹುಪತ್ನಿತ್ವ ಅವರಲ್ಲಿ ರೂಢಿಯಲ್ಲಿದೆ. ಇಸ್ಲಾಂ ಧರ್ಮ ಸ್ಥಾಪನೆಯಾಗುವುದಕ್ಕೆ ಹಿಂದೆ ಸ್ತ್ರೀ ಅನೇಕ ಕಷ್ಟಗಳಿಗೆ ಒಳಪಟ್ಟು ಗುಲಾಮಳಂತೆ ಬಾಳಬೇಕಿತ್ತು.

ಇಸ್ಲಾಂ ಧರ್ಮ ಹರಡಿದಂತೆ ಸ್ತ್ರೀಯ ವಿಮೋಚನೆಯಾಗತೊಡಗಿತು. ರಾಬರ್ಟ್‌ಸನ್ ಸ್ಮಿತ್ ಅವರು ವಿವರಿಸುವಂತೆ, ಅರಬ್ಬರ ವಿವಾಹಗಳು ಮೂರು ವಿಧವಾದವು : ಮೊದಲನೆಯದಾಗಿ, ಸ್ತ್ರೀಗೆ ತನ್ನ ಪತಿಯನ್ನು ತಾನೇ ಆರಿಸಿಕೊಳ್ಳುವ ಹಕ್ಕಿತ್ತಲ್ಲದೆ, ತನ್ನ ಮನೆಗೆ ಅವನನ್ನು ಸ್ವಾಗತಿಸಿ ತನಗೆ ಬೇಕಾದಾಗ ಅವನನ್ನು ಬಿಡುವ ಅವಕಾಶವೂ ಇತ್ತು. ಇವಳಿಗೆ ಹುಟ್ಟಿದ ಮಕ್ಕಳ ಪೋಷಣೆ ಇವಳ ಸಂಬಂಧಿಗಳ ಕರ್ತವ್ಯವಾಗಿರುತ್ತಿತ್ತು. ಈ ರೀತಿಯ ಮದುವೆಯನ್ನು "ಬೀನಾ" ಎಂದು ಕರೆಯುತ್ತಿದ್ದರು. ತರುವಾಯ ಈ ಪದ್ಧತಿ "ಬಾಲ್" ಎಂಬ ಪದ್ಧತಿ ಆಚರಣೆಗೆ ಬಂದ ಮೇಲೆ ನಿಂತುಹೋಯಿತು. "ಬಾಲ್" ಪದ್ಧತಿಯಲ್ಲಿ ಪತ್ನಿ ಪತಿಯೊಡನೆ ವಾಸಿಸಲು ಬಂದ ಮೇಲೆ ಆಕೆಗೆ ಹುಟ್ಟಿದ ಮಕ್ಕಳು ಪತಿಯ ಸಂಬಂಧಿಕರೊಡನೆ ಜೀವಿಸುತ್ತಿದ್ದವು.[15] ಪತಿಯನ್ನು ವರ್ಜಿಸುವ ಬಗ್ಗೆ ತನಗೆ ಹಿಂದೆ ಇದ್ದ ಸ್ವಾತಂತ್ರ್ಯವನ್ನು ಸ್ತ್ರೀ ಈಗ ಕಳೆದುಕೊಂಡಿದ್ದಳು. "ಮ್ಯುಟಾ" ಎಂಬ ವಿವಾಹ ಪದ್ಧತಿ ಬಹಳ ಕಾಲ ಆಚರಣೆಯಲ್ಲಿತ್ತು. ಈ ಪದ್ಧತಿಯಂತೆ, ಸ್ತ್ರೀ ಸಂಬಂಧಿಗಳ ಮಧ್ಯಸ್ಥಿಕೆಯಿಲ್ಲದೆ ವಿವಾಹ ಜರುಗುತ್ತಿತ್ತು. ಈ ವಿವಾಹಪದ್ಧತಿಯಲ್ಲಿ ಸ್ತ್ರೀಗೆ ವಿವಾಹ ವಿಚ್ಛೇದನಕ್ಕೆ ಯಾವ ಹಕ್ಕೂ ಇರಲಿಲ್ಲವಾದುದರಿಂದ ಮಹಮದ್ ಪೈಗಂಬರನು ಅದನ್ನು ಖಂಡಿಸಿದನು.

ಸಾಮಾನ್ಯವಾಗಿ ಪ್ರತಿಯೊಬ್ಬರೂ ತಾವು ಪ್ರೀತಿಸುವವರನ್ನೇ ವಿವಾಹವಾಗಲು ಇಚ್ಛಿಸುತ್ತಾರೆ. ಆದರೆ ಈ ರೀತಿಯ ಇಚ್ಛೆ ಯುವಕರಲ್ಲಿ ಸಂವೇಗ ಮತ್ತು

ಭ್ರಮೆಯಿಂದ ಕೂಡಿರುವುದೇ ಹೊರತು ನಿಜವಾದ ಪ್ರೀತಿಯಿಂದ ಕೂಡಿರುವುದಿಲ್ಲ. ಮಹಮದನು ಈ ವಿಷಯದಲ್ಲಿ ಜನರಿಗೆ ಈ ರೀತಿ ಬೋಧಿಸಿದನು: "ಸ್ತ್ರೀಯ ಸೌಂದರ್ಯಕ್ಕೆ ಸಿಕ್ಕಿಬಿದ್ದು ವಿವಾಹವಾಗಬೇಡಿ, ಅದರಿಂದ ಅವನತಿಯಾದೀತು; ಐಶ್ವರ್ಯಕ್ಕಾಗಿ ವಿವಾಹವಾಗಬೇಡಿ, ಅದರಿಂದ ನೀವು ಗುಲಾಮರಾದೀರಿ: ಆದುದರಿಂದ ಧರ್ಮದ ಆಧಾರದ ಮೇಲೆ ವಿವಾಹವಾಗಿ, ಅದರಿಂದ ನಿಮಗೆ ಕ್ಷೇಮವಾಗುವುದು."[16] ಸಾಧಾರಣವಾಗಿ "ಮಹರ್" ಎಂಬ ವಧುಶುಲ್ಕವನ್ನು ಹೆಣ್ಣಿನ ಕಡೆಯವರಿಗೆ ಕೊಟ್ಟು ವಿವಾಹವಾಗುವ ಪದ್ಧತಿ ರೂಢಿಯಲ್ಲಿದೆ.[17] ವಧು ಏನಾದರೂ ಯೋಧರ ವಂಶಕ್ಕೆ ಸೇರಿದವಳಾದರೆ "ಮಹರ್" ಶುಲ್ಕ ಹೆಚ್ಚುತ್ತದೆ.

ಮುಸ್ಲಿಮರು ಸ್ತ್ರೀಯರನ್ನು ಕೀಳಾಗಿ ನೋಡುತ್ತಿದ್ದರು. ಯಾವ ಸ್ತ್ರೀ ಪುರುಷನ ಅಧೀನಳಾಗಿರುತ್ತಾಳೋ ಅವಳಿಗೆ ಸ್ವರ್ಗದಲ್ಲಿ ಶಾಶ್ವತ ಗೌರವ ದೊರೆಯುತ್ತದೆಂಬ ನಂಬಿಕೆ ಅವರಲ್ಲಿದೆ. ಸರ್ ಎಮ್. ಇಕ್ಬಾಲ್ ಅವರು ತಿಳಿಸುವಂತೆ ಆದರ್ಶ ಮುಸ್ಲಿಂ ಮಹಿಳೆಯ ಗುಣಗಳಿವು: "ಪರಿಶುದ್ಧಳಾದ ಫಾತಿಮಾ ವಿಧೇಯಳಾಗಿರುತ್ತಾಳೆ, ಆದರ್ಶ ಪತ್ನಿ ಹಾಗೂ ಮಾತೆಯಾಗಿರುತ್ತಾಳೆ. ಸ್ವರ್ಗ ಮತ್ತು ನರಕಗಳಲ್ಲಿರುವ ಆತ್ಮಗಳನ್ನು ನಿಯಂತ್ರಿಸುವ ಶಕ್ತಿ ಸಾಮರ್ಥ್ಯಗಳನ್ನು ಆಕೆ ಹೊಂದಿರುವುದರಿಂದ, ತನ್ನ ಮನಸ್ಸನ್ನು ಪತಿಯ ಮನಸ್ಸಿನೊಡನೆಯೂ ಲೀನಗೊಳಿಸಬಲ್ಲಳು."[18]

ಆದರೆ ಪ್ರವಾದಿ ಮಹಮದ್ ಸ್ತ್ರೀ-ಪುರುಷರು ಸಮಾನರೆಂದು ಪರಿಗಣಿಸಿದನು. "ಭಗವಂತನಾದ ಅಲ್ಲಾ ನಿಮ್ಮನ್ನು ಪರಸ್ಪರ ಸಹಕರಿಸುವಂತೆ ಸೃಷ್ಟಿಸಿರುವನಲ್ಲದೆ, ನಿಮ್ಮಲ್ಲಿ ದಯೆ ಮತ್ತು ಪ್ರೇಮದ ಹೊಳೆಯನ್ನೂ ಹರಿಸಿರುವನು"[19] ಎಂದು ಅವನು ಸ್ತ್ರೀ-ಪುರುಷರ ಬಗ್ಗೆ ಹೇಳಿದ್ದಾನೆ. ಸ್ತ್ರೀ-ಪುರುಷರು ಒಬ್ಬರಿಗೊಬ್ಬರು ಪೂರಕವಾಗಿ, ಬುದ್ಧಿವಂತಿಕೆಯಿಂದ ಬಾಳಿದರೆ ಪರಸ್ಪರ ಅರಿತುಕೊಳ್ಳುವ ಅವಕಾಶ ಹೆಚ್ಚಾಗುತ್ತದೆ. ಭಗವಂತನು ಜೀವಕೋಟಿಯನ್ನು ಜೋಡಿಯಾಗಿಯೇ ಸೃಷ್ಟಿಸಿದ್ದಾನೆ ಎಂದು ಪವಿತ್ರ ಕುರಾನ್ ಸಾರುತ್ತದೆ. ಸಂತಾನಕ್ಕೆ ಸ್ತ್ರೀ-ಪುರುಷವರ್ಗಗಳೆರಡೂ ಬೇಕು.[20] ಹಾಗೆಯೇ ಪ್ರಕೃತಿ ಕೂಡ ಸ್ತ್ರೀ–ಪುರುಷರಿಗೆ ಸೃಷ್ಟಿಯಲ್ಲಿ ಸಮಾನತೆಯನ್ನು ಕೊಡಲು ಒಪ್ಪಲಿಲ್ಲವಾದರೂ ಅವರಿಗೆ ಕರ್ತವ್ಯಗಳನ್ನು ಹಂಚಿಕೊಟ್ಟಿದೆ.

ಪ್ರವಾದಿ ಮಹಮದನ ಕಾಲದಲ್ಲಿ ಸ್ತ್ರೀಯ ಸ್ಥಾನಮಾನಗಳಲ್ಲಿ ಪುರೋಗಾಮಿ ಸುಧಾರಣೆಗಳಾದವು. ಪ್ರವಾದಿಯ ಸ್ವಂತ ಸ್ತ್ರೀಯರೇ ಏಕಾಂತಜೀವನವನ್ನು ನಡೆಸುತ್ತಿರಲಿಲ್ಲ. ಮಹಮದನ ಮೊದಲನೆಯ ಹೆಂಡತಿಯಾದ ಖಾದಿಜಾ ಪತಿಯೊಡನೆ ಸಮಾನಳಾಗಿದ್ದಳು. ಖಾದಿಜಾ ತೀರಿಕೊಂಡನಂತರ ಐಯೆಷಾ ಎಂಬ ಯುವತಿ ಮೊದಲ ಪತ್ನಿಯ ಜಾಗ ತುಂಬಿದಳಲ್ಲದೆ, ಒಂಟೆಗಳ ಯುದ್ಧದಲ್ಲಿ ಯೋಧನ ಪಾತ್ರ ವಹಿಸಿದ್ದಾಳೆ.[21] ಮಗಳು ಫಾತಿಮಾ ಸಮಾಜದಲ್ಲಿ ಹೆಚ್ಚಿನ ಗೌರವವನ್ನು ಸಂಪಾದಿಸಿಕೊಂಡಿದ್ದಳಲ್ಲದೆ, ಪ್ರಸಿದ್ಧ ವಾಗ್ಮಿ ಮತ್ತು ರಾಜಕೀಯ ಪಟುವಾಗಿದ್ದಳು.

ಸಾರ್ವಜನಿಕ ಜೀವನದಲ್ಲಿ ಪೈಗಂಬರನ ಮೊಮ್ಮಗಳು ಜೈನಾಬ್ ಹೆಸರುವಾಸಿಯಾಗಿದ್ದಳು. ಮಹಮದನ ಜೀವನ ಲವಲವಿಕೆಯಿಂದ ಕೂಡಿತ್ತು. ಅವನ ಉತ್ತೇಜನದಿಂದ ಮುಸ್ಲಿಂ ಮಹಿಳೆಯರು ಹಲವಾರು ಶಾಸ್ತ್ರಗಳನ್ನು ಕಲಿತು, ಸಮಾಜದಲ್ಲಿ ಮುಂದಾಳುತನಕ್ಕೆ ಪ್ರಸಿದ್ಧರಾಗಿದ್ದರು. ಒಂದನೇ ಸುಲ್ತಾನ ಬಯಾಜಿದ್ ಆಳ್ವಿಕೆಯಲ್ಲಿ ಮಹಿಳೆಯರು ಮಸೀದಿಗಳಲ್ಲಿ ಭಾಷಣ ಮಾಡುತ್ತಿದ್ದರಲ್ಲದೆ ಸಹಶಿಕ್ಷಣ ಪದ್ಧತಿಯೂ ರೂಢಿಯಲ್ಲಿದ್ದಿತು. ಮನ್ಸೂರನ ಕಾಲದಲ್ಲಿ ಆತನ ಇಬ್ಬರು ಸಹೋದರಿಯರು ಯುದ್ಧಕವಚ ಧರಿಸಿ ಬೈಜಾಂಟೈನ್ ಯುದ್ಧಕ್ಕೆ ಹೋಗಿದ್ದರು.[22] ರಷೀದ್-ಅಲ್-ಮನೂರ್‌ನ ಆಳ್ವಿಕೆಯಲ್ಲಿ ಮಹಿಳೆಯರು ಸಾಹಿತ್ಯ ಸಮಾರಂಭಗಳಲ್ಲಿ ಭಾಗವಹಿಸಿ ಅನೇಕ ವಿಷಯಗಳನ್ನು ಚರ್ಚಿಸುತ್ತಿದ್ದರು. ಯುವತಿಯರು ಅಶ್ವಪಡೆಗಳ ನಾಯಕತ್ವ ವಹಿಸಿ ಯುದ್ಧಮಾಡುತ್ತಿದ್ದರು. ಹೆರಮ್-ಅಲ್-ರಶೀದನ ಬೇಗಮಳಾದ ಜುಬೇದಾ ಒಬ್ಬ ಹೆಸರುವಾಸಿಯಾದ ಕವನಕಾರಳಾಗಿದ್ದಳಲ್ಲದೆ, ತನ್ನ ಅಧಿಕಾರ ಬಲದಿಂದ ಮೆಕ್ಕಾನಗರದಲ್ಲಿ ಒಂದು ದೊಡ್ಡ ಕಾಲುವೆಯನ್ನು ಕಟ್ಟಿಸಿ, ಗ್ರೀಕರು ನಾಶಮಾಡಿದ್ದ ಅಲೆಕ್ಸಾಂಡ್ರಿಯ ನಗರವನ್ನು ಜೀರ್ಣೋದ್ಧಾರ ಮಾಡಿದಳು.[23] ಮುಸ್ಲಿಂ ಮಹಿಳೆಯರು ಆಗಿನ ಕಾಲದಲ್ಲಿ, ಅಂದರೆ ಖಲೀಫರ ಆಳ್ವಿಕೆಯಲ್ಲಿ ಸಂಗೀತಗಾರರಾಗಿ, ಅಡಿಗೆಯವರಾಗಿ, ನಾಯಿಂದರಾಗಿ ಕೆಲಸ ಮಾಡುತ್ತಿದ್ದರು. ಉಮರ್ ಖಲೀಫನು ಒಬ್ಬ ಮಹಿಳೆಯನ್ನು ರಾಜಧಾನಿ ಮದೀನಾದ ಅಧಿಕಾರಿಣಿಯಾಗಿ ನೇಮಿಸಿದ್ದ. ಮಹಿಳೆಯರು ನ್ಯಾಯಾಧೀಶರಾಗಿಯೂ ಸೇವೆಸಲ್ಲಿಸುತ್ತಿದ್ದರು.

ಮುಸ್ಲಿಂ ಸ್ತ್ರೀಯು ಆಸ್ತಿಪಾಸ್ತಿಗಳ ಬಗ್ಗೆ ಸ್ವತಂತ್ರಳಾಗಿದ್ದಳೆಂಬುದು ವ್ಯಕ್ತವಾಗುತ್ತದೆ. ಇಸ್ಲಾಂ ಕಾನೂನಿನ ಪ್ರಕಾರ ಮಹಿಳೆ ಆಸ್ತಿಯನ್ನು ಗಳಿಸುವ, ಆಸ್ತಿಯನ್ನು ವಂಶಪಾರಂಪರ್ಯವಾಗಿ ಪಡೆಯುವ ಹಾಗೂ ತನ್ನ ಮನಬಂದಂತೆ ಅದನ್ನು ಉಪಯೋಗಿಸುವ ಅವಕಾಶವನ್ನು ಹೊಂದಿದ್ದಾಳೆ. ಇಸ್ಲಾಂ ಧರ್ಮದಲ್ಲಿ ಮಾತೆಗೆ ಹೆಚ್ಚಿನ ಗೌರವವಿರುತ್ತದೆ. ಮಹಮದ್ ಪ್ರವಾದಿ ಬೋಧಿಸುತ್ತ, "ಸ್ವರ್ಗವು ನಿನ್ನ ಮಾತೆಯ ಅಡಿದಾವರೆಗಳಲ್ಲಿದೆ;[24] ಆದ್ದರಿಂದ ಆಕೆಯನ್ನು ಗೌರವಿಸು. ಪತ್ನಿಯು ಗೌರವಕ್ಕೆ ಪಾತ್ರಳು, ಅವಳನ್ನು ಗೌರವಿಸು"[25] ಎಂದು ಪೈಗಂಬರ್ ಮಹಮದ್ ಹೇಳಿದ್ದಾನೆ. ಮಹಿಳೆಯೂ ಕೂಡ ತನ್ನ ಪತಿಗೆ ವಿಧೇಯಳಾಗಿರಬೇಕೆಂದು ಅವನು ಬೋಧಿಸಿದನು. ಇಸ್ಲಾಂ ಮತ ಆಚರಣೆಗೆ ಬರುವುದಕ್ಕೆ ಪೂರ್ವದಲ್ಲಿ ಪುತ್ರಿಯ ಜನನ ಶಾಪವೆಂದು ಜನ ತಿಳಿದಿದ್ದರು. ಆದರೆ ಈ ಮೂಢ ನಂಬಿಕೆ ಮಹಮದನ ಬೋಧನೆಗಳಿಂದ ದೂರವಾಯಿತು.

ಮುಸ್ಲಿಂ ಮಹಿಳೆಗೆ ಕೆಲವು ಹಕ್ಕುಬಾಧ್ಯತೆಗಳಿದ್ದರೂ, ಧಾರ್ಮಿಕ ವಿಷಯಗಳಲ್ಲಿ ಹೆಚ್ಚಿನ ಕಟ್ಟುಪಾಟುಗಳಿಗೆ ಒಳಗಾಗಿದ್ದಾಳೆ. ಹಾಜ್ ಯಾತ್ರೆ ಮಾಡುವ ಮತ್ತು ರಂಜಾ಼ ಹಬ್ಬವನ್ನು ಆಚರಿಸುವ ಬಗ್ಗೆ ಆಕೆ ಕೆಲವು ವಿನಾಯಿತಿಗಳನ್ನು ಪಡೆದಿದ್ದಾಳೆ.[26] ಮಹಿಳೆ ತನ್ನ ನೈತಿಕ ಸ್ವಭಾವದಿಂದಾಗಿ ಕೆಲವು ಸಂಸ್ಕಾರಗಳಿಂದ

ವಿನಾಯಿತಿ ಪಡೆದಿದ್ದಾಳೆ. ಸ್ತ್ರೀ ಆಕರ್ಷಕ ಉಡುಪನ್ನು ಧರಿಸಬಾರದೆಂಬ ಮತ್ತು ಸಾಮೂಹಿಕ ಆರಾಧನೆಗಳಲ್ಲಿ ಭಾಗವಹಿಸಕೂಡದೆಂಬ ನಿಷೇಧ ಅವರಲ್ಲಿದೆ.

ಪ್ರವಾದಿ ಮಹಮದನು ತನ್ನ ನಾಲ್ಕನೆಯ ವಿವಾಹದ ತರುವಾಯ ಮತ್ತೆ ಮದುವೆ ಮಾಡಿಕೊಳ್ಳಲಿಲ್ಲ. ವಿಶೇಷ ಕಾರಣಗಳ ಹೊರತು ವಿವಾಹ ವಿಚ್ಛೇದಕ್ಕೆ ಮುಸ್ಲಿಂರಲ್ಲಿ ಅವಕಾಶವಿರಲಿಲ್ಲ. ದೇವರ ಕಣ್ಣಿನಲ್ಲಿ ಅತಿ ಹೇಯವಾದ ಮಾನವನ ಕೃತ್ಯವೆಂದರೆ ವಿವಾಹವಿಚ್ಛೇದನ ಎಂದು ಪ್ರವಾದಿ ಬೋಧಿಸಿದನು.[27] ಆದರೂ "ಕೋಲ್" ಮತ್ತು "ತಲಾಕ್" ಎಂಬ ಎರಡು ವಿವಾಹವಿಚ್ಛೇದನ ಪದ್ಧತಿಗಳು ರೂಢಿಯಲ್ಲಿದ್ದುವು.[28] ಇಸ್ಲಾಂ ಧರ್ಮ ಆಚರಣೆಗೆ ಬಂದ ಮೇಲೆ ತಲಾಕ್ ಪದ್ಧತಿ ರೂಢಿಯಲ್ಲಿದ್ದರೂ ವಿವಾಹವಿಚ್ಛೇದಕ್ಕೆ ಇದೊಂದು ಅವಕಾಶವಾಗಿತ್ತೇ ವಿನಃ, ಪುರುಷರಲ್ಲಿ ಹೆಚ್ಚಿನ ಕಾಮವೇ ಇದಕ್ಕೆ ಕಾರಣವಾಗಿರಲಿಲ್ಲ. ಕೋಲ್ ಪದ್ಧತಿ ಒಂದು ತೆರನಾನ ಗಂಡುಹೆಂಡಿನ ವಿವಾಹ ಒಪ್ಪಂದ.[29] ಪತಿಗೆ ಪತ್ನಿಯ ತಂದೆ ವಧುಶುಲ್ಕವನ್ನು ಹಿಂತಿರುಗಿಸಿ ಮಗಳನ್ನು ವಿವಾಹಬಂಧನದಿಂದ ಮುಕ್ತಿ ಗೊಳಿಸುವುದು ಈ ಪದ್ಧತಿಯ ವಿಶೇಷ. ಪುರುಷ ತನ್ನ ಪತ್ನಿಯಲ್ಲಿ ಪಡೆದುಕೊಂಡಿದ್ದ ಹಕ್ಕನ್ನು ಕಳೆದುಕೊಳ್ಳುವುದಲ್ಲದೆ, ಸ್ತ್ರೀ ಸ್ವತಂತ್ರಳಾಗುತ್ತಾಳೆಂಬುದನ್ನು ಕೋಲ್ ಪದ್ಧತಿಯು ಸೂಚಿಸುತ್ತದೆ. ಆದರೆ, ತಲಾಕ್ ಪಡೆಯುವ ಸ್ತ್ರೀ ಸ್ವತಂತ್ರಳಾಗಿರದೆ, ತಾನು ಗರ್ಭಿಣಿಯಲ್ಲವೆಂಬುದನ್ನು ಸ್ಥಿರಪಡಿಸಲು ಮೂರು ತಿಂಗಳವರೆವಿಗೆ ಕಾಯ ಬೇಕಾಗುತ್ತದೆ. ಈ ಮೂರು ತಿಂಗಳ ಸಮಯವನ್ನು "ಇದಾತ್" ಎಂದು ಕರೆಯು ತ್ತಾರೆ. ಈ ಸಮಯದಲ್ಲಿ ಪತಿ ತಾನು ಇಚ್ಛಿಸಿದರೆ "ತಲಾಕ್" ಘೋಷಣೆಯನ್ನು ರದ್ದುಮಾಡಿ ಮತ್ತೆ ವಿವಾಹವನ್ನು ಅಸ್ತಿತ್ವಕ್ಕೆ ತಂದುಕೊಳ್ಳಬಹುದು.[30] ಪತಿ ಏನಾದರೂ ನಿರ್ವೀರ್ಯನಾದರೆ ಅಥವಾ ಮತಿಹೀನನಾಗಿದ್ದರೆ ವಿವಾಹವಿಚ್ಛೇದನದ ಹಕ್ಕು ಸ್ತ್ರೀಗೆ ಇದೆ. ಏನೇ ಆಗಲಿ, ಇಸ್ಲಾಂ ಧರ್ಮ ಮಹಿಳೆಯರ ನೆಲೆಯನ್ನು ಭದ್ರಗೊಳಿಸಿತಾದರೂ ಸ್ತ್ರೀ–ಪುರುಷರಲ್ಲಿ ಸಮಾನತೆಯನ್ನು ತರಲಿಲ್ಲ.

ಹಿಂದೂ ಮತ್ತು ಮುಸ್ಲಿಂ ಸ್ತ್ರೀಯರ ಸ್ಥಾನಮಾನಗಳ ಬಗೆಗೆ ಕಂಡು ಬರುವಂತೆಯೇ ವಿಶ್ವದ ವಿವಿಧ ದೇಶಗಳ ಸ್ತ್ರೀಯರ ಸ್ಥಾನಮಾನಗಳಲ್ಲಿ ಸಹ ವೈಶಿಷ್ಟ್ಯತೆ ವನ್ನು ಕಾಣಬಹುದು.

### ಡೆನ್ಮಾರ್ಕಿನ ಸ್ತ್ರೀ

1866 ರಲ್ಲಿ ಡೆನ್ಮಾರ್ಕ್ ಸ್ತ್ರೀಯರು ಆಸ್ತಿಯನ್ನು ಹೊಂದುವ ಹಕ್ಕನ್ನು ಪಡೆ ದಿದ್ದರು. ಅವರಿಗೆ ಸಾಲ ನೀಡುವ ಮತ್ತು ತೆಗೆದುಕೊಳ್ಳುವ ಹಕ್ಕಿತ್ತಲ್ಲದೆ, ಅವರು ಮಾಡಿದ ಸಾಲಗಳಿಗೆ ಅವರೇ ವೈಯಕ್ತಿಕವಾಗಿ ಜವಾಬ್ದಾರರಾಗುತ್ತಿದ್ದರು. ಪತಿ–ಪತ್ನಿಯರು ಗೃಹಕೃತ್ಯ ವಿಷಯಗಳಲ್ಲಿ ಸಮಾನವಾಗಿ ವರ್ತಿಸುತ್ತಿದ್ದರು.

ಮನೆಯಲ್ಲಿ ಮಕ್ಕಳನ್ನು ಸಾಕುವ ಮತ್ತು ಅವರ ಅವಶ್ಯಕತೆಗಳನ್ನು ಒದಗಿಸುವ ಹೊಣೆಯನ್ನು ತಂದೆತಾಯಿಯರಿಬ್ಬರೂ ಹೊಂದಿದ್ದರು.

ಕಾನೂನಿನ ದೃಷ್ಟಿಯಲ್ಲಿ ಪತಿ-ಪತ್ನಿಯರು ಸ್ವತಂತ್ರ ಪ್ರಜೆಗಳಾಗಿದ್ದರು. ಇವರಿಬ್ಬರಲ್ಲಿ ಸಹಬಾಳ್ವೆ ಮುರಿದಾಗ ಇಬ್ಬರೂ ಪ್ರತ್ಯೇಕವಾಗುತ್ತಿದ್ದರು. ಮಕ್ಕಳು ಧರ್ಮಸಂತಾನವೆಂದು ನಿರ್ಧಾರವಾದಾಗ ಅವರನ್ನು ಸಾಕುವ ಹೊಣೆ ತಾಯಿಯ ದಾಗಿತ್ತು. ಆದರೆ, ತಂದೆ ಆ ಹೊಣೆಯಿಂದ ತಪ್ಪಿಸಿಕೊಳ್ಳಲಾಗುತ್ತಿರಲಿಲ್ಲ. ದಂಪತಿ ಗಳಲ್ಲಿ ಯಾರಾದರೊಬ್ಬರು ಬುದ್ಧಿಭ್ರಮಣೆಯಿಂದ ಕೂಡಿದ್ದರೆ, ಮೂರು ವರ್ಷಗಳಿಗೂ ಮೀರಿ ಒಬ್ಬರನ್ನೊಬ್ಬರು ಪರಿತ್ಯಜಿಸಿದ್ದರೆ, ಕುಡುಕರಾಗಿದ್ದರೆ, ಗುಹ್ಯರೋಗಕ್ಕೊಳ ಗಾಗಿದ್ದರೆ ವಿವಾಹವಿಚ್ಛೇದನ ಪಡೆಯಬಹುದಿತ್ತು. ಇಂತಹ ಸಂದರ್ಭಗಳಲ್ಲಿ ಮಕ್ಕಳ ಪೋಷಣೆಗಾಗಿ ತಂದೆ ಮತ್ತು ತಾಯಿ ಇಬ್ಬರೂ ತಮ್ಮ ಸ್ವಂತ ಆದಾಯದಲ್ಲಿ ಮೂರನೇ ಒಂದು ಭಾಗ ಕೊಡಬೇಕಾಗುತ್ತಿತ್ತು. ಧರ್ಮಸಂತಾನದ ಮಕ್ಕಳಂತೆಯೇ, ಜಾರಜರೂ ಆಸ್ತಿಗೆ ಸಮನಾದ ಹಕ್ಕನ್ನು ಹೊಂದಿದ್ದರು. ತಂದೆತಾಯಿಯರಿಬ್ಬರೂ ಮಕ್ಕಳು ಪ್ರಾಪ್ತ ವಯಸ್ಸನ್ನು ಮುಟ್ಟುವವರೆಗೆ (18 ವರ್ಷಗಳವರೆಗೆ) ಅವರ ಪೋಷಣೆಯ ಜವಾಬ್ದಾರಿಯನ್ನು ಹೊಂದಿರಬೇಕಾಗಿತ್ತು. ಅನಾಥರಾದ ಮಕ್ಕಳನ್ನು ಸಾರ್ವಜನಿಕ ಶಿಶುಕೇಂದ್ರಗಳಲ್ಲಿ ಪೋಷಿಸುತ್ತಿದ್ದರು. ಜಾರಜ ಮಕ್ಕಳ ತಾಯಿಯ ರನ್ನು ಕಂಡುಹಿಡಿದ ಪಕ್ಷದಲ್ಲಿ, ಅವರ ವಿರುದ್ಧ ದಾವೆ ಹೂಡಿ ಅವರ ಆಸ್ತಿಗೆ ಆ ಮಕ್ಕ ಳನ್ನು ಹಕ್ಕುದಾರರನ್ನಾಗಿ ಮಾಡುತ್ತಿದ್ದರು.

ಹೆಂಗಸರ ಮಾನಾಪಹರಣ ಮಾಡಿದವರಿಗೆ ಒಂದು ವರ್ಷದಿಂದ ಹಿಡಿದು ಹದಿನಾರು ವರ್ಷಗಳವರೆಗೆ ವ್ಯಾಪಿಸಬಹುದಾದ ಕಠಿಣ ಸಜಾ ವಿಧಿಸಲಾಗುತ್ತಿತ್ತು. ಗರ್ಭದಲ್ಲಿರುವ ಶಿಶು ವಂಶಪಾರಂಪರ್ಯವಾದ ಇಲ್ಲವೆ ವಾಸಿಮಾಡಲಾಗದ ಕಾಯಿಲೆ ಯಿಂದ ಇದೆ ಎಂದು ತಿಳಿದುಬಂದಾಗ ಮತ್ತು ಗರ್ಭಿಣಿಗೆ ಪ್ರಾಣಾಪಾಯವಿದೆಯೆಂದು ತಿಳಿದುಬಂದಾಗ ಗರ್ಭಪಾತ ಮಾಡಿಸಿಕೊಳ್ಳುವ ಅವಕಾಶವಿತ್ತು. ಡೆನ್‌ಮಾರ್ಕ್ ದೇಶದಲ್ಲಿ ಪುರುಷರಿಗಿಂತ ಸ್ತ್ರೀಯರೇ ಹೆಚ್ಚಾಗಿದ್ದುದರಿಂದ ಉದ್ಯೋಗಗಳಿಗೆ ತೀವ್ರ ಸ್ಪರ್ಧೆ ಇರುತ್ತಿರಲಿಲ್ಲ. ಕಾರ್ಖಾನೆಗಳಲ್ಲಿ ಗಂಡಸರಿಗಿಂತ ಹೆಂಗಸರನ್ನೇ ಕಡಮೆ ವೇತನಕ್ಕೆ ನೇಮಿಸಿಕೊಳ್ಳುತ್ತಿದ್ದರು.

ಇಪ್ಪತ್ತನೆಯ ಶತಮಾನದಲ್ಲಿ ಡೆನ್‌ಮಾರ್ಕ್ ದೇಶದ ಮಹಿಳೆಯರ ಪುರೋಭಿ ವೃದ್ಧಿಯ ಸಂಬಂಧದಲ್ಲಿ ಆಶಾದಾಯಕವಾದ ಕೆಲಸಗಳು ನಡೆದವು. ಅವುಗಳ ಪ್ರಭಾವ ದಿಂದ ಮಹಿಳೆಯರು ಈಗ ಸಾರ್ವಜನಿಕ ಕ್ಷೇತ್ರಗಳಲ್ಲಿ ಕೆಲಸಮಾಡುತ್ತಿರುವುದಲ್ಲದೆ, ನ್ಯಾಯಾಲಯದಲ್ಲಿ ಉನ್ನತ ಪದವಿಗಳಿಗೂ ನೇಮಕವಾಗುತ್ತಿದ್ದಾರೆ. ಮಹಿಳೆಯರು ರಾಜಕೀಯ ಚಳುವಳಿಗಳಲ್ಲಿ ಭಾಗವಹಿಸುತ್ತಾರೆ. ಕಾರ್ಖಾನೆಗಳ ಸಂಬಂಧವಾದ ಕಾನೂನುಗಳು ಜಾರಿಗೆ ಬಂದ ಮೇಲೆ, ಬಾಲಕರನ್ನು ಕಾರ್ಖಾನೆಗಳಲ್ಲಿ ನೇಮಿಸಿ ಕೊಳ್ಳುವುದನ್ನು ತಪ್ಪಿಸಿ, ಸ್ತ್ರೀಯರ ವೇತನಗಳನ್ನು ಹೆಚ್ಚಿಸಿ ಅವರ ಸ್ಥಿತಿಗತಿಗಳನ್ನು

ಉತ್ತಮಪಡಿಸಲಾಗಿದೆ. ಪ್ರಸವಕಾಲದಲ್ಲಿ ಭತ್ಯ, ವೃದ್ಧಾಪ್ಯ ಮತ್ತು ವಿಶ್ರಾಂತಿ ವೇತನಗಳು ಮೊದಲಾದುವನ್ನು ನೀಡಲಾಗುತ್ತಿವೆ. ಶಿಶುವಿಹಾರಗಳು, ಆರೋಗ್ಯ ಕೇಂದ್ರಗಳು, ಹೆರಿಗೆ ಆಸ್ಪತ್ರೆಗಳು—ಇವೇ ಮೊದಲಾದ ಸೌಲಭ್ಯಗಳಿವೆ. ಸ್ತ್ರೀ ವಿದ್ಯಾಭ್ಯಾಸವನ್ನು ಕಡ್ಡಾಯಮಾಡಿದ ಮೇಲೆ ಶಾಲೆಗಳಲ್ಲಿ ಬಾಲಿಕೆಯರ ಸಂಖ್ಯೆ ಹೆಚ್ಚಿದೆ. ಸ್ತ್ರೀಯರು ವೈದ್ಯರಾಗಲು, ವಕೀಲರಾಗಲು, ದಾದಿಯರಾಗಲು ಹಾಗೂ ಇನ್ನಿತರ ಸಾರ್ವಜನಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಲು ಶಿಕ್ಷಣ ಪಡೆಯುತ್ತಿದ್ದಾರೆ. ಇಂದು ಡೆನ್‌ಮಾರ್ಕ್ ರಾಷ್ಟ್ರದಲ್ಲಿ ಸ್ತ್ರೀ-ಪುರುಷರಿಬ್ಬರೂ ಸಮಾನ ಹಕ್ಕುಗಳನ್ನು ಅನುಭವಿಸುತ್ತಿದ್ದಾರೆ.

## ಜರ್ಮನಿಯ ಮಹಿಳೆ

ಜರ್ಮನಿಯಲ್ಲಿ, ಹಿಟ್ಲರನ ಕಾಲಕ್ಕೆ ಹಿಂದೆ, ಸ್ತ್ರೀಯರ ಸ್ಥಿತಿಗತಿಗಳು ಡೆನ್‌ಮಾರ್ಕ್ ಮಹಿಳೆಯರ ಸ್ಥಿತಿಗತಿಗಳಂತೆಯೇ ಇದ್ದವು. ಆದರೆ ಹಿಟ್ಲರನ ಕಾಲದಲ್ಲಿ ಸ್ತ್ರೀಯ ಸ್ಥಾನವೇ ಬೇರೆಯಾಗಿತ್ತು. ಜರ್ಮನ್ ಜನಾಂಗದ ಘನತೆ ಹಿಟ್ಲರನ ಕಾಲದಲ್ಲಿ ಶಿಖರವೇರಿತು. ಸ್ತ್ರೀ, ಮಕ್ಕಳನ್ನು ಹೆಚ್ಚು ಹಡೆದಷ್ಟು ಆವಳ ಘನತೆ ಹೆಚ್ಚಾಗುತ್ತಿತ್ತು. ಜನ ಬಂಜೆಯರನ್ನು ಬಹಳ ಕೀಳಾಗಿ ಕಾಣುತ್ತಿದ್ದರು. ಸಂಶೋಧನೆ, ನಿರ್ಮಾಣ, ಅನ್ವೇಷಣೆ— ಮುಂತಾದ ರಚನಾತ್ಮಕ ಕಾರ್ಯಗಳಲ್ಲಿ ಪುರುಷ ಉತ್ತಮನಾದರೆ, ಕುಲವನ್ನು ರಕ್ಷಿಸಿ ಅಭಿವೃದ್ಧಿಪಡಿಸುವುದು ಸ್ತ್ರೀಯ ಕರ್ತವ್ಯವೆಂದು ಜರ್ಮನಿ ಜನ ತಿಳಿದಿದ್ದರು.[31] ಸ್ತ್ರೀ ಮಕ್ಕಳನ್ನು ಹೆರುವ ಯಂತ್ರವೆಂದು ಜನ ನಂಬಿದ್ದರು. "ಸಾರ್ವಜನಿಕ ಜೀವನದಿಂದ ನಾವು ಸ್ತ್ರೀಯರನ್ನು ವರ್ಜಿಸಿದರೆ ನಾವು ಅವರನ್ನು ವರ್ಜಿಸಿದಂತಾಗುವುದಿಲ್ಲ, ಗೃಹದಲ್ಲಿ ಅವರಿಗೆ ಸಲ್ಲಬೇಕಾದ ಸ್ಥಾನವನ್ನು ದೊರಕಿಸಿಕೊಟ್ಟಂತಾಗುತ್ತದೆ" ಎಂದು ಜರ್ಮನರು ಸಾರಿದರು.[32] ಈ ತೆರನಾದ ನಾಜಿ ಆಜ್ಞೆಗಳು ಬಹಳ ಕಾಲ ಜರ್ಮನಿಯಲ್ಲಿರಲು ಸಾಧ್ಯವಾಗಲಿಲ್ಲ. ಜರ್ಮನರು ವಿಶ್ವವನ್ನೇ ವಶಪಡಿಸಿಕೊಳ್ಳುವ ಉದ್ದೇಶದಿಂದ ತಮ್ಮ ಜನಸಂಖ್ಯೆಯನ್ನು ಹೆಚ್ಚಿಸಿ ಕೊಳ್ಳಲಾರಂಭಿಸಿದರು. ಜನಸಂಖ್ಯೆ ಹೆಚ್ಚಿದಷ್ಟು ತಮ್ಮ ಯೋಧಬಲ ಹೆಚ್ಚುತ್ತದೆ ಯೆಂಬ ಅಭಿಪ್ರಾಯ ಅವರದಾಗಿತ್ತು. ಜನಸಂಖ್ಯೆ ಹೆಚ್ಚಲು ಸರ್ಕಾರದಿಂದ ಬೆಂಬಲ ದೊರಕಿತು. ಸ್ತ್ರೀಯರಿಗೆ ವಿವಾಹ ಸಾಲ ಮತ್ತು ಸಂಸಾರ ಭತ್ಯಗಳು ಸಿಗಲಾರಂಭಿಸಿದವು. ನಾವು ಈ ಮುಂದೆ ಕೊಟ್ಟಿರುವ ದೃಷ್ಟಾಂತಗಳು ಜರ್ಮನರ ದೇಶಪ್ರೇಮವನ್ನು ಸೂಚಿಸುತ್ತವೆ: "ನಾನೊಬ್ಬ 22 ವರ್ಷ ವಯಸ್ಸಿನ ಯೋಧ. ತಾಯ್ನಾಡಿಗೆ ದೇಹವನ್ನು ಅರ್ಪಿಸುವುದಕ್ಕೆ ಮೊದಲು ಜರ್ಮನ್ ದೇಶದ ಹಿರಿಮೆಗಾಗಿ, ಜರ್ಮನ್ ಜನಾಂಗದ ಉದ್ಧಾರಕ್ಕಾಗಿ ಒಬ್ಬ ಜರ್ಮನ್ ತರುಣಿಯ ಸಂಗ ಮಾಡಿ, ಆಕೆಯ ಮೂಲಕ ನನಗೆ ಜನಿಸುವ ಮಗುವನ್ನು ಬಿಟ್ಟು ರಣರಂಗದಲ್ಲಿ ಮರಣವನ್ನಪ್ಪ ಬೇಕೆಂಬುದೇ ನನ್ನ ಬಯಕೆ"[33] ಎಂದು ಜರ್ಮನಿ ಯೋಧನೊಬ್ಬ ಹೇಳಿಕೊಂಡಿದ್ದಾನೆ.

"ನಮ್ಮ ಹಿರಿಯ ಸಂಪ್ರದಾಯಗಳನ್ನು ನಾನು ಬಲ್ಲೆ. ಅವುಗಳನ್ನು ಬಿಡುವುದು ಕಷ್ಟವೆಂಬುದೂ ನನಗೆ ಗೊತ್ತು. ಆದರೆ, ಯುದ್ಧಕ್ಕೆ ಕರೆಬಂದ ಯೋಧರು ಜರ್ಮನ್ ಜನಾಂಗದ ಅಭಿವೃದ್ಧಿಗಾಗಿ ಜರ್ಮನಿಯ ಶುದ್ಧ ಆರ್ಯ ತರುಣಿಯರ ಮೂಲಕ ಬಿಟ್ಟುಹೋಗುವ ಮಕ್ಕಳು ಜರ್ಮನಿಯ ಏಳಿಗೆಯನ್ನು ಕಾಣಬೇಕು. ಈ ಅಭಿಪ್ರಾಯವನ್ನು ಎಲ್ಲ ಜರ್ಮನರೂ ಒಪ್ಪುವುದರಲ್ಲಿ ಸಂದೇಹವಿಲ್ಲ" ಎಂದು ರೊಡಾಲ್ಫ್ ಹೆಸ್ ಎಂಬಾತ ಮದುವೆಯಾಗದೆಯೇ ಗರ್ಭಿಣಿಯಾದ ತರುಣಿಯೊಬ್ಬಳಿಗೆ ಪತ್ರ ಬರೆದ.[34]

ಹೀಗೆ ಹಳೆಯ ಭಾವನೆಗಳು ಹೊಸ ಭಾವನೆಗಳಿಗೆ ಸ್ಥಾನ ಕೊಡಲಾರಂಭಿಸಿದವು. ಏಕಪತ್ನಿತ್ವ ರೂಢಿಯಲ್ಲಿದ್ದರೂ, "ಮದುವೆಯಾಗಿಯೋ, ಮದುವೆ ಆಗದೆಯೋ ಮಕ್ಕಳನ್ನು ಹೆರುವ ಜರ್ಮನಿ ಮಹಿಳೆಯನ್ನು ನವ ಜರ್ಮನಿ ಗೌರವಿಸುತ್ತದೆ" ಎಂದು ಆಲ್ಫ್ರೆಡ್ ರಾಸನ್‌ಬರ್ಗ್ ನುಡಿದಿರುವುದನ್ನು ನಾವು ಇಲ್ಲಿ ಜ್ಞಾಪಿಸಿಕೊಳ್ಳಬಹುದು.[35] "ಬಂಜೆಯರನ್ನು ಯಾವ ಸುವ್ಯವಸ್ಥಿತ ಸರ್ಕಾರವೂ ಗೌರವದಿಂದ ಕಾಣದು. ನಮ್ಮ ದೇಶದಲ್ಲಿ ತರುಣಿಯರನ್ನು ಕೂಡಲು ಇಷ್ಟವುಳ್ಳ ದೃಢಕಾಯರಾದ ಯುವಕರು ಬೇಕು. ಅದೃಷ್ಟವಶಾತ್ ಪ್ರತಿಯೊಬ್ಬ ಯುವಕನಿಗೂ ಇಪ್ಪತ್ತು ಮಂದಿ ತರುಣಿಯರಂತೆ ನಮ್ಮ ದೇಶದಲ್ಲಿ ಯುವಜನ ಸಂಖ್ಯೆ ಇದೆ. ಹೆಚ್ಚು ಜನಬಲಕ್ಕಾಗಿ ಹಾತೊರೆಯುತ್ತಿರುವ ದೇಶದ ಜನಸಂಖ್ಯೆಯನ್ನು ಹೆಚ್ಚಿಸಲು ಈ ತರುಣಿಯರು ನೆರವಾಗಬೇಕು. ಏಕಪತ್ನಿತ್ವ ನಾಗರಿಕರ ಹುಚ್ಚುತನದ ಪರಮಾವಧಿ"[36] ಎಂದು ಜರ್ಮನಿಯ ಅರ್ನೆಸ್ಟ್ ಬರ್ಗ್‌ಮನ್ ಹೇಳಿದ್ದಾನೆ.

ನಾಜಿ ಜರ್ಮನಿಯಲ್ಲಿ ಮಕ್ಕಳು ಹೆಚ್ಚಬೇಕೆಂಬ ಕೂಗು ಎಲ್ಲಾ ನಗರಗಳಲ್ಲೂ ಕೇಳಿಬರುತ್ತಿತ್ತು. ವಿವಾಹಸಂಬಂಧವಿಲ್ಲದೆಯೇ ಹುಟ್ಟದ್ದ ಮಕ್ಕಳನ್ನು ಸರ್ಕಾರವಲ್ಲದೆ ಜನರೂ ಕೂಡ ಪ್ರೋತ್ಸಾಹಿಸುತ್ತಿದ್ದರು. ಅವಿವಾಹಿತ ಮಾತೆಯರನ್ನು ಆದರಗೌರವಗಳಿಂದ ಕಾಣುತ್ತಿದ್ದರು. ಸರ್ಕಾರ ವಿವಾಹ ಭತ್ಯ ಮತ್ತು ಸಂಸಾರ ಭತ್ಯ ಕೊಡುತ್ತಿದ್ದುದರಿಂದ ಹೆಚ್ಚಿನ ಸ್ತ್ರೀಯರು ವೈವಾಹಿಕ ಜೀವನಕ್ಕೊಳಗಾದವರಲ್ಲದೆ, ವೈವಾಹಿಕ ಜೀವನದಲ್ಲೂ ಪರಪುರುಷರಿಂದ ಮಕ್ಕಳನ್ನು ಹಡೆಯುವುದು ನೀತಿಬಾಹಿರ ಕೃತ್ಯವೆಂದು ಭಾವಿಸುತ್ತಿರಲಿಲ್ಲ. ನಾಜಿ ಜರ್ಮನಿಯಲ್ಲಿ ಬಂಜೆಯರನ್ನು ಕೊಲ್ಲುತ್ತಿದ್ದುದರಿಂದ, ಬಂಜೆಯರು ಮಕ್ಕಳನ್ನು ಅಪಹರಿಸಿಕೊಂಡು ಹೋಗಿ ತಮ್ಮ ಮಕ್ಕಳಂತೆಯೇ ಸಾಕಿ ತಮ್ಮ ಗೌರವವನ್ನು ಉಳಿಸಿಕೊಳ್ಳಲು ಪ್ರಯತ್ನಿಸುತ್ತಿದ್ದರಂತೆ. ಒಮ್ಮೆ ಸಿಲೇಷಿಯಾ ನಗರದ ಬಂಜೆಯೊಬ್ಬಳ ಬಗ್ಗೆ ಮಗುವನ್ನು ಅಪಹರಿಸಿಕೊಂಡು ಹೋದ ಅಪರಾಧಕ್ಕಾಗಿ ಮೊಕದ್ದಮೆ ಹೂಡಿದರೂ, ನ್ಯಾಯಾಲಯದಲ್ಲಿ ಅವಳು ತಪ್ಪಿತಸ್ಥಳಲ್ಲವೆಂದು ವಾದಿಸಲಾಯಿತಂತೆ. ಜರ್ಮನಿಯ ಮತ್ತೊಂದು ನಗರದಲ್ಲಿ ಯುದ್ಧರಂಗದಿಂದ ತಾತ್ಕಾಲಿಕವಾಗಿ ಹಿಂತಿರುಗಿ ಬಂದ ಯೋಧನಿಗೆ ಅವನ ಪತ್ನಿ ತಾನು ಗರ್ಭಿಣಿ ಎಂದು ತಿಳಿಸಿದಾಗ, ಅವನು ಸಂತೋಷಪಟ್ಟು ಯುದ್ಧರಂಗಕ್ಕೆ

ಹಿಂತಿರುಗಿದಾಗ ತನ್ನ ಮಿತ್ರರೆಲ್ಲರಿಗೂ ತಾನು ತಂದೆಯೆಂಬುದನ್ನು ಹೆಮ್ಮೆಯಿಂದ ಹೇಳಿಕೊಂಡನು. ಆದರೆ, ಅವನ ಪತ್ನಿಗೆ ತಾನು ಗರ್ಭಿಣಿಯಾಗಿಲ್ಲವೆಂಬುದು ತಿಳಿದು ಯಾರದೋ ಮಗುವನ್ನು ಕದ್ದು ತನ್ನದೇ ಮಗುವೆಂದು ಹೇಳಿಕೊಂಡಾಗ, ಅವಳನ್ನು ಸೆರೆಹಿಡಿದು ಎರಡು ವರ್ಷಗಳ ಸಜಾ ಶಿಕ್ಷೆಯನ್ನು ವಿಧಿಸಿದರು.

ಹಿಟ್ಲರನು ಜರ್ಮನಿಯ ಪ್ರಜಾಸಂಖ್ಯೆಯನ್ನು ಹೆಚ್ಚಿಸುವ ತನ್ನ ಯೋಜನೆಯಲ್ಲಿ ಯಶಸ್ವಿಯಾದನು. ಸ್ತ್ರೀಯರಿಗೆ ಮತ್ತು ಮಕ್ಕಳಿಗೆ ಎಲ್ಲಾ ಸೌಲಭ್ಯಗಳನ್ನೊದಗಿಸಿದನು. ಹೆಚ್ಚಿನ ಮಕ್ಕಳನ್ನು ಹಡೆದ ಕುಟುಂಬಗಳಿಗೆ ವಿಶೇಷ ಗೌರವ ತೋರಿಸುತ್ತಿದ್ದನು. ಮಕ್ಕಳಿಲ್ಲದ ಸ್ತ್ರೀಯರನ್ನು ವೈದ್ಯಕೀಯವಾಗಿ ಪರೀಕ್ಷಿಸಲು ವೈದ್ಯರಿಂದ ಕೂಡಿದ ಸಮಿತಿಗಳನ್ನು ಏರ್ಪಡಿಸಿ ಚಿಕಿತ್ಸಾಕ್ರಮಗಳನ್ನು ಕೈಗೊಂಡುದರಿಂದ ಮಕ್ಕಳಿಲ್ಲದವರೂ ಮಕ್ಕಳನ್ನು ಹಡೆದರು. ಇದರಿಂದಾಗಿ ಜರ್ಮನಿಯಲ್ಲಿ ಪ್ರಜಾಸಂಖ್ಯೆ ಹೆಚ್ಚಿತು.

ಜರ್ಮನಿ ಸ್ತ್ರೀಯರು ಕಾರ್ಖಾನೆ ಕೆಲಸಗಳಲ್ಲಿ ನಿಪುಣರಾಗಿದ್ದರು. ಮಕ್ಕಳನ್ನು ಪೋಷಿಸುವಂತೆ ಯಂತ್ರಗಳನ್ನೂ ಸ್ತ್ರೀಯರು ರಕ್ಷಿಸುವರೆಂಬ ನಂಬಿಕೆ ಅವರಲ್ಲಿತ್ತು. ಜರ್ಮನಿಯ ಕಾರ್ಮಿಕ ಸಂಘದವರ ವರದಿಗಳ ಪ್ರಕಾರ ಜರ್ಮನಿಯಲ್ಲಿ ಒಟ್ಟು 16 ದಶಲಕ್ಷ ಮಹಿಳಾ ಕೆಲಸಗಾರರಿದ್ದು, ಅವರಲ್ಲಿ 6 ದಶಲಕ್ಷ ಸ್ತ್ರೀಯರು ವಿವಾಹಿತರಾಗಿದ್ದರು. ಈ 6 ದಶಲಕ್ಷ ವಿವಾಹಿತ ಸ್ತ್ರೀಯರಲ್ಲಿ ಶೇಕಡ 40 ಮಹಿಳೆಯರು ತಾಯಂದಿರಾಗಿದ್ದರು. ಈ ಕಾರ್ಮಿಕ ಸ್ತ್ರೀಯರಲ್ಲಿ ಶೇಕಡ 34ರಷ್ಟು ಸ್ತ್ರೀಯರು ಕಾರ್ಖಾನೆಗಳಲ್ಲೂ, ಶೇಕಡ 24ರಷ್ಟು ಸ್ತ್ರೀಯರು ಮನೆಗೆಲಸಗಳಲ್ಲೂ, ಶೇಕಡ 12.6ರಷ್ಟು ಮಹಿಳೆಯರು ವ್ಯವಸಾಯ ಕ್ಷೇತ್ರದಲ್ಲಿ ಮತ್ತು ಅರಣ್ಯಗಳಲ್ಲಿಯೂ ಕೆಲಸಮಾಡುತ್ತಿದ್ದರು. ಶೇಕಡ 23.7ರಷ್ಟು ಸ್ತ್ರೀಯರು ವಾಣಿಜ್ಯ, ಆಡಳಿತ ಮತ್ತು ವಿದ್ಯುಚ್ಛಕ್ತಿಗೆ ಸಂಬಂಧಪಟ್ಟ ಉದ್ಯೋಗಗಳಲ್ಲಿದ್ದರು.

ಜರ್ಮನಿ ಸ್ತ್ರೀಯರನ್ನು ಕುಟುಂಬದಲ್ಲಿ ಆಭರಣಪ್ರಾಯವೆಂದು ಪರಿಗಣಿಸಲಾಗುತ್ತಿತ್ತು. "ಪತಿ ಕೆಲಸದಿಂದ ಮನೆಗೆ ಹಿಂತಿರುಗುವ ಸಮಯದಲ್ಲಿ ಗೃಹಿಣಿ ಲವಲವಿಕೆಯಿಂದಿರದಿದ್ದರೆ ಅವನು ನಿರಾಶನಾದಾನು, ಆದ್ದರಿಂದ ಅವನನ್ನು ಆಕರ್ಷಿಸಲು ಆಕೆ ಅಲಂಕೃತಳಾಗಿರಬೇಕು" ಎಂದು ಒಂದೆಡೆ ಉಲ್ಲೇಖಿಸಲಾಗಿದೆ.[37] ಜರ್ಮನಿಯಲ್ಲಿ ಪ್ರತಿಯೊಬ್ಬರೂ ಸ್ತ್ರೀ ಅತಿ ಸುಂದರಳಾಗಿ ಕಾಣಬೇಕೆಂದು ಇಚ್ಛಿಸುತ್ತಾರೆ. 1938ರಲ್ಲಿ, ಜರ್ಮನಿಯ ಮೂರನೆ 'ರೀಚ್' ರಾಜ್ಯದ ಯುವಜನ ನಾಯಕನಾದ ಬಾಲ್ಡರ್ ವಾನ್ ಷಿರಜ್, ಜರ್ಮನ್ ಯುವತಿಯರನ್ನು ಅಂದಗೊಳಿಸುವ ಚಳುವಳಿಯನ್ನು ಪ್ರಾರಂಭಿಸಿದ.[38] ಆದರೆ, ಈ ಚಳುವಳಿ ಯುದ್ಧದಿಂದಾಗಿ ಪ್ರಾಮುಖ್ಯತೆಗೆ ಬರಲಿಲ್ಲ. ಆದರೂ, ಅಂದಿನ ಸೊಗಸುಗಾರಿಕೆಯ ಪ್ರಭಾವವನ್ನು ಇಂದಿಗೂ ಜರ್ಮನಿ ಸ್ತ್ರೀಯ ಅಲಂಕಾರ ವ್ಯಾಮೋಹದಲ್ಲಿ ಕಾಣಬಹುದು.

ಯುದ್ಧಕಾಲದಲ್ಲಿ ಸ್ತ್ರೀಯರು ಕಳವಳಕ್ಕೊಳಗಾದರು. ಯುದ್ಧದ ಕೊನೆಯ ಹಂತಗಳಲ್ಲಿ ಜರ್ಮನಿ ಸ್ತ್ರೀಯರ ಪರಿಸ್ಥಿತಿ ಹದಗೆಟ್ಟಿತ್ತು. ರಷ್ಯದ ಗಡಿಗಳಿಗೆ ಸೈನಿಕರನ್ನು ಸಾಗಿಸುತ್ತಿದ್ದ ರೈಲುಗಳನ್ನು ತಡೆದು ಯುದ್ಧವನ್ನು ನಿಲ್ಲಿಸಲು ಪ್ರಯತ್ನಿಸಿದರು. ಶತ್ರುಗಳ ವಿಮಾನಗಳು ಬಂದಾಗ, ವಿಮಾನಧಾಳಿ ಎಚ್ಚರಿಕೆಯ ಸಂಕೇತಗಳನ್ನು ಸರಿಯಾಗಿ ಕೊಡುತ್ತಿಲ್ಲವೆಂದು ದೂರಿದರು. ಬಹುಮಂದಿ ಮಹಿಳೆಯರ ಗಂಡಂದಿರು, ಮಕ್ಕಳು ಹಾಗೂ ಬಂಧುಗಳು ಯುದ್ಧರಂಗದಿಂದ ಹಿಂತಿರುಗಲೇ ಇಲ್ಲ. ಮತ್ತೆ ಕೆಲವರಿಗೆ ಅವರ ಬಗ್ಗೆ ಯಾವ ವಾರ್ತೆಯು ಮುಟ್ಟಲಿಲ್ಲ. "ನಾಜಿ ಜರ್ಮನಿ ಸ್ತ್ರೀಯರು ಸಮಾಜದ ಎಲ್ಲ ಕ್ಷೇತ್ರಗಳಲ್ಲೂ ಪೂರ್ಣವಾಗಿ ಪುರುಷರ ಕೆಲಸಗಳನ್ನು ನಿರ್ವಹಿಸಬೇಕಾಯಿತು. ಕರ್ತವ್ಯಗಳೇ ಹೆಚ್ಚಾಗಿದ್ದ ಹಕ್ಕುಗಳನ್ನು ಸ್ತ್ರೀಯರಿಗೆ ಕೊಟ್ಟು ಪುರುಷ ಸರ್ವಾಧಿಕಾರಿಯಾಗಿದ್ದನು. ಸ್ತ್ರೀಯರು ರಕ್ಷಣೆಯಿಲ್ಲದೆ ಭಯದ ಪರಿಸರದಲ್ಲಿ ಜೀವಿಸಬೇಕಾಗಿದ್ದಿತು" ಎಂದು ಕ್ಯಾಥೆರಿನ್ ಥಾಮಾಸ್ ತಮ್ಮ ಲೇಖನದಲ್ಲಿ ತಿಳಿಸಿದ್ದಾರೆ.

### ರಷ್ಯಾದೇಶದ ಸ್ತ್ರೀ

ಹಿಂದಿನ ಕಾಲದಲ್ಲಿ ರಷ್ಯಾದೇಶದ ಸ್ತ್ರೀಯರು ಪುರುಷರೊಡನೆ ಸಮಾನ ಹಕ್ಕುಗಳನ್ನು ಹೊಂದಿರಲಿಲ್ಲ. ಸ್ತ್ರೀಯರು ಪುರುಷರಿಗಿಂತ ಕೀಳೆಂಬ ಭಾವನೆ ಮೂಡಿತ್ತು. ಹದಿನಾರನೆಯ ಶತಮಾನದ "ಡೊಮಸ್ ಟೊರಿ" ಎಂಬ ರಷ್ಯದ ಕಾಯಿದೆ ಸ್ತ್ರೀಯರಿಗಿದ್ದ ಕೀಳು ಸ್ಥಾನಮಾನಗಳನ್ನು ತೋರಿಸುತ್ತದೆ. ಈ ಕಾಯಿದೆಯಂತೆ ಪತ್ನಿ ಏನಾದರೂ ಪತಿಗೆ ವಿರೋಧವಾಗಿ ನಡೆದುಕೊಂಡರೆ ಆಕೆಯನ್ನು ಥಳಿಸಲು ಅವಕಾಶವಿತ್ತು. ಸ್ತ್ರೀಗೆ ದೈಹಿಕ ಕಾರಣಗಳಿಂದ ತನ್ನ ಪತಿಯೊಡನೆ ಮಧುರ ಜೀವನ ಸಾಗಿಸಲು ಸಾಧ್ಯವಿಲ್ಲದ ಸಂದರ್ಭದಲ್ಲಿ ಆಕೆಯನ್ನು ಪತಿ ಚಾವಟಿಯಿಂದ ಹೊಡೆಯಬಹುದಾಗಿತ್ತು. ಆದರೆ, ಬೆತ್ತದಿಂದ ಇಲ್ಲವೆ ಸಲಾಕಿಯಿಂದ ಆಕೆಯನ್ನು ಹೊಡೆಯಲು ಅವನಿಗೆ ಅವಕಾಶವಿರಲಿಲ್ಲ.[39] ಕೋಳಿ ಮತ್ತು ಹಕ್ಕಿಗಳಂತೆ ಹೆಂಗಸು ಮಾನವ ವರ್ಗಕ್ಕೆ ಸೇರಿಲ್ಲವೆಂದು ಜನ ನಂಬಿದ್ದರು.[40] ಸ್ತ್ರೀ ಸ್ತ್ರೀಯಾಗಿ ಹುಟ್ಟಿದಳೆಂಬ ಕಾರಣದಿಂದ ಅವಳನ್ನು ಕೀಳಾಗಿ ಕಾಣಲಾಗುತ್ತಿತ್ತು. ಮನೆಗೆ ಬಂದ ಹೆಣ್ಣಿಗೆ ತುಚ್ಛ ಸ್ಥಾನವಿದ್ದಿತು. "ಸೊಸೆ ಅನ್ನಿಸಿಕೊಂಡಮೇಲೆ ನೀರನ್ನೂ ಹೊರಬೇಕು ನಿಂದೆಯನ್ನೂ ಹೊರಬೇಕು. ಸೊಸೆಯಾದ ಕಾರಣದಿಂದಲೇ ಸೊಸೆಯನ್ನು ಹೊಡೆಯುವುದು" ಎಂಬ ರಷ್ಯಾದ ಹೇಳಿಕೆಯೊಂದಿದೆ.[41]

ಸ್ತ್ರೀಯರು ಮನೆಯಿಂದ ಹೊರಗೆ ಹೋಗಲು ಅವಕಾಶವಿರಲಿಲ್ಲ. ಸ್ತ್ರೀ ಏನಾದರೂ ಕೋಪದಿಂದ ವರ್ತಿಸಿದರೆ ಇಲ್ಲವೆ ಅಗೌರವದಿಂದ ನಡೆದುಕೊಂಡರೆ ಅವಳನ್ನು ಥಳಿಸಬಹುದಿತ್ತು.[42] ಸ್ತ್ರೀಯರು ತಮ್ಮ ಉಡುಪನ್ನು ಹೊಲೆಯುವ ಚಿಪ್ಪಿಗನೊಂದಿಗೆ ಹೊರತು ಇತರರೊಡನೆ ಮಾತನಾಡಬೇಕಾದರೆ ತಮ್ಮ ಗಂಡಂದಿರ ಅನುಮತಿ

ಪಡೆಯಬೇಕಾಗಿತ್ತು. ಸ್ವಂತವಾಗಿ ಏನುಮಾಡುವುದಕ್ಕೂ ಅವರಿಗೆ ಅವಕಾಶವಿರಲಿಲ್ಲ. ಗಂಡ ಏನಾದರೂ ಕಾರಣದಿಂದ ಬೇರೆ ಊರಿಗೆ ಹೊರಟರೆ ಹೆಂಡತಿಯೂ ಅವನನ್ನು ಅನುಸರಿಸಬೇಕಿತ್ತು. ಗಂಡನಿಗೆ ವಿಧೇಯಳಾಗಿ ನಡೆದುಕೊಳ್ಳುವುದು ಆಕೆಯ ಕರ್ತವ್ಯವಾಗಿದ್ದಿತು.

ಆದರೆ, ಇಂದು ಸ್ತ್ರೀಯ ಪಾಲಿಗೆ ಇಂಥ ಬಿಕ್ಕಟ್ಟಿನ ಜೀವನ ಮಾಯವಾಗಿದೆ. ಆಕೆ ಪುರುಷನೊಡನೆ ಸಂಪೂರ್ಣ ಸಮಾನತೆಯನ್ನು ಪಡೆದಿದ್ದಾಳೆ. ರಷ್ಯಾ ದೇಶದಲ್ಲಿ 1917ರ ಕ್ರಾಂತಿಯ ತರುವಾಯ ಸ್ತ್ರೀಯರ ಸ್ಥಾನಮಾನಗಳು ಬಹುಮಟ್ಟಿಗೆ ಉತ್ತಮಗೊಂಡಿವೆ. ರಾಷ್ಟ್ರದ ಚುನಾವಣೆಗಳಲ್ಲಿ ಮತದಾನ ಮಾಡುವಹಕ್ಕನ್ನು ಆಕೆ ಪಡೆದಿದ್ದಾಳೆ ಹಾಗೂ ದೇಶದಲ್ಲಿ ತನಗೆ ಸರಿಹೊಂದುವ ಯಾವುದೇ ಅಧಿಕಾರಕ್ಕೆ ಬರುವ ಅವಕಾಶವನ್ನೂ ಹೊಂದಿದ್ದಾಳೆ. ದೇಶದ ಉನ್ನತ ಅಧಿಕಾರಗಳಲ್ಲಿರುವವರಲ್ಲಿ ಸುಮಾರು ಶೇಕಡ ಎಂಟು ಮಂದಿ ಮಹಿಳೆಯರಾಗಿದ್ದಾರೆ. ಟೌನ್ ಮತ್ತು ಸಿಟಿ "ಸೋವಿಯತ್" ಸಭೆಗಳ ಅಧ್ಯಕ್ಷ ಸ್ಥಾನಕ್ಕೆ ಸ್ತ್ರೀಯರು ಚುನಾಯಿತರಾಗುತ್ತಾರೆ. 1926ರಲ್ಲಿ ರಷ್ಯಾದ ನ್ಯಾಯಾಲಯುಗಳಲ್ಲಿ 140 ಮಂದಿ ಸ್ತ್ರೀಯರು ನ್ಯಾಯಾಧೀಶ ರಾಗಿ ನೇಮಕವಾಗಿದ್ದರು ಮತ್ತು ಬಹುಮಂದಿ ಮಹಿಳೆಯರು ವಕೀಲವೃತ್ತಿಯಲ್ಲಿ ದ್ದರು. ಆಗ ರಷ್ಯಾದ ಇತಿಹಾಸದಲ್ಲಿ ಪ್ರಥಮಬಾರಿಗೆ ಮಹಿಳೆಯೋರ್ವಳನ್ನು ರಾಯ ಭಾರಿಯಾಗಿ ಕಳುಹಿಸಲಾಗಿದ್ದಿತು. ಸ್ತ್ರೀ ವಿದ್ಯಾಭ್ಯಾಸಕ್ಕೆ ಅವಕಾಶ ದೊರಕಿ, ಗಣಿತ ಶಾಸ್ತ್ರಜ್ಞೆ ಸೋಫಿಕೋ ವಾಲೋವಸ್ಕಳಂಥ ಮಹಿಳಾಮಣಿಯರು ವಿಜ್ಞಾನ ಕ್ಷೇತ್ರ ದಲ್ಲಿ ಕಾಣಿಸಿಕೊಂಡರು. ಯೂರೋಪಿನ ಪುರುಷರ ವಿಶ್ವವಿದ್ಯಾಲಯದಲ್ಲಿ ಮೊತ್ತ ಮೊದಲ ಬಾರಿಗೆ ಪ್ರಾಧ್ಯಾಪಕರಾದವರಲ್ಲಿ ಸೋಫಿಕೋ ವಾಲೋವಸ್ಕ ಮೊದಲನೆ ಯವಳು. ಆಕೆ ನಾರ್ವೆಯ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕಿಯಾಗಿದ್ದಳು.

ರಷ್ಯಾದ ಮಹಿಳೆ ಪುರುಷನೊಡನೆ ಸಂಪೂರ್ಣ ನ್ಯಾಯ ಸಮಾನತೆಯನ್ನು ಪಡೆದಿದ್ದಾಳೆ. ಪುರುಷನು ತಾನು ವಿವಾಹವಾದ ಸ್ತ್ರೀ ತನ್ನ ಅಧೀನಳೆಂದು ತನ್ನ ಹೆಸರನ್ನು ಆಕೆಯ ಮೇಲೆ ಹೇರುವಂತಿಲ್ಲ ಹಾಗೂ ಅವಳ ಹೆಸರನ್ನು ಬದಲಾಯಿ ಸುವಂತಿಲ್ಲ. ಆಕೆ ಸ್ವತಃ ಇಚ್ಛಿಸಿದರೆ ತನ್ನ ಹೆಸರನ್ನು ಬದಲಾಯಿಸಿಕೊಳ್ಳ ಬಹುದು. ಪತ್ನಿಯನ್ನು ತನ್ನೊಡನೆಯೇ ವಾಸಿಸಬೇಕೆಂದು ಪತಿ ಒತ್ತಾಯ ಮಾಡು ವಂತಿಲ್ಲ. ಸ್ತ್ರೀ ತನಗೆ ಇಷ್ಟವಿಲ್ಲದಿದ್ದರೆ ಪತಿ ಬೇರೆ ಕಡೆ ವಲಸೆ ಹೋದಾಗ ಅವ ನೊಡನೆ ಹೋಗಬೇಕಾಗಿಲ್ಲ. ರಷ್ಯಾ ದೇಶದಲ್ಲಿ ಆಸ್ತಿಯ ವಿಷಯದಲ್ಲಿ ಸ್ತ್ರೀ–ಪುರುಷ ರೆಂಬ ಯಾವ ವ್ಯತ್ಯಾಸವಿರುವುದಿಲ್ಲ.

ರಷ್ಯನ್ ಮಹಿಳೆಯು ಪುರುಷನೊಡನೆ ಸಮಾಜಿಕ ಸಮಾನತೆಯನ್ನು ಗಳಿಸಿ ದ್ದಾಳೆ. ಶಾಲೆಗಳಾಗಲಿ, ಕಾಲೇಜುಗಳಾಗಲಿ ಇಲ್ಲವೆ ಸಂಘ ಸಂಸ್ಥೆಗಳಾಗಲಿ ಸ್ತ್ರೀ– ಪುರುಷರೆಂಬ ತಾರತಮ್ಯವಿಲ್ಲದೆ ಸಮಾನ ಅವಕಾಶಗಳನ್ನು ಕಲ್ಪಿಸಿಕೊಡುತ್ತವೆ. ವಿವಿಧ ಕ್ರೀಡೆಗಳನ್ನು ಸ್ತ್ರೀ–ಪುರುಷರು ಒಟ್ಟಾಗಿಯೇ ಅಭ್ಯಾಸಮಾಡುತ್ತಾರೆ.

ಕಾರ್ಮಿಕ ಸಂಘಗಳಲ್ಲಿ ಮತ್ತು ಕಮ್ಯೂನಿಸ್ಟ್ ಪಕ್ಷದ ಸಭೆಗಳಲ್ಲಿ ಪುರುಷರಿಗೆ ಇರುವಷ್ಟು ಹಕ್ಕು ಸ್ತ್ರೀಯರಿಗೂ ಇದೆ. ಯಾವ ಸಮಾಜಿಕ ಚಟುವಟಿಕೆಗಳಲ್ಲಿಯೇ ಆಗಲಿ ಸ್ತ್ರೀಗೆ ಸ್ಥಾನವಿಲ್ಲವೆಂಬಂತಿಲ್ಲ. ರಷ್ಯಾ ಕಮ್ಯೂನಿಸ್ಟ್ ಸಭೆಗಳ ಅಧ್ಯಕ್ಷಿಣಿಯರು ಇತರ ದೇಶಗಳ ಮಹಿಳೆಯರಂತೆ ಖಂಡನೆಗೊಳಗಾಗದೆ ಪುರುಷರೊಡನೆ ಕಲೆತು ದೇಶದ ಕಾರ್ಯಕಲಾಪಗಳಲ್ಲಿ ಭಾಗವಹಿಸುತ್ತಾರೆ. ರಷ್ಯನ್ ಮಹಿಳೆಗೆ ಯಾವ ಸ್ಥಳದಲ್ಲಾಗಲಿ ಪ್ರತ್ಯೇಕ ಉಪಚಾರದ ಆವಶ್ಯಕತೆ ಇರುವುದಿಲ್ಲ. ಸ್ತ್ರೀಯರು ತಲೆಕೂದಲನ್ನಿಡುವುದರಿಂದ ಹಿಡಿದು ತಮ್ಮ ನಡೆ ನುಡಿಗಳವರೆಗೂ ಪುರುಷನೊಡನೆ ಸಮಾನತೆ ಹೊಂದಿದ್ದಾರೆ. ಅಲ್ಲಿ ಗಂಡು-ಹೆಣ್ಣುಗಳೆಂಬ ಭೇದಭಾವನೆ ಇಲ್ಲ. "ರಷ್ಯಾದಲ್ಲಿ ಕಿರಿಯರು, ವಿವಾಹಿತರು, ಅವಿವಾಹಿತರು ಎಂಬ ವ್ಯತ್ಯಾಸವಿಲ್ಲದೆ, ಸ್ತ್ರೀ-ಪುರುಷರು ಹಗಲು ರಾತ್ರಿಯೆನ್ನದೆ ಸಾರ್ವಜನಿಕ ಹಾಗೂ ಏಕಾಂತ ಸ್ಥಳಗಳಲ್ಲಿ ಯಾವ ಲಜ್ಜೆ ಆತಂಕಗಳೂ ಇಲ್ಲದೆ ಬೆರೆಯುತ್ತಾರೆ. ಅನುಮಾನ ಅಥವ ಖಂಡನೆಗೆ ಗುರಿಯಾಗುವೆನೆಂಬ ಭೀತಿ ಅವರಿಗೆ ಇರುವುದಿಲ್ಲ.[43]

ರಷ್ಯನ್ ಮಹಿಳೆ ಆರ್ಥಿಕ ಸಮಾನತೆಯನ್ನು ಪುರುಷನೊಡನೆ ಪಡೆದುಕೊಂಡಿದ್ದಾಳೆ. ಮಹಿಳೆಯು ಸಹ ಪುರುಷನಂತೆ ಕಾರ್ಮಿಕ ವರ್ಗಕ್ಕೆ ಸೇರಬೇಕೆಂಬುದು ಸಮತಾವಾದದ ಉದ್ದೇಶವೂ ಆಗಿದೆ. ರಾಷ್ಟ್ರದ ಸಂಪತ್ತನ್ನು ಹೆಚ್ಚಿಸುವುದಕ್ಕಾಗಿ ಮತ್ತು ರಾಷ್ಟ್ರದ ಸ್ವಾವಲಂಬನೆಗಾಗಿ ಸ್ತ್ರೀಯರು ಸಹ ಶ್ರಮಿಸುತ್ತಾರೆ. ರಷ್ಯಾದಲ್ಲಿ ಮಹಿಳೆ ಉದ್ಯೋಗನಿರತಳಾಗಬಾರದೆಂಬ ಹಿಂದಿನ ಪದ್ಧತಿ ಮಾಯವಾಗಿದೆ. ಕೈಗಾರಿಕೆ, ಶಿಕ್ಷಣ, ವೈದ್ಯಕೀಯ ಮೊದಲಾದ ಕ್ಷೇತ್ರಗಳಲ್ಲಿ ರಷ್ಯಾ ಮಹಿಳೆ ಉದ್ಯೋಗಮಾಡಲಾರಂಭಿಸಿರುವುದಲ್ಲದೆ, ತಾಂತ್ರಿಕ ವಿಷಯಗಳಲ್ಲೂ ತಜ್ಞಳಾಗಿದ್ದಾಳೆ. ವಿವಾಹಿತ ಸ್ತ್ರೀಯರು ಕೂಡ ಎಲ್ಲೆಡೆಯಲ್ಲಿಯೂ ಕೆಲಸಮಾಡುತ್ತಾರೆ. ಸ್ತ್ರೀಯರೇ ಹೆಚ್ಚಾಗಿರುವ ಕಾರ್ಖಾನೆಗಳಲ್ಲಿ ಮತ್ತು ಸಂಸ್ಥೆಗಳಲ್ಲಿ ವಿವಾಹಿತ ಮತ್ತು ಗರ್ಭಿಣಿ ಸ್ತ್ರೀಯರಿಗೆ ವಿಶೇಷ ಸೌಲಭ್ಯಗಳಿದ್ದು, ಮಕ್ಕಳಿಗಾಗಿಯೇ ಶಿಶುವಿಹಾರಗಳನ್ನು ಏರ್ಪಡಿಸಿರುತ್ತಾರೆ. ತಾಯಂದಿರು ಕೆಲಸಮಾಡುವ ಸಮಯದಲ್ಲಿ ಮಕ್ಕಳನ್ನು ನೋಡಿಕೊಳ್ಳಲು ಉಚಿತ ಸೌಲಭ್ಯಗಳು ಏರ್ಪಟ್ಟಿವೆ.

ವಿದ್ಯಾಭ್ಯಾಸದಲ್ಲಿ ಸಹ ಮಹಿಳೆ ಪುರುಷನೊಡನೆ ಸಮಾನತೆಯನ್ನು ಪಡೆದಿದ್ದಾಳೆ. ಪುರುಷರಿಗೆ ಇರುವಷ್ಟು ವಿದ್ಯಾಭ್ಯಾಸದ ಅವಕಾಶಗಳು ಸ್ತ್ರೀಯರಿಗೆ ವ್ಯಾಪಕವಾಗಿವೆ. ಹೆಚ್ಚಿನ ಸಂಖ್ಯೆಯಲ್ಲಿ ತಾಂತ್ರಿಕ ಮತ್ತು ವೈದ್ಯಕೀಯ ಅಧ್ಯಯನಕ್ಕೆ ಸ್ತ್ರೀಯರು ಸೇರುತ್ತಾರೆ. ರಷ್ಯಾದ ಪ್ರಜಾಸಂಖ್ಯೆಯಲ್ಲಿ ಸುಮಾರು ಮೂರನೆ ಒಂದು ಭಾಗದಷ್ಟು ಮಂದಿ ಮಹಿಳೆಯರು ವೈದ್ಯಕೀಯ ಕಾಲೇಜುಗಳಲ್ಲೂ, ತಾಂತ್ರಿಕ ಶಾಲೆಗಳಲ್ಲೂ ಶಿಕ್ಷಣ ಪಡೆಯುತ್ತಾರೆ. ಸೈನಿಕಶಿಕ್ಷಣ ಶಾಲೆಗಳಲ್ಲಿ ಸಹ ಸ್ತ್ರೀಯರು ಸೈನಿಕ ತರಬೇತಿ ಪಡೆಯುತ್ತಾರೆ. ಒಟ್ಟಿನಲ್ಲಿ ಹೇಳುವುದಾದರೆ, ರಷ್ಯಾ ದೇಶದ ಮಹಿಳೆಯರು

ರಾಜಕೀಯ, ಸಾಮಾಜಿಕ, ನ್ಯಾಯ, ಆರ್ಥಿಕ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಪುರುಷ ನೊಡನೆ ಸಮಾನತೆಯನ್ನು ಪಡೆದಿದ್ದಾರೆ.

ಸ್ತ್ರೀಯ ಸ್ಥಾನಮಾನಗಳ ವಿಷಯವನ್ನು ವಿಹಂಗಮ ದೃಷ್ಟಿಯಿಂದ ನೋಡಿದಾಗ ನಮಗೆ ಕಾಣಬರುವ ಮುಖ್ಯಾಂಶಗಳಿವು : ನಾವು ವಿವಿಧ ದೇಶಗಳ ನಾಗರಿಕತೆ ಮತ್ತು ಸಂಸ್ಕೃತಿಗಳನ್ನು ತುಲನಮಾಡಿದಾಗ ಪ್ರಾಚ್ಯ ಮತ್ತು ಪಾಶ್ಚಾತ್ಯ ದೇಶಗಳಲ್ಲಿ ಒಡೆದ ಹಾಗೂ ಅಸಂತೋಷದಿಂದ ಕೂಡಿದ ಕುಟುಂಬಗಳೇ ಹೆಚ್ಚಾಗಿ ಕಂಡು ಬರುತ್ತವೆ. ಎಲ್ಲ ದೇಶಗಳಲ್ಲೂ ವಿವಾಹ ಸಂಬಂಧವಿಲ್ಲದೆ ಹುಟ್ಟಿದ ಮಕ್ಕಳ ಸಮಸ್ಯೆ ಇದೆ. ಇದು ಪಾಶ್ಚಾತ್ಯರಲ್ಲಿ ಬಹುಮುಖ್ಯವಾದ ಸಾಮಾಜಿಕ ಸಮಸ್ಯೆಯಾಗಿದೆ. ವಿವಾಹವಿಚ್ಛೇದನ ಮತ್ತು ವ್ಯಭಿಚಾರಗಳಂಥ ಸಮಸ್ಯೆಗಳು ವಿಶ್ವದ ಎಲ್ಲ ಕಡೆಗಳಲ್ಲೂ ಕಾಣಬರುತ್ತದೆ.

ಮೇಲಿನ ವಿಷಯಗಳಲ್ಲಿ ಹಲವಾರು ವೈವಿಧ್ಯಗಳಿವೆ. ಪ್ರಾಚ್ಯ ದೇಶಗಳಲ್ಲಿ ಸ್ತ್ರೀಸ್ವಾತಂತ್ರ್ಯವಾದಿಗಳ ಪ್ರಭಾವವಿದ್ದರೂ ಹೇಳಿಕೊಳ್ಳುವಂಥ ಕ್ರಾಂತಿಕಾರಕ ಬದಲಾವಣೆಗಳಾಗಿಲ್ಲ. ವೈವಾಹಿಕ ಜೀವನದಲ್ಲಿ ಪ್ರೀತಿಯ ಪವಿತ್ರತೆಗೆ ಬೆಲೆ ಇದೆ. ತಾಯಂದಿರಲ್ಲಿ ಮಕ್ಕಳ ಬಗೆಗಿರುವ ಮಮತೆ ಮತ್ತು ಸ್ತ್ರೀಯರಲ್ಲಿ ಪತಿಯೇ ದೈವವೆಂಬ ಉದಾತ್ತ ಭಾವನೆ ಮುಂತಾದವು ದೇಶದ ಸತ್ಸಂಪ್ರದಾಯಗಳನ್ನು ಉಳಿಸಿಕೊಂಡು ಬರುತ್ತಿವೆ. ಭಾರತದ ಸ್ತ್ರೀಯರು ತಮ್ಮ ಪತಿಯರ ಬಗ್ಗೆ ಹೆಚ್ಚಿನ ಗೌರವ ಮತ್ತು ಪೂಜ್ಯಭಾವನೆಗಳನ್ನು ಹೊಂದಿದ್ದಾರೆ. 'ನಾವು ಗೌರವವಾಗಿ ಬಾಳಬೇಕು' ಎಂಬುದರಲ್ಲಿ ನಮ್ಮ ಸತ್ಸಂಪ್ರದಾಯಗಳೆಲ್ಲ ಸೇರಿರುತ್ತವೆ: ಗೌರವಸ್ಥರ ಕುಟುಂಬಗಳಲ್ಲಿ ಪತ್ನಿ ಇಂದಿಗೂ ಪತಿಯ ಸರಿಸಮಾನಳಾಗಿ ಬೀದಿಯಲ್ಲಿ ಹೋಗುವುದಿಲ್ಲ. ಅವನ ಹಿಂದೆಯೇ ನಡೆದು ಹೋಗುತ್ತಾಳೆ. ತನ್ನ ಪತಿ ಊಟಮಾಡುವವರೆಗೆ ತಾನು ಊಟಮಾಡದೆ ಪತಿಗಾಗಿ ಕಾಯುತ್ತಾಳೆ. ಆಕೆ ಒಂಟಿಯಾಗಿ ತಿರುಗಾಡುವುದಿಲ್ಲ. ಪತಿ ಮತ್ತು ಅತ್ತೆ ಮಾವಂದಿರಲ್ಲಿ ಭಾರತದ ನಾರಿಗೆ ಇರುವ ಪೂಜ್ಯಭಾವನೆಗಳು ಕುಟುಂಬಕ್ಕೆ ಚೈತನ್ಯ ಪ್ರಾಯವಾಗಿವೆ. ಪಾಶ್ಚಿಮಾತ್ಯ ಮಹಿಳೆ ಗಂಡನೊಡನೆ ಸಮಾನತೆಯನ್ನು ಪಡೆದುಕೊಂಡಿದ್ದಾಳೆ. ಆಕೆಗೆ ಪ್ರಾಚ್ಯ ದೇಶಗಳಲ್ಲಿರುವಂಥ ಗೃಹಬಂಧನಗಳು ಮತ್ತು ಕಟ್ಟುಪಾಟುಗಳಿಲ್ಲ. ಆಕೆಗೆ ಅತ್ತೆ ಮಾವಂದಿರ ಸಮಸ್ಯೆಯೇ ಇಲ್ಲವೆನ್ನಬೇಕು. ಗಂಡ ಅವಳ ಬೇಕು-ಬೇಡಗಳತ್ತ ಗಮನಕೊಡಬೇಕು. ಪುರುಷ ಅವಳ ಕೃಪಾ ಕಟಾಕ್ಷಕ್ಕಾಗಿ ನೂರೊಂದು ಸೇವೆ ಸಲ್ಲಿಸಲು ಸಿದ್ಧನಾಗಿರುತ್ತಾನೆ. ಒಬ್ಬ ಸ್ತ್ರೀ ಕೈ ತಪ್ಪಿ ಕರವಸ್ತ್ರವನ್ನು ಬೀಳಿಸಿದ್ದರೆ, ಅದನ್ನು ಅವಳಿಗೆ ತಲುಪಿಸಲು ಹತ್ತಾರು ಕೈಗಳು ಮುಂದಾಗುತ್ತವೆ. ವಾಹನದಿಂದ ಅವಳೇನಾದರೂ ಹೊರಬರಲು ಹೊರಟರೆ, ಅವಳನ್ನು ಇಳಿಸಿಕೊಳ್ಳಲು ಪುರುಷನು ಸಿದ್ಧನಾಗುತ್ತಾನೆ. ಸಮಾರಂಭಗಳಿಗೇನಾದರೂ ಒಬ್ಬ ಸ್ತ್ರೀ ಬಂದರೆ, ಪುರುಷರು ತಮ್ಮ ಪೀಠಗಳಿಂದ ಎದ್ದು ಆಕೆ ಕೂರಲು ಸ್ಥಳ ಒದಗಿಸುತ್ತಾರೆ. ಸಾರ್ವಜನಿಕ ವಾಹನದೊಳಕ್ಕೆ ಹೆಂಗಸೊಬ್ಬಳು ಬಂದರೆ, ಪುರುಷ

ತನ್ನ ತಲೆಯ ಮೇಲಿನ ಟೋಪ್ಪಿಯನ್ನು ತೆಗೆದು ಆಕೆಗೆ ಗೌರವ ಸಲ್ಲಿಸಿ ಜಾಗಮಾಡಿ ಕೊಡುತ್ತಾನೆ. ಇಂಥ ನಿದರ್ಶನಗಳು ಪಾಶ್ಚಾತ್ಯ ಮಹಿಳೆಗೆ ನವನಾಗರೀಕತೆಯ ಸೋಗಿನಲ್ಲಿ ಸಮಾಜ ಕಲ್ಪಿಸಿರುವ ದೊಡ್ಡಸ್ತಿಕೆಯ ಮೇಲೆ ಬೆಳಕುಚೆಲ್ಲುತ್ತವೆ.[44]

ಪಾಶ್ಚಾತ್ಯ ದೇಶಗಳಲ್ಲಿ ಕೀಳು ದರ್ಜೆಯ ಸ್ತ್ರೀಯ ಸ್ಥಾನಮಾನಗಳು ಮೇಲಿನ ದರ್ಜೆಯ ಶ್ರೀಮಂತ ಸ್ತ್ರೀಯ ಸ್ಥಾನಮಾನಗಳಿಗೆ ಸರಿದೂಗುವುದಿಲ್ಲ. ಲಂಡನ್, ಪ್ಯಾರಿಸ್, ಬರ್ಲಿನ್, ವಿಯನ್ನ ಮೊದಲಾದ ನಗರಗಳಲ್ಲಿ ಜನನಿಬಿಡ ರಸ್ತೆಗಳಲ್ಲೆ ಸ್ತ್ರೀ ಪುರುಷರ ಕಾಮುಕ ವರ್ತನೆಯನ್ನು ಕಾಣಬಹುದು. ಯೂರೋಪಿನ ದೊಡ್ಡ ದೊಡ್ಡ ನಗರಗಳಲ್ಲಿ ಪುರುಷರು ತಮ್ಮ ನಲ್ಲೆಯರನ್ನು ಮತ್ತು ಔಪಚಾರಿಕ ಸಮಾರಂಭಗಳಲ್ಲಿ ತಾವು ಸಂಧಿಸುವ ಮಹಿಳೆಯರನ್ನು ಬಿಟ್ಟು ಇತರ ಸ್ತ್ರೀಯರೊಡನೆ ಸರ್ವಸಾಮಾನ್ಯವಾಗಿ ಹೀನವಾಗಿ ವರ್ತಿಸುತ್ತಾರೆ: ಸ್ವೇಚ್ಛೆಯಾಗಿ ತಿರುಗುವ ಸ್ತ್ರೀಯ ಸೊಬಗು, ಸ್ತ್ರೀಯರ ನಿರುದ್ಯೋಗ ಸಮಸ್ಯೆ, ಚೆಲೆವೆಣ್ಣುಗಳ ಆಕರ್ಷಕ ನಗೆ ಮತ್ತು ಉಪಾಹಾರ ಗೃಹಗಳಲ್ಲಿನ ಸೇವಕಿಯರ ಕರುಣಾಜನಕ ಸ್ಥಿತಿ ಇವು ಯುವಕರು ಹಣ ನೀಡಿ ಅವರ ಸೇವೆಯನ್ನು ಪಡೆಯಲು ಉತ್ತೇಜಕವಾಗಿವೆ. ಪಾಶ್ಚಾತ್ಯ ದೇಶಗಳಲ್ಲಿ ಇಂಥ ಪಣ್ಯಾಂಗನೆಯರು, ನೃತ್ಯಗಾತಿಯರು, ಉಪಾಹಾರ ಗೃಹದ ಸೇವಕಿಯರು ಒಂದು ವಿಧವಾದ ಆರ್ಥಿಕ ಪರಿಹಾರವಿದ್ದಂತೆ.[45]

ಕೀಳುದರ್ಜೆಯ ಸ್ತ್ರೀಯರ ಬಗೆಗೆ ಇರುವ ತಾತ್ಸಾರದೃಷ್ಟಿಗೆ ಅವರು ನಿರತರಾಗುವ ಹೀನ ವೃತ್ತಿಗಳೇ ಕಾರಣ: ಅವರು ಕಾಮುಕರ ಮನರಂಜನೆಗಾಗಿ ನಗ್ನ ನೃತ್ಯವಾಡುವುದು, ಪುರುಷರೊಡನೆ ಒಟ್ಟಿಗೆ ಸ್ನಾನ ಮಾಡುವುದು ಹಾಗೂ ತಡೆಯಿಲ್ಲದ ಕಾಮುಕೂಟದಲ್ಲಿ ನಿರತರಾಗುವುದು ಅವರನ್ನು ಕೀಳಾಗಿ ನೋಡಲು ಕಾರಣಗಳಾಗಿರುತ್ತವೆ. ಮಾದಕ ಪಾನೀಯಗಳನ್ನು ಸೇವಿಸಿ, ಹುಚ್ಚು ಹಿಡಿಸುವ ಸಂಗೀತ ಧ್ವನಿಯ ಗುಂಗರಲ್ಲಿ ಸಿಕ್ಕಿ, ಲಲನೆಯರೊಡನೆ ನರ್ತಿಸುವ ಪುರುಷನು ಸರಳ ಸ್ತ್ರೀಯೋರ್ವಳನ್ನು ಮುಟ್ಟಿದರೆ ಹೇಗೆ ತಾನೆ ಪುಳಕಗೊಂಡಾನು ?[46] ಪಾಶ್ಚಾತ್ಯರಲ್ಲಿ ಲೈಂಗಿಕ ಸ್ವಾತಂತ್ರ್ಯ ತನ್ನದೇ ಆದ ಪ್ರತಿಕ್ರಿಯೆಯನ್ನು ಹೊಂದಿದೆ.

ಸಾಧಾರಣ ಸಂದರ್ಭಗಳಲ್ಲಿ ಸ್ತ್ರೀ ತನ್ನ ಸಹಜ ಪ್ರವೃತ್ತಿಯಿಂದ ಪುರುಷನನ್ನು ಆಕರ್ಷಿಸಬಲ್ಲಳು. ಆದರೆ ಪುರುಷನನ್ನು ಸಂಧಿಸಿ ಅವನೊಡನೆ ಸಿನಿಮಾ, ನಾಟಕರಂಗ, ಹೊಟೇಲ್‌ಗಳಲ್ಲಿ ಕಾಲಕಳೆದು ತನ್ನ ದೇಹವನ್ನು ಪ್ರದರ್ಶಿಸಿದ ನಂತರ ಆಗಂತುಕ ಸ್ತ್ರೀ ಮೊದಲಿನಂತೆ ಸ್ವಾಭಾವಿಕವಾಗಿ ಅವನನ್ನು ಪುನಃ ಆಕರ್ಷಿಸಲಾರಳು. ಇದರಿಂದಾಗಿ ಪುರುಷನ ಆಕರ್ಷಣೆಯನ್ನು ಕಳೆದುಕೊಳ್ಳುವ ಭಯ ಅವಳಿಗಿದೆ.

ಸ್ತ್ರೀ ಪುರುಷರ ಪರಸ್ಪರ ಆಕರ್ಷಣೆ, ಲೈಂಗಿಕ ಜೀವನ ಎಲ್ಲೆಡೆಯೂ ಇದೆ. ಆದಕ್ಕೆ ನೀತಿಬದ್ಧವಾದ ಸಾಮಾಜಿಕ ಮುದ್ರೆಯನ್ನೊತ್ತಿದರೆ ಸ್ತ್ರೀಪುರುಷರ ಸಂಬಂಧ ಸುವ್ಯವಸ್ಥಿತವಾಗಿ ನಡೆಯುತ್ತದೆ. ತಾನು ದುರ್ಬಲ ಸ್ತ್ರೀಯ ರಕ್ಷಕ ಮತ್ತು ಒಡೆಯನೆಂಬುವ ಪುರುಷನು ಸ್ತ್ರೀಯನ್ನು ಕೆಲವೊಮ್ಮೆ ಕೀಳು ದೃಷ್ಟಿಯಿಂದ ನೋಡಲು

ಕಾರಣವಾಗುತ್ತದೆ. ಪುರುಷ ಕೊಡುವ ರಕ್ಷಣೆಗೆ ಸ್ತ್ರೀ ಸದಾ ನಮ್ರಳಾಗಿರುತ್ತಾಳೆ. ವೈವಾವಿಕ ಜೀವನ ಕುಟುಂಬವನ್ನು ಭದ್ರಗೊಳಿಸಿ ಸ್ತ್ರೀಪುರುಷರಿಗೆ ಸಮಾಜದಲ್ಲಿ ಗಣ್ಯಸ್ಥಾನ ಕಲ್ಪಿಸುತ್ತದೆ. ಜೀವನದ ಪ್ರತಿಯೊಂದು ಹಂತದಲ್ಲೂ ಸ್ತ್ರೀಪುರುಷರಿಗೆ ಒಬ್ಬರ ಅವಶ್ಯಕತೆ ಇನ್ನೊಬ್ಬರಿಗೆ ಇದ್ದೆ ಇರುತ್ತದೆ. ಒಬ್ಬರಿಂದ ಇನ್ನೊಬ್ಬರ ಶೋಧನೆ ಕೆಲವೊಮ್ಮೆ ಭಯಂಕರ ಫಲಿತಾಂಶವನ್ನು ತರಬಹುದು. ಪೂರ್ವ ದೇಶಗಳಲ್ಲಿ ಕಾಣುವ ವಿನಯ, ತಾಳ್ಮೆ. ಪ್ರೀತಿ, ವಿಶ್ವಾಸ ಮೊದಲಾದ ಸ್ತ್ರೀಯ ದೊಡ್ಡ ಗುಣಗಳು ಗಂಡ-ಹೆಂಡಂದಿರನ್ನು ಕೊನೆಯವರೆವಿಗೂ ಒಟ್ಟುಗೂಡಿಸಿವೆ.

**ಸಂದರ್ಭಸೂಚಿ :**


1. *Women in Hindu Law :* K. T. Bhashyam Aiyangar, P. 7. S. Ganeshan Publications, Triplicane, Madras, 1928.
2. *Position of Women in Hindu Civilisations :* A. S. Altekar, pp. 150–157, Motilal Panarasidas, Benaras.
3. *Op. Cit.*, K. T. B. Iyengar, p. 9.
4. *Op. Cit.*, K. T. B. Iyengar, p. 9.
5. *Op. Cit.*, K. T. B. Iyengar, p. 12.
6. *Op. Cit.*, K. T. B. Iyengar, p. 15.
7. *Op. Cit.*, K. T. B. Iyengar, p. 30.
8. *Op. Cit.*, A. S. Altekar, p. 85.
9. *Op. Cit.*, K. T. B. Iyengar, p. 37.
10 *Women in Modern India* : Ed. E. C. Gedge, p. 7. D. B. Taraporewala Sons & Co., Bombay, 1929.
11. *The Light of Truth* : English Translation of Swamy Dayanand's Book, p. 141.
12. *Position of Women in Indian Life :* Her Highness the Maharani of Baroda and S. M. Mitra, pp. 34–36, Longmans Green & Co., London, 1911.
13. *Hindu Society at Cross–Roads :* 1955, K. M. Pannikar, pp. 30–39.
14. *Family and Marriage in India :* K. M. Kapadia, p. 177, Geoffery Cumbelege, Oxford University Press, London, 1955.
15. *Ibid* : p. 174.
16. *Introduction to Islam :* Ed. Mohammad Hamadullah, Publication Centre, Culture Islamique, Paris, 1957, p. 128.

17. *Op. Cit.*, A. R. Wadia, p. 232.
18. *Op. Cit.*, K. M. Kapadia, p. 189.
19. *Op. Cit.*, M. Hamadullah, p. 128.
20. *Op. Cit.*, M. Hamadullah, p. 125.
21. *Position of Women in Indian Life:* P.S. H.H. the Maharani of Baroda, Longmans Green & Co., London, 1911.
22. *Op. Cit.*, A. R. Wadia, pp. 231-234.
23. *Op. Cit.*, M. Hamadullah, p. 123.
*Ibid*: M. Hamadullah, p. 129.
24. *Op. Op.*, M. Hamadullah, p. 124.
25. *Ibid.* M. H, p. 124.
26. M. H., p. 126.
27. *Ibid.*: M. Hamadullah, p. 133.
28. *Marriage and Family in India:* K. M. Kapadia, pp. 176–177.
29. *Ibid*: p. 181.
30. *Op. Cit.*, K. M. Kapadia, p. 179.
31. *Women in Nazi Germany:* Katherine Thomas, p. 29: Victor Gollancz, Ltd., London, 1943.
32. *Op. Cit.*, Katherine Thomas, p. 29.
33. *Op. Cit.*, Katherine Thamas, p. 55.
34. *Op. Cit.*, Katherine Thomas, p. 55.
35. *Op. Cit.*, Katherine Thomas, p. 55.
36. *Op. Cit.*, Katherine Thomas, p. 56.
37. *Op. Cit.*, Katherine Thomas, p. 73.
38. *Op. Cit.*, K. Thomas, p. 99.
39. *Women in Soviet Russia*: F. W. Halle, Front page. Routledge, London, 1933.
40. *Op. Cit*, F. W. Halle, Front page.
41. *Ibid*: Front page.
42. *Ibid*: p. 13.
43. *Humanity Uprooted*: Maurice Hindus, pp. 91–92, Jonathan Cape, London, 1929
44. *Op. Cit.*, A. R. Wadia, p. 26.
45. *India in the New World Order*: Radhakrishna Khanna, p. 278. Minerva Book shop, Lahore, 1942.
46. *Op. Cit*, Radhakrishan Khanna, p. 280.

## ಅಧ್ಯಾಯ ೫

# ಸಾರ್ವಜನಿಕ ಚಟುವಟಿಕೆಗಳು

ಸಾರ್ವಜನಿಕ ಕ್ಷೇತ್ರದಲ್ಲಿ ಸ್ತ್ರೀಯ ಸ್ಥಾನಮಾನಗಳ ಬಗೆಗೆ ವಿವಿಧ ಅಭಿಪ್ರಾಯ ಗಳಿವೆ. ಸಾರ್ವಜನಿಕ ಸೇವೆಯ ಸಂಬಂಧದಲ್ಲಿ ನಡೆಸಿದ ಸಮೀಕ್ಷೆಯಿಂದ ಹಲವು ಬಗೆಯ ಉದ್ಯೋಗಗಳಿಗೆ ಸ್ತ್ರೀಯರೆ ಅರ್ಹರು, ಆ ಉದ್ಯೋಗಗಳಲ್ಲಿ ಅವರು ಪುರುಷರಿ ಗಿಂತ ಚುರುಕಾಗಿ ಹಾಗೂ ದಕ್ಷತೆಯಿಂದ ಕೆಲಸಮಾಡಬಲ್ಲರು ಎಂಬ ಅಭಿಪ್ರಾಯ ಹೊರಬಂದಿದೆ. ಪ್ರಾಚೀನ ಕುಟುಂಬಗಳಲ್ಲಿ ಸ್ತ್ರೀ-ಪುರುಷರಲ್ಲಿ ಕೆಲಸದ ಹಂಚಿಕೆ ಇದ್ದಿತೆ ಎಂಬ ಬಗ್ಗೆ ಆಧಾರಗಳು ದೊರಕುವಂತಿಲ್ಲವಾದರೂ ಕೆಲವು ಸಂಗಡಗಳಲ್ಲಿ ಸ್ತ್ರೀ-ಪುರುಷರ ಕಾರ್ಯಕ್ಷೇತ್ರ ಸೀಮಿತವಾಗಿರುವುದನ್ನು ನೋಡಬಹುದು. ಕೆಲವು ಜನಾಂಗಗಳಲ್ಲಿ ಕುಂಬಾರಿಕೆ, ನೇಯ್ಗೆ ಮತ್ತು ಹೊಲಿಗೆ ಕೆಲಸಗಳು ಪುರುಷರ ಕಸುಬಾಗಿತ್ತು. ಮತ್ತೆ ಕೆಲವು ಬುಡಕಟ್ಟುಗಳಲ್ಲಿ ಆ ಕೆಲಸಗಳು ಸ್ತ್ರೀಯರ ಕೆಲಸ ಗಳಾಗಿದ್ದುವು. ಹೋಪಿ ಬುಡಕಟ್ಟಿನ ಪುರುಷರು ನೂಲು ತೆಗೆಯುವುದು ಮತ್ತು ನೇಯ್ಗೆ ಕೆಲಸಮಾಡಿದರೆ ಅವರ ನೆರೆಯವರಾದ ನವಹೋಸ್ ಜನರಲ್ಲಿ ಈ ಕೆಲಸ ಗಳನ್ನು ಸ್ತ್ರೀಯರು ಮಾಡುತ್ತಿದ್ದರು. ಮತ್ತಿತರ ಪ್ರಾಚೀನ ಬುಡಕಟ್ಟಿನ ಜನರಲ್ಲಿ ಬೇಟೆಯಾಡುವುದು, ಮೀನುಹಿಡಿಯುವುದು ಪುರುಷರ ಕೆಲಸಗಳಾದರೆ ಉಳಿದೆಲ್ಲ ಕೆಲಸಗಳನ್ನು ಸ್ತ್ರೀಯರು ಮಾಡುತ್ತಾರೆ.

ಆದಿವಾಸಿ ಕುಟುಂಬಗಳನ್ನು ಬಿಟ್ಟು, ಉಳಿದ ಜನಾಂಗಗಳ ಜೀವನ ವಿಧಾನ ಗಳನ್ನು ಗಮನಿಸಿದರೆ ಸ್ತ್ರೀ-ಪುರುಷರಿಗೆ ಪ್ರತ್ಯೇಕವಾಗಿ ಮೀಸಲಾದ ವೃತ್ತಿಗಳು ಕಂಡು ಬರುವುದಿಲ್ಲ. ಸ್ತ್ರೀಯರನ್ನು ಮತ್ತು ಮಕ್ಕಳನ್ನು ದುಡಿಮೆಯ ಕೆಲಸಗಳಿಗೆ ನೇಮಿಸಿ ಕೊಳ್ಳುವುದನ್ನು ನಿಷೇಧಿಸಿ ಕಾನೂನು ಹೊರಡಿಸುವುದಕ್ಕೆ ಹಿಂದೆ, ಇಂಗ್ಲೆಂಡಿನ ಕಲ್ಲಿದ್ದಲು ಗಣಿಗಳಲ್ಲಿ ಸ್ತ್ರೀಯರು ಮೂರು ಅಡಿಗಳಷ್ಟು ಅಗಲವೂ ಇಲ್ಲದ ಸುರಂಗ ಮಾರ್ಗಗಳಲ್ಲಿ ಅರೆನಗ್ನರಾಗಿ ತೆವಳುತ್ತಾ ಕಲ್ಲಿದ್ದಲ ಗಾಡಿಗಳನ್ನು ಎಳೆಯಬೇಕಾಗು ತ್ತಿತ್ತು. ಸಾಧಾರಣವಾಗಿ, ಕಲ್ಲಿದ್ದಲ ಗಾಡಿಗಳ ಕಬ್ಬಿಣದ ಸರಪಳಿಗಳನ್ನು ಎಳೆಯಲು ಅನುಕೂಲವಾಗುವಂತೆ, ಸ್ತ್ರೀಯರ ಕಾಲುಗಳಿಗೆ ಕಟ್ಟುತ್ತಿದ್ದರಲ್ಲದೆ ಸ್ತ್ರೀಯರು ಬೆಳಕಿಲ್ಲದ ಗಣಿಗಳಲ್ಲಿ ಮೇಣದ ದೀಪಗಳನ್ನು ಬಾಯಲ್ಲಿ ಹಿಡಿದು ಅಥವಾ ತಲೆಯ ಮೇಲೆ ಇರಿಸಿಕೊಂಡು ಹತ್ತು-ಹನ್ನೆರಡು ಘಂಟೆಗಳ ಕಾಲ ಕೆಲಸಮಾಡುತ್ತಾ ಭಾರವಾದ ಕಲ್ಲಿದ್ದಲ ಗಾಡಿಗಳನ್ನು ಎಳೆಯಬೇಕಾಗಿದ್ದಿತು. ಇದರಿಂದ ಸ್ತ್ರೀ-ಪುರುಷರ ನಡುವೆ ಕೆಲಸದ ಸಂಬಂಧದಲ್ಲಿ ಯಾವ ವ್ಯತ್ಯಾಸವೂ ಇರಲಿಲ್ಲವೆಂಬುದು ವ್ಯಕ್ತವಾಗುತ್ತದೆ.[1]

ದುಡಿಮೆಯ ಸಾಮರ್ಥ್ಯ ಏನೇ ಆಗಿರಲಿ ಸ್ತ್ರೀ–ಪುರುಷರ ಅಂಗರಚನೆಯ ಬಗ್ಗೆ ಕಂಡುಬರುವ ವ್ಯತ್ಯಾಸಗಳಿವು : ಸಾಮಾನ್ಯ ಪುರುಷ ಸಾಮಾನ್ಯ ಸ್ತ್ರೀಯೊಬ್ಬಳಿಗಿಂತ ಬಲಶಾಲಿಯಾಗಿರುತ್ತಾನೆ. ಸ್ತ್ರೀಯಲ್ಲಿ ಕಾಣದಿರುವ ಹೆಚ್ಚಿನ ಸ್ನಾಯುಸಾಮರ್ಥ್ಯ ಮತ್ತು ಬಲವನ್ನು ಪುರುಷ ಹೊಂದಿರುತ್ತಾನೆ. ಸ್ತ್ರೀಯ ಚೊಕ್ಕವಾದ ಸ್ನಾಯು ರಚನೆಯು ಅವಳನ್ನು ಸೂಕ್ಷ್ಮಳನ್ನಾಗಿಸಿದೆ. ಪುರುಷರಷ್ಟೆ ಕೆಲಸಮಾಡುವಷ್ಟು ಶಕ್ತಿಯುತರಾದ ಸ್ತ್ರೀಯರು ಇರಬಹುದು ; ಆದರೆ ಕಠಿಣ ಜೀವನ ಮತ್ತು ದುಡಿಮೆ ಸ್ತ್ರೀಯ ಬೆಳವಣಿಗೆಯನ್ನು ಮೊಟಕುಮಾಡುತ್ತವೆ.

ಚಾರಿತ್ರಿಕ ಹಿನ್ನೆಲೆಯಲ್ಲಿ ಸ್ತ್ರೀಯನ್ನು ಪರಿಗಣಿಸಿದರೆ, ಪ್ರಾಚೀನ ಕಾಲ ದಿಂದಲೂ ಆಕೆ ಮನೆಯೊಡತಿಯಾಗಿ, ಅಡಿಗೆ ಮತ್ತು ಮನೆಗೆಲಸಗಳನ್ನು ಮಾಡಿ ಕೊಂಡು, ಮಕ್ಕಳನ್ನು ಪೋಷಿಸುತ್ತಿದ್ದುದು ಕಾಣಬರುತ್ತದೆ. ಕುಟುಂಬಕ್ಕೆ ಸಂಬಂಧಿ ಸಿದ ಉಳಿದ ವ್ಯವಹಾರಗಳನ್ನೆಲ್ಲಾ ಪುರುಷರೆ ನೋಡಿಕೊಳ್ಳುತ್ತಿದ್ದರು. ಗೃಹಕೃತ್ಯ ದಲ್ಲಿ ಸ್ತ್ರೀಗೆ ಸಹಜವಾದ ಆಸಕ್ತಿಯಿರುವುದರಿಂದ ಆಕೆಯೆ ಆಹಾರ ಧಾನ್ಯಗಳನ್ನು ಬೆಳೆಯಲು ಉಪಕ್ರಮಿಸಿ ಬೇಸಾಯಕ್ಕೆ ತಳಹದಿ ಹಾಕಿದಳೆಂದು ಹೇಳಬಹುದಾಗಿದೆ.[೨] ವ್ಯವಸಾಯ ಮುಂದುವರೆದಂತೆ ಪುರುಷನು ಸ್ತ್ರೀಯ ಸಹಾಯಕ್ಕೆ ಬಂದು, ಕಾಲಕ್ರಮ ದಲ್ಲಿ ಈ ವೃತ್ತಿ ಪುರುಷನ ಕಸಬಾಗಿ ಮಾರ್ಪಟ್ಟಿರಬೇಕು. ಬೀಸುವಕಲ್ಲು, ಅಡುಗೆ ಮಾಡಲು ಬೇಕಾದ ಪಾತ್ರೆಗಳು ಮೊದಲಾದ ಬಳಕೆಯವಸ್ತುಗಳನ್ನು ಸ್ತ್ರೀಯೇ ಕಂಡುಹಿಡಿದಿರಬೇಕು. ಈ ಆಧಾರದಿಂದ ಸ್ತ್ರೀ–ಪುರುಷರ ಕರ್ತವ್ಯಗಳನ್ನು ಅವರ ದೈಹಿಕ ಹಾಗೂ ಮಾನಸಿಕ ರಚನೆಗನುಗುಣವಾಗಿ ಪ್ರಕೃತಿಯೇ ನಿರ್ಧರಿಸಿದೆ ಎಂದು ಹೇಳಬಹುದು : ಮಕ್ಕಳನ್ನು ಹೆತ್ತು ಪೋಷಿಸುವಂತಹ ಕಷ್ಟಕರ ಕೆಲಸದಿಂದಾಗಿ ಸ್ತ್ರೀ ತನ್ನ ಕಾರ್ಯಭಾರವನ್ನು ಗೃಹದ ವಾತಾವರಣಕ್ಕೆ ಸೀಮಿತಗೊಳಿಸಿಕೊಳ್ಳಬೇಕಾ ಯಿತು. ಆಹಾರಕ್ಕಾಗಿ ಪುರುಷನು ಹೊರಗೆ ಕೆಲಸಮಾಡಲಾರಂಭಿಸಿದನು. ಈ ರೀತಿ ಸ್ತ್ರೀ–ಪುರುಷರಲ್ಲಿ ಕಾರ್ಯವಿತರಣೆಯಾದ ನಂತರ, ಪುರುಷನ ಕೈವಶವಾದ ತನ್ನ ಕೆಲಸಗಳನ್ನು ಮತ್ತೆ ವಹಿಸಿಕೊಳ್ಳಲು ಸ್ತ್ರೀಗೆ ಸಾಧ್ಯವಾಗಲಿಲ್ಲ.

ಈ ವ್ಯವಸ್ಥೆ ಮುಂದುವರಿದು ಪುರುಷ ವ್ಯವಸಾಯದಲ್ಲಿ ನಿರತನಾಗಲು ಸ್ತ್ರೀಯು ಮನೆಗೆಲಸಗಳನ್ನು ನೋಡಿಕೊಳ್ಳುತ್ತ ತನ್ನ ವಿರಾಮಕಾಲದಲ್ಲಿ ನೂಲನ್ನು ತೆಗೆದು ಕೈಮಗ್ಗದಿಂದ ವಸ್ತ್ರಗಳನ್ನು ತಯಾರಿಸಲಾರಂಭಿಸಿದಳು. ಆಕೆ ದನಕರುಗಳನ್ನು ನೋಡಿಕೊಂಡು ಹೈನಗಿತ್ತಿಯಾದಳಲ್ಲದೆ, ಕುಟೀರ ಕೈಗಾರಿಕೆಯಲ್ಲಿ ತಾನು ಉತ್ಪಾದಿ ಸಿದ ಸರಕುಗಳನ್ನು ಮಾರಾಟಮಾಡಿ ಬಂದ ಹಣದಿಂದ ಮನೆಗೆ ಅವಶ್ಯ ವಸ್ತುಗಳನ್ನು ಕೊಂಡುಕೊಳ್ಳಲು ಪತಿಯ ಅಪ್ಪಣೆ ಪಡೆದುಕೊಂಡಳು. ಮಕ್ಕಳಿಗೆ ಓದು ಬರಹ ಕಲಿಸಿ, ಅವರಿಗೆ ಮಾರ್ಗದರ್ಶನ ನೀಡಿ ಜೀವನದ ಮೌಲ್ಯಗಳನ್ನು ತಿಳಿಸಿ, ದೇಶ ಭಕ್ತಿಯ ಪಾಠಗಳನ್ನು ಕಲಿಸಲಾರಂಭಿಸಿದಳು. ಈ ಕಾರಣದಿಂದ, ಕಾಲಕ್ರಮದಲ್ಲಿ ಕುಟುಂಬದಲ್ಲಿ ಹೆಂಡತಿ ಮತ್ತು ಮಕ್ಕಳನ್ನು ಸಾಕುವ ಹೊಣೆ ಪುರುಷನದಾಯಿತು.

ಈ ಹಂತದಲ್ಲಿ ಕುಟುಂಬ ಸ್ವಯಂಪೂರ್ಣವಾಗಿದ್ದಿತು. ಕುಟುಂಬದ ಈ ವ್ಯವಸ್ಥೆ ಬಹುಕಾಲ ನಡೆದುಬಂದು ಆಧುನಿಕ ಕಾಲದ ಸ್ಥಿತಿಗತಿಗಳಿಗೆ ತಕ್ಕಂತೆ ಮಾರ್ಪಡಲಾರಂಭಿಸಿತು. ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ಪ್ರಾರಂಭವಾದ ಕೈಗಾರಿಕಾ ಕ್ರಾಂತಿಯ ಪರಿಣಾಮವಾಗಿ ಅನೇಕರು ತಮ್ಮ ವೃತ್ತಿಗಳನ್ನು ಬಿಟ್ಟು ಕಾರ್ಖಾನೆಗಳಲ್ಲಿ ಕೆಲಸಮಾಡಲು ಹೊರಟರು. ಇದರಿಂದ ಕುಟುಂಬದಲ್ಲಿ ಅನೇಕ ಬದಲಾವಣೆಗಳಾದವು. ಗೃಹದ ಸಮಸ್ತ ಕೆಲಸಗಳನ್ನೂ ನೋಡಿಕೊಳ್ಳುತ್ತ ತನ್ನ ಶ್ರಮದಿಂದಲೆ ಅದನ್ನು ಸುವ್ಯವಸ್ಥಿತವಾಗಿ ಇರಿಸಿದ್ದ ಸ್ತ್ರೀ, ತನ್ನ ಕುಟುಂಬ ಆರ್ಥಿಕವಾಗಿ ದುಸ್ಥಿತಿಗೀಡಾದ ಪ್ರಯುಕ್ತ ಅದರ ನಿರ್ವಹಣೆಗಾಗಿ ಕಾರ್ಖಾನೆಗಳಲ್ಲಿ ಯಾಂತ್ರಿಕವಾಗಿ ದುಡಿಯಬೇಕಾಯಿತು.

## ಕಾರ್ಖಾನೆಯಲ್ಲಿ ಸ್ತ್ರೀ

ಕೈಗಾರಿಕಾ ಕ್ರಾಂತಿಯಿಂದ ಪಾಶ್ಚಾತ್ಯ ದೇಶಗಳಲ್ಲಿ ಸ್ಥಾಪಿತವಾದ ಕಾರ್ಖಾನೆಗಳಲ್ಲಿ ಸ್ತ್ರೀಯರನ್ನು ನೇಮಿಸಿಕೊಂಡರೂ, ಅವರು ಪುರುಷರಿಗಿಂತ ಹೆಚ್ಚು ಕೆಲಸ ಮಾಡಲಾರರೆಂಬ ನೆಪದಿಂದ ಅವರಿಗೆ ಕಡಿಮೆ ವೇತನಗಳನ್ನು ಕೊಡುತ್ತಿದ್ದರು. ಕೈಗಾರಿಕಾ ಕ್ರಾಂತಿಯ ಮೊದಲ ದಿನಗಳಿಂದಲೂ ಈ ಭಾವನೆ ಮುಂದುವರೆದು ಬಂದಿದೆ. ಸ್ತ್ರೀಗೆ ಪುರುಷನಿಗೆ ಕೊಡುವಷ್ಟೇ ಕೂಲಿ ಕೊಡುವುದಾದರೆ ಅವಳಿಗಿಂತಲೂ ಹೆಚ್ಚು ಕೆಲಸಮಾಡುವ ಪುರುಷನನ್ನು ಕೆಲಸಕ್ಕೆ ತೆಗೆದುಕೊಳ್ಳಲು ಮಾಲೀಕರು ಇಚ್ಛಿಸುತ್ತಿದ್ದರು. ಇದರಿಂದಾಗಿ ಸ್ತ್ರೀ–ಪುರುಷರಲ್ಲಿ ಸ್ಪರ್ಧೆ ಅನಿವಾರ್ಯವಾಯಿತು. ಮಾಲಿಕ ತನ್ನ ಇಚ್ಛೆ ಮತ್ತು ನಿರ್ಧಾರದ ಮೇಲೆ ಸ್ತ್ರೀ–ಪುರುಷರನ್ನು ಕೆಲಸಕ್ಕೆ ತೆಗೆದುಕೊಳ್ಳಲು ಅನುಕೂಲವಾಯಿತು. ಕೆಲಸಕ್ಕಾಗಿ ಸ್ತ್ರೀ–ಪುರುಷರ ನಡುವಣ ಸ್ಪರ್ಧೆಯ ಫಲವಾಗಿ ಮಹಿಳಾ ಕಾರ್ಮಿಕರನ್ನೇ ಕಡಿಮೆ ಕೂಲಿಯ ದರಗಳಲ್ಲಿ ಕಾರ್ಖಾನೆಗಳಲ್ಲಿ ನೇಮಿಸಿಕೊಳ್ಳತೊಡಗಿದರು. ಮನೆಯ ಕೆಲಸವೇ ಒಂದೊಂದು ಬಾರಿ ನಿಸ್ತೇಜವೆಂದು ತಿಳಿಯುತ್ತಿದ್ದ ಸ್ತ್ರೀಯರಿಗೆ ಕಡಿಮೆ ವೇತನದ ಕಾರ್ಖಾನೆಯ ಕೆಲಸ ಮತ್ತಷ್ಟು ನಿಸ್ತೇಜಕವಾಗಿ ಕಂಡಿತು. ಸ್ಪರ್ಧಾತ್ಮಕವಾದ ಕಡಿಮೆ ವೇತನಗಳ ಫಲವಾಗಿ 1923ರಲ್ಲಿ ಲಂಡನ್ ನಗರದ ಕಾರ್ಮಿಕ ಮಹಿಳೆ ಒಂದು ಷಿಲಿಂಗ್ ವೇತನಕ್ಕೆ ಹತ್ತೊಂಬತ್ತು ಘಂಟೆಗಳ ಕಾಲ ಕೆಲಸಮಾಡುತ್ತಿದ್ದುದಲ್ಲದೆ, ನಿಲುವಂಗಿಗಳನ್ನು ಡಜನ್ ಒಂದಕ್ಕೆ ಏಳೂವರೆ ಷಿಲಿಂಗ್ ಕೂಲಿಯ ದರದಲ್ಲಿ ತಯಾರುಮಾಡುತ್ತಿದ್ದಳು.

ಕೈಗಾರಿಕೆಗಳಲ್ಲಿ ನಿರತರಾದ ಸ್ತ್ರೀ–ಪುರುಷರ ವೇತನಗಳ ಸಮಾನತೆಗೆ ಬಹಳ ಕಾಲದಿಂದಲೂ ಪ್ರಯತ್ನಗಳಾಗುತ್ತಿದ್ದುವು. ಕಾರ್ಮಿಕ ಇಲಾಖೆಯ, ಕೈಗಾರಿಕೆಗಳಲ್ಲಿ ನೇಮಕವಾದ ಮಹಿಳೆಯರಿಗೆ ಸಂಬಂಧಪಟ್ಟ ಮಂಡಲಿಯು ಮಾರ್ಚಿ 1919ರಲ್ಲಿ ಸ್ತ್ರೀಯರ ವೇತನಗಳನ್ನು ಹೆಚ್ಚಿಸಿ ಪುರುಷರ ವೇತನ ಮಟ್ಟಕ್ಕೆ ತರಲು ಕ್ರಮಗಳನ್ನು ಕೈಗೊಂಡಿತು. "ಪುರುಷರು ಮಾಡುವ ಕೆಲಸಗಳನ್ನು ಸ್ತ್ರೀಯರು ಮಾಡುತ್ತಿದ್ದರೆ,

ಅವರಿಗೆ ಸಮನಾದ ವೇತನ ದೊರೆಯಬೇಕಲ್ಲದೆ, ಪುರುಷರಿಗೆ ದೊರೆಯುವಷ್ಟೇ ನಿಯತ ಕಾಲಿಕ ವೇತನ ಹೆಚ್ಚಳವು (ಇನ್ಕ್ರಿಮೆಂಟ್) ಸ್ತ್ರೀಯರಿಗೂ ದೊರೆಯಬೇಕು"— ಎಂದು ಆ ಮಂಡಲಿಯು ಶಿಫಾರಸುಮಾಡಿತು.[3] ಸರ್ಕಾರದ ಪ್ರತಿಬಂಧಕಗಳಿಂದ ಕಾರ್ಖಾನೆಯ ಮಾಲಿಕರು ವೇತನವನ್ನು ಇಚ್ಛಾನುಸಾರ ನಿಗದಿಮಾಡುವಂತಿರಲಿಲ್ಲ. ಪುರುಷರ ಮತ್ತು ಸ್ತ್ರೀಯರ ಕೆಲಸಗಳನ್ನು ಹೋಲಿಸಿದಂತೆ ಪರಿಗಣಿಸಿದಾಗ ಮಾತ್ರ ಅವರ ವೇತನಗಳನ್ನು ನಿಷ್ಕರ್ಷೆ ಮಾಡಬಹುದಾಗಿತ್ತು. ಮಹಾಯುದ್ಧದ ನಂತರ, ಅಂದರೆ 1919ರ ತರುವಾಯ ಸ್ತ್ರೀಯರ ವೇತನಗಳ ಬಗ್ಗೆ ಅನೇಕ ಸುಧಾರಣೆಗಳಾ ದವು. ವೇತನವನ್ನು ಕೆಲಸದ ಸ್ವಭಾವದ ಮೇಲೆ ನಿಗದಿಮಾಡಬೇಕೆ ಹೊರತು ಅದನ್ನು ಸ್ತ್ರೀಯರು ಅಥವಾ ಪುರುಷರು ಮಾಡುವರೆಂಬ ಆಧಾರದ ಮೇಲೆ ನಿಗದಿ ಮಾಡಬಾರದೆಂದೂ, ಕೆಲಸಗಾರರ ಕನಿಷ್ಟ ವೇತನ ಜೀವನಮಟ್ಟಕ್ಕೆ ಅನುಸಾರವಾಗಿರ ಬೇಕೆಂದೂ ಕಾರ್ಮಿಕ ಮಂಡಲಿ ಶಿಫಾರಸುಮಾಡಿತು. ಇಂಥ ವೇತನ ವ್ಯವಸ್ಥೆ ರಷ್ಯಾ ದೇಶದಲ್ಲಿ ಮಾತ್ರ ಸಾಧ್ಯವಾಗಿದೆ. ವ್ಯಕ್ತಿ ತನಗೆ ಬೇಕಾದ ಕೆಲಸಗಳನ್ನು ಆರಿಸಿ ಕೊಳ್ಳುವ ಮತ್ತು ಕೆಲಸದ ಸಂಬಂಧವಾದ ಅಪಾಯಗಳಿಂದ ರಕ್ಷಣೆ ಹೊಂದುವ ಹಾಗೂ ಜೀವನ ಮಟ್ಟಕ್ಕೆ ಸರಿದೂಗುವಂಥ ಸಂಬಳ ಪಡೆಯುವ ಬಗ್ಗೆ ಅನೇಕ ದೇಶಗಳಲ್ಲಿ ಇನ್ನೂ ಸುಧಾರಣೆಗಳಾಗಬೇಕಾಗಿದೆ.

ಉದ್ಯೋಗನಿರತ ಮಹಿಳೆಯರ ಆರ್ಥಿಕ ಸಮಸ್ಯೆಗಳು ಎಷ್ಟೋ ಇವೆ : ಸಮಾಜದ ಹಿತದೃಷ್ಟಿಯಿಂದ ಸ್ತ್ರೀ ಹೆಚ್ಚಿನ ವೇತನಕ್ಕೆ ಅರ್ಹಳು. ಒಂದು ದೇಶದ ಜನಾಂಗ ಶಕ್ತಿಯುತವಾಗಿ, ಆರೋಗ್ಯದಿಂದ ಇರಬೇಕಾದರೆ, ತಾಯಂದಿರು ಸಹ ಆರೋಗ್ಯವಂತ ರಾಗಿರಬೇಕು. ಕಾರ್ಮಿಕ ಸ್ತ್ರೀಗೆ ಸರಿಯಾದ ವೇತನ ಕೊಡದಿದ್ದಲ್ಲಿ ಆಕೆಗೆ ಸಂಸಾರ ವನ್ನು ತೂಗಿಸಲು ಹಾಗೂ ಮಕ್ಕಳನ್ನು ಪೋಷಿಸಿ ಮುಂದೆ ತರಲು ಸಾಧ್ಯವಾಗುವುದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಉದ್ಯೋಗ ದೊರಕದೆ ಆರ್ಥಿಕ ಮುಗ್ಗಟ್ಟಿಗೊಳಗಾದ ಸ್ತ್ರೀ ಸಂಪಾದನೆಗಾಗಿ ತಪ್ಪುದಾರಿಯನ್ನು ಹುಡುಕುವುದು ಸಾಮಾನ್ಯ. ಸ್ತ್ರೀಯರು ಮುಟ್ಟಾದಾಗ ಹಾಗೂ ಗರ್ಭಿಣಿಯರಾದಾಗ ಅವರಿಗೆ ಹೆಚ್ಚಿನ ಖರ್ಚಿನ ಆವಶ್ಯಕತೆ ಇರುತ್ತದೆ. ಈ ಎಲ್ಲ ವಿಷಯಗಳ ದೃಷ್ಟಿಯಿಂದ ಸ್ತ್ರೀಗೆ ಆಕೆಯ ಅರ್ಹತೆಗಳಿಗೆ ತಕ್ಕಂತೆ ಉದ್ಯೋಗ ಮತ್ತು ವೇತನ ದೊರಕಿದರೆ ಆಕೆಯ ಗೃಹಜೀವನ ಮತ್ತು ಆರ್ಥಿಕ ಅಭ್ಯುದಯಕ್ಕೆ ನೆರವುನೀಡಿದಂತಾಗುತ್ತದೆ.

ಕಾರ್ಖಾನೆಗಳಲ್ಲಿ ಸ್ತ್ರೀಯರ ಉತ್ಪಾದನಾ ಸಾಮರ್ಥ್ಯವನ್ನು ಗಮನಿಸದೆ ಅವರ ಸಂಬಳವನ್ನು ಹೆಚ್ಚಿಸಿದ ಪಕ್ಷದಲ್ಲಿ, ದಕ್ಷತೆಯಿಂದ ಕೆಲಸಮಾಡುವವರಲ್ಲಿ ಉತ್ಸಾಹ ಕಡಿಮೆ ಆದೀತೆಂಬ ಭೀತಿ ಮಾಲೀಕರಲ್ಲಿ ಉದ್ಭವಿಸುತ್ತದೆ. ಕೆಲವು ಕೆಲಸಗಳು ಸುಲಭ ವಾದರೂ ಅವುಗಳ ನಿರ್ವಹಣೆಗೆ ದೇಹಬಲ ಬೇಕಾಗುತ್ತದೆ. ಅಂದರೆ ಶ್ರಮಕಾರ್ಯಕ್ಕೆ ಹೆಚ್ಚಿನ ವೇತನ ದೊರೆಯಬೇಕೆಂದಾಯಿತು. ಈ ದೃಷ್ಟಿಯಿಂದ, ಹೆಚ್ಚು ಶ್ರಮವಹಿಸಿ ಮಾಡಬೇಕಾದ ಕೆಲಸಗಳಿಗೆ ಅನರ್ಹಳಾದ ಸ್ತ್ರೀಗೆ ಹೆಚ್ಚಿನ ವೇತನ ಕೊಡುವುದು

ಯುಕ್ತವಲ್ಲವೆಂಬ ವಾದವಿದ್ದರೂ, ಕಡಿಮೆ ಶ್ರಮವಿದ್ದರೂ ಹೆಚ್ಚಿನ ಕೌಶಲ ಮತ್ತು ಬುದ್ಧಿವಂತಿಕೆಯ ಕೆಲಸಗಳಿಗೆ ಸ್ತ್ರೀಯರೇ ಅರ್ಹರೆಂಬುವನ್ನು ಪ್ರತಿಭಟಿಸುವುದು ಹೇಗೆ? ಪುರುಷನು ಮಾಡಬಹುದಾದ ಯಾವ ಕೆಲಸವನ್ನೇ ಆಗಲಿ ಸ್ತ್ರೀಯು ಸಹ ಮಾಡಲು ಸಮರ್ಥಳಾಗಿರುವಾಗ, ಅಂಥ ಕೆಲಸಗಳ ಬಗ್ಗೆ ಸ್ತ್ರೀಯರಿಗೂ ಸಮಾನ ವೇತನಗಳಿರ ಬೇಕು. ತಮಗೆ ಹಾನಿಯಾಗುವ ಕೆಲಸಗಳನ್ನು ಬಿಟ್ಟು ಮಿಕ್ಕೆಲ್ಲ ಕೆಲಸಗಳಲ್ಲೂ ಪುರುಷರೊಡನೆ ಕೆಲಸಮಾಡುವ ಹಕ್ಕು ಸ್ತ್ರೀಗೆ ಇರಬೇಕೆಂಬ ನಿಲವು ಹಲವು ದಶಕ ಗಳಿಂದಲೂ ಇದೆ.

ಸ್ತ್ರೀಯರ ಕೆಲಸವು ಅಗ್ಗವೆಂದು ತಿಳಿದ ಮಾಲಿಕರು ಸುಲಭ ಕೆಲಸಗಳಿಗೆ ಅವರನ್ನು ನೇಮಿಸಿಕೊಳ್ಳುತ್ತಾರೆ. ಸಾಧಾರಣವಾಗಿ ಸ್ತ್ರೀಯ ದುಡಿಮೆಯ ಶಕ್ತಿ ಕಡಿಮೆ. ಅದರಿಂದಾಗಿ ನೇಯುವುದು, ಬಣ್ಣಹಾಕುವುದು ಮುಂತಾದ ಕೆಲಸಗಳಿಗೆ ಸ್ತ್ರೀಯರನ್ನು ನೇಮಿಸಿಕೊಳ್ಳುವುದು ಪದ್ಧತಿಯಾಯಿತು. ಮುಖ್ಯ ವಿಷಯಗಳಲ್ಲಿ ಯುಕ್ತ ನಿರ್ಣಯಗಳನ್ನು ಕೈಗೊಳ್ಳಲು ಹಾಗೂ ಯೋಜನೆಗಳನ್ನು ರೂಪಿಸಲು ಸ್ತ್ರೀಯು ಶಕ್ತಳಲ್ಲವೆಂದು ಕಾರ್ಖಾನೆಯ ಆಡಳಿತ ಮಂಡಲಿಯಲ್ಲಿ ಹೆಂಗಸರನ್ನು ನೇಮಿಸಿಕೊಳ್ಳು ತ್ತಿರಲಿಲ್ಲ. ಈ ತೆರನ ನಂಬಿಕೆಗೆ ಸ್ತ್ರೀಯರ ಬಗ್ಗೆ ಪುರುಷರಲ್ಲಿದ್ದ ಕೀಳು ಅಭಿಪ್ರಾಯ ಕಾರಣವಾಗಿದ್ದಿತು.

ಇಂಗ್ಲೆಂಡಿನ ಚುಟ್ಟಾ ತಯಾರಿಸುವ ಕಾರ್ಖಾನೆಗಳಲ್ಲಿ 14ರಿಂದ 20ವರ್ಷ ವಯಸ್ಸಿನ ಸ್ತ್ರೀಯರು ಬೆಳಗಿನಿಂದ ಸಂಜೆಯವರೆವಿಗೆ ದುಡಿದು ಮನೆಗೆ ಸಂಪೂರ್ಣ ಆಯಾಸಗೊಂಡು ಹೋಗುತ್ತಿದ್ದರು. ಇದಕ್ಕಿಂತಲೂ ಭಯಾನಕವೆಂದರೆ, 6 ರಿಂದ 10 ವರುಷದ ಮಕ್ಕಳು ಹೊಗೆಸೊಪ್ಪಿನ ಎಲೆ ಕೀಳುವ ಕೆಲಸಕ್ಕೆ ನೇಮಕವಾಗು ತ್ತಿದ್ದರು. ಹೊಗೆಸೊಪ್ಪಿನ ಗಾಟಿನಿಂದ ಮಕ್ಕಳ ಆರೋಗ್ಯ ಕೆಡುತ್ತಿದ್ದಿತು. ಅಮೆರಿಕದ ಉಡುಪು ತಯಾರುಮಾಡುವ ಕಾರ್ಖಾನೆಗಳಲ್ಲಿ ಹೊಲಿಗೆ ಯಂತ್ರಗಳು ನಂಬಲಸಾಧ್ಯ ವಾದ ವೇಗದಲ್ಲಿ ಹೆಚ್ಚು ಉಡುಪುಗಳನ್ನು ತಯಾರಿಸುತ್ತವೆ; ಆ ಕಾರ್ಖಾನೆಗಳಲ್ಲಿ ತೀಕ್ಷ್ಣವಾದ ವಿದ್ಯುತ್‌ದ್ವೀಪಗಳ ಬೆಳಕು ಸ್ತ್ರೀಯರನ್ನು ಆಯಾಸಗೊಳಿಸಿ ಅವರಲ್ಲಿ ನರಗಳ ದೌರ್ಬಲ್ಯವನ್ನುಂಟುಮಾಡುತ್ತದೆ. ಎಷ್ಟು ಹೆಚ್ಚಾಗಿ ದುಡಿದರು ಸಹ ಈ ಕೆಲಸಗಳು ಜೀವನಕ್ಕೆ ಸಾಕಾಗುವಷ್ಟು ವೇತನವನ್ನು ಸಹ ತರುತ್ತಿರಲಿಲ್ಲ.[1] ಬುಟ್ಟಿ, ಚೀಲ ಮೊದಲಾದ ಸಣ್ಣ-ಪುಟ್ಟ ವಸ್ತುಗಳನ್ನು ತಯಾರಿಸುವ ಕಾರ್ಖಾನೆ ಗಳಲ್ಲಿಯೂ ಸ್ತ್ರೀಯರ ಸ್ಥಿತಿಗತಿಗಳು ಚಿಂತಾಜನಕವಾಗಿವೆ. ಆದರೂ ಸಹ, ಬಡ ಸ್ತ್ರೀಯರು ಉದ್ಯಮದ ಮಾಲಿಕನು ಕೊಡುವ ಒಂದೆರಡು ರೂಪಾಯಿಗಳ ದಿನಕೂಲಿ ಗಾಗಿ ದಿನವಿಡಿ ಕೆಲಸಮಾಡಬೇಕಾಗುತ್ತದೆ. ಇಂಥ ಹೊಟ್ಟೆಬಟ್ಟೆಗೂ ಸಾಲದ ವೇತನಕ್ಕಾಗಿ ಸ್ತ್ರೀಯು ಅತಿಯಾಗಿ ದುಡಿದು ತನ್ನ ಸೌಂದರ್ಯವನ್ನು ಮತ್ತು ಆರೋಗ್ಯವನ್ನು ನಾಶಪಡಿಸಿಕೊಳ್ಳುವುದಲ್ಲದೆ, ಅನೈಚ್ಛಿಕ ತಾಯ್ತನಗಳು[5] ಕಡಿಮೆ ವೇತನದ ಭೀಕರ ಪರಿಣಾಮಗಳಾಗಿವೆ.

ಭಾರವಾದ ಪದಾರ್ಥಗಳನ್ನು ಎತ್ತುವ ಕೆಲಸಗಳು ಸ್ತ್ರೀಯರಿಗೆ ಅಪಾಯಕರ. ಅಂಥ ವಸ್ತುಗಳನ್ನು ಚಲಿಸಬೇಕಾದ ಕಾರ್ಖಾನೆಗಳಲ್ಲಿ ಕೆಲಸಮಾಡುವ ಸ್ತ್ರೀಯರ ಮಕ್ಕಳು ವಿವಿಧ ರೋಗಗಳಿಂದ ನರಳುವುದು ಅಂಕಿ–ಅಂಶಗಳ ಸಂಗ್ರಹಣೆಯಿಂದ ತಿಳಿದುಬಂದಿದೆ. ಉಣ್ಣೆ ಮತ್ತು ಬಟ್ಟೆ ಕಾರ್ಖಾನೆಗಳಲ್ಲಿ ಕೆಲಸಮಾಡುವ ಸ್ತ್ರೀಯರ ಆರೋಗ್ಯವು ಅಷ್ಟು ಹೆಚ್ಚಾಗಿ ಕೆಡದಿದ್ದರೂ ಅವರಿಗೆ ಜನಿಸುವ ಮಕ್ಕಳು ದೇಹ ದೌರ್ಬಲ್ಯಕ್ಕೆ ಇಲ್ಲವೆ ಅಂಗವಿಕಲತೆಗೆ ತುತ್ತಾಗಿರುವುದು ಕಂಡುಬಂದಿದೆ. "ಸಿಲೆಷಿಯಾ ದೇಶದಲ್ಲಿನ ಗಾಜಿನ ಕಾರ್ಖಾನೆಗಳಲ್ಲಿ ಚಿಕ್ಕ ಮಕ್ಕಳನ್ನೂ ಮತ್ತು ಯುವತಿಯರನ್ನೂ ಕೆಲಸಕ್ಕೆ ನೇಮಿಸಿಕೊಳ್ಳುತ್ತಾರೆ. ಗಾಜಿನ ಕಾರ್ಖಾನೆಗಳಲ್ಲಿ ಕೆಲಸಮಾಡುವ ಸ್ತ್ರೀಯರು ತಮ್ಮ ಕೆಲಸದ ಸ್ವಭಾವದಿಂದ ಪ್ರಸವಕಾಲದಲ್ಲಿ ಅನುಭವಿಸುವ ನೋವು ಅಸಾಧ್ಯವಾಗಿರುತ್ತದೆ. ಪ್ರಸವಶಾಸ್ತ್ರದ ಅಧ್ಯಯನಕ್ಕೆ ಸಂದರ್ಭಗಳು ಎಷ್ಟು ಅನುಕೂಲವೆಂದರೆ, ಪ್ರಸವ ಶಾಸ್ತ್ರಜ್ಞರು ಸಿಲೆಷಿಯಾಕ್ಕೆ ಯಾತ್ರಿಕರಂತೆ ಹೋಗುವುದೂ ಉಂಟು" ಎಂದು ಇಲೆನ್ ಕೇ ಅವರು ತಿಳಿಸಿದ್ದಾರೆ.

ಕಾರ್ಖಾನೆಗಳಲ್ಲಿ ಸ್ತ್ರೀಯರನ್ನು ಕೆಲಸಕ್ಕೆ ನೇಮಿಸುವುದು ಅವರ ಕುಟುಂಬ ಜೀವನದ ಮೇಲೆ ಬಹಳ ಉಗ್ರಪರಿಣಾಮವನ್ನುಂಟುಮಾಡುತ್ತದೆ. ಕಾರ್ಖಾನೆಯಲ್ಲಿ ದಿನವಿಡಿ ಕೆಲಸದಲ್ಲೆ ನಿರತಳಾದ ಸ್ತ್ರೀ ಮಕ್ಕಳ ಲಾಲನೆ-ಪೋಷಣೆಗೆ ಸಮಯ ಪಡೆಯುವುದು ಬಹು ದುರ್ಲಭ. ಕೆಲಸದ ವೇಳೆಯಲ್ಲಿ ತೊಂದರೆ ಮಾಡದಿರಲೆಂದು ಹಲವು ತಾಯಂದಿರು ಮಕ್ಕಳಿಗೆ ಅಫೀಮು ಉಣಿಸುವುದೂ ಉಂಟು. ಕೆಲಸದ ವೇಳೆಯಲ್ಲಿ ಮಕ್ಕಳಿಗೆ ಹಾಲು ಉಣಿಸಲು ವೇಳೆ ದೊರೆಯುವುದು ಸಹ ದುರ್ಲಭ. ಉದ್ಯೋಗನಿರತ ಮಹಿಳೆಗೆ ತನ್ನ ಸಂಸಾರವನ್ನು ಗಮನಿಸಲು ಸಮಯ ಸಿಗದಂತಾಗಿ ಅದರಿಂದ ದುಷ್ಪರಿಣಾಮಗಳು ಆಗುತ್ತವೆ. ದಿನವಿಡಿ ಕೆಲಸದಲ್ಲಿ ನಿರತಳಾದ ಸ್ತ್ರೀ ಗೃಹಕೃತ್ಯಗಳನ್ನು ಕಡೆಗಣಿಸುವಳೇ ಅಲ್ಲದೆ, ಸರಿಯಾದ ಗಮನವಿಲ್ಲದೆ ಆಕೆಯ ಮಕ್ಕಳು ಹಾದಿ ತಪ್ಪುವುದೂ ಉಂಟು.

ಒಟ್ಟಿನಲ್ಲಿ ಕಷ್ಟಕರವಾದ ಹಾಗೂ ಅನಾರೋಗ್ಯ ವಾತಾವರಣದಲ್ಲಿ ನಡೆಯುವ ಕಾರ್ಖಾನೆಯ ಅಥವಾ ಗಣಿಯ ಕೆಲಸಗಳಿಗೆ ಸ್ತ್ರೀಯರು ದೈಹಿಕವಾಗಿ ಹೊಂದಿಕೊಳ್ಳುವುದಿಲ್ಲ. ಯಂತ್ರಗಳ ಬಿಡಿಭಾಗಗಳ ಜೋಡಣೆ, ವಸ್ತುಗಳನ್ನು ಬಸ್ತ್ರ ಕಟ್ಟುವುದು (ಪ್ಯಾಕಿಂಗ್), ವಸ್ತುಗಳ ಉತ್ಪಾದನೆಯಲ್ಲಿ ಯಂತ್ರಗಳ ಉಸ್ತುವಾರಿ ಇಂಥ ಕೆಲಸಗಳು ಕಾರ್ಮಿಕ ಮಹಿಳೆಯರಿಗೆ ಸುಲಭವಾಗಿ ಹೊಂದಿಕೊಳ್ಳುತ್ತವೆ. ಬಟ್ಟೆ ಹೊಲಿಯುವುದು, ಸಣ್ಣಪುಟ್ಟ ವಸ್ತುಗಳನ್ನು ತಯಾರಿಸುವುದು ಮೊದಲಾದ ಗೃಹಕೈಗಾರಿಕೆಗಳಿಗೆ ಅವರು ತಮ್ಮ ಆಸಕ್ತಿ ಮತ್ತು ಸಮಯವನ್ನು ಉಪಯೋಗಿಸಿದರೆ ಸಾಕು.

## ಸ್ತ್ರೀಯರ ಉದ್ಯೋಗಗಳು

ಸಾರ್ವಜನಿಕ ಕಾರ್ಯಗಳಲ್ಲಿ ಭಾಗವಹಿಸಲು ಅರ್ಹರಾದ ಸ್ತ್ರೀಯರು ಯಾರು ಎಂಬ ವಿಷಯವನ್ನು ಪರಿಗಣಿಸುವುದು ಯುಕ್ತವಾಗಿದೆ. ಸಾಮಾನ್ಯವಾಗಿ ಮಕ್ಕಳನ್ನು ಹಡೆಯುವ ಹಂತವನ್ನು ಮೀರಿದ ಸ್ತ್ರೀಯರು ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗ ವಹಿಸಬಲ್ಲರು. ಇತರ ಮಹಿಳೆಯರು ತಮ್ಮ ತಾಯ್ತನ ಮತ್ತು ದೈಹಿಕ ರಚನೆಗೆ ಅಡ್ಡ ಬರದಿರುವ ಯಾವ ಕೆಲಸವನ್ನಾದರೂ ಆರಿಸಿಕೊಳ್ಳಬಹುದು. ಪತ್ರಿಕೋದ್ಯಮ, ಶಿಕ್ಷಣ, ವೈದ್ಯಕೀಯ, ಟೈಪ್‌ರೈಟಿಂಗ್, ಗ್ರಂಥರಚನೆ ಮೊದಲಾದ ಕೆಲಸಗಳು ಸ್ತ್ರೀಯರಿಗೆ ಅರ್ಹವಾದವು. ಸ್ತ್ರೀ ತನ್ನ ಹದಿನೆಂಟನೆ ವರುಷದವರೆವಿಗೆ ಜ್ಞಾನಾರ್ಜನೆಮಾಡಿ, ಹದಿನೆಂಟನೆಯ ವಯಸ್ಸಿನ ನಂತರ ವೈವಾಹಿಕ ಜೀವನವನ್ನು ಸಾಗಿಸಿ ಪ್ರಾಪಂಚಿಕ ವಿಷಯಗಳನ್ನು ಸೂಕ್ಷ್ಮವಾಗಿ ತಿಳಿದುಕೊಂಡರೆ ಸಾಕು. ಸ್ತ್ರೀಗೆ ಋತುಬಂಧವಾಗುವ ವಯಸ್ಸನ್ನು ಮುಟ್ಟುವ ಹೊತ್ತಿಗೆ ಆಕೆಯ ಮಕ್ಕಳು ಬೆಳೆದು ದೊಡ್ಡವರಾಗಿರುತ್ತಾರೆ. ಈ ಸಮಯದಲ್ಲಿ ಆಕೆಗೆ ಸಾರ್ವಜನಿಕ ಚಟುವಟಿಕೆಗಳಲ್ಲಿ ಭಾಗವಹಿಸಲು ಯಾವ ಅಡಚಣೆಯೂ ಇರುವುದಿಲ್ಲ.

ಸ್ತ್ರೀ ತನ್ನ ಯೌವನದಲ್ಲಿ ಸಮಾಜಸೇವೆಯ ಕಾರ್ಯಗಳಲ್ಲಿ ನಿರತಳಾಗಬಹುದು ಇಲ್ಲವೆ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸಿ ತನ್ನ ಬುದ್ಧಿ-ಸಾಮರ್ಥ್ಯಗಳಿಂದ ಹೆಸರುಗಳಿಸಬಹುದು. ಆದರೆ ಸಾರ್ವಜನಿಕ ಜೀವನದ ಅನಾನುಕೂಲಗಳನ್ನು ಆಕೆ ಎದುರಿಸಬೇಕಾಗುತ್ತದೆ. ಸಾರ್ವಜನಿಕ ಜೀವನಕ್ಕೆ ಪ್ರವೇಶಿಸಿದನಂತರ ಮನೆಯ ವ್ಯವಹಾರಗಳನ್ನು ಗಮನಿಸಲು ಕಾಲಾವಕಾಶ ಸಿಗದೆ ಆಕೆಗೆ ತನ್ನ ಮಕ್ಕಳೂ ಸಹ ಅಪರಿಚಿತರಂತಾಗುತ್ತಾರೆ. ಸ್ತ್ರೀಯ ಕೈವಾಡವಿಲ್ಲದೆ ಗೃಹದ ವಾತಾವರಣವೇ ಬದಲಾಗುವುದು. ಆಕೆಗೆ ಮಕ್ಕಳಲ್ಲಿ ಪ್ರೇಮ ಮತ್ತು ಸಂಸಾರದ ಬಗ್ಗೆ ಜವಾಬ್ದಾರಿಯ ಮನೋಭಾವ ಕ್ಷೀಣವಾಗುವ ಸಂಭವವೂ ಉಂಟು.

ಸ್ತ್ರೀಯರು ವೈದ್ಯವೃತ್ತಿಗೆ ಚೆನ್ನಾಗಿ ಹೊಂದಿಕೊಳ್ಳುತ್ತಾರೆ. ಅವರಲ್ಲಿ ಸಹಾನು ಭೂತಿ ಹೆಚ್ಚಾಗಿರುವ ಪ್ರಯುಕ್ತ ರೋಗಿಗಳನ್ನು ಶುಶ್ರೂಷೆ ಮಾಡುವುದರಲ್ಲಿ ನಿಪುಣ ರಾಗುತ್ತಾರೆ. ಈ ಕಾರಣದಿಂದಲೇ ಆಸ್ಪತ್ರೆಗಳಲ್ಲಿ ಸ್ತ್ರೀಯರನ್ನು ದಾಹಿಯರನ್ನಾಗಿ (ನರ್ಸುಗಳನ್ನಾಗಿ) ನೇಮಿಸಿಕೊಳ್ಳುತ್ತಾರೆ. ಅವರ ಸ್ವಲ್ಪ ಗಮನವೂ ಸಹ ರೋಗಿಯ ಮೇಲೆ ಹೆಚ್ಚಿನ ಪರಿಣಾಮ ಉಂಟುಮಾಡುತ್ತದೆ.

ಸ್ತ್ರೀಯರು ಆರೋಗ್ಯ ರಕ್ಷಣೆಯ ಅಧಿಕಾರಿಗಳಾಗಿ ಸಹ ಕೆಲಸಮಾಡಲು ಅರ್ಹ ರಾಗಿದ್ದಾರೆ. ಈ ಉದ್ಯೋಗದಲ್ಲಿ ಅವರಿಗೆ ದೈಹಿಕವಾಗಿ ಯಾವುದೇ ರೀತಿಯ ತ್ರಾಸವೂ ಉಂಟಾಗುವುದಿಲ್ಲ. 1892ರಲ್ಲಿ ಇಂಗ್ಲೆಂಡಿನಲ್ಲಿ ಮೊದಲಬಾರಿಗೆ ಸ್ತ್ರೀಯರನ್ನು ಕಾರ್ಖಾನೆ ಗಳನ್ನು ಹಾಗೂ ಉದ್ಯಮ ಸ್ಥಳಗಳನ್ನು ಶುಚಿಯಾಗಿಡುವ ಬಗ್ಗೆ ಮೇಲ್ವಿಚಾರಕರನ್ನಾಗಿ ನೇಮಿಸಲಾಯಿತು. ಈ ನೇಮಕಗಳು ಊಹೆಗೂ ಮೀರಿದ ಫಲಿತಾಂಶಗಳನ್ನು ನೀಡಿದವು. ಕಾರ್ಖಾನೆಗಳಲ್ಲಿ ಕೆಲಸಮಾಡುವ ಆರೋಗ್ಯಾಧಿಕಾರಿಣಿಗಳು ಕಾರ್ಮಿಕರ

ಮನೆಗಳಿಗೆ ಹೋಗಿ ಗರ್ಭಿಣಿ ಸ್ತ್ರೀಯರ ಆರೋಗ್ಯ ಮತ್ತು ಅವರ ಶುಶ್ರೂಷೆಯ ಬಗ್ಗೆ ಶಿಕ್ಷಣಕೊಟ್ಟು ಗಣಿಕೆಲಸದಿಂದ ಮತ್ತು ಅನಾರೋಗ್ಯಕರವಾದ ವಾತಾವರಣದಲ್ಲಿ ಕೆಲಸಮಾಡುವುದರಿಂದ ಬರುವ ಹಲವಾರು ಕಾಯಿಲೆಗಳ ಬಗ್ಗೆ ಸಹ ತಿಳುವಳಿಕೆ ಕೊಟ್ಟು ಪರಿಹಾರಕ್ರಮಗಳನ್ನು ಸೂಚಿಸುತ್ತಿದ್ದರು. ಸ್ತ್ರೀಯರು ಉಪಾಹಾರ ಗೃಹ ಮತ್ತು ಚಹಾ ಅಂಗಡಿಗಳಂಥ ಸಣ್ಣ ಉದ್ಯಮಗಳನ್ನು ಸಹ ನಡೆಸಬಹುದು.

ಸ್ತ್ರೀಯರು ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸಿ, ತಮ್ಮ ಪ್ರಗತಿಗಾಗಿ ಸ್ತ್ರೀ ಸಂಘಗಳನ್ನು ರಚಿಸಿಕೊಂಡಿದ್ದಾರೆ. ಅಮೆರಿಕೆಯಲ್ಲಿ ಸಮಾಜ ಸುಧಾರಣೆಗಾಗಿ ಸ್ತ್ರೀಯರು ಸಂಘಗಳನ್ನು ಏರ್ಪಡಿಸಿಕೊಂಡಿದ್ದಾರೆ. ಕೆಂಟುಕಿ ನಗರದಲ್ಲಿ ಸ್ತ್ರೀಯರು ನಗರದ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾರೆ. ಅಮೆರಿಕೆಯಲ್ಲಿ ಸ್ತ್ರೀಯರು ನಗರ ವ್ಯವಸ್ಥೆಯ ಕೆಲಸಗಳಲ್ಲಿ ಭಾಗವಹಿಸುವುದಲ್ಲದೆ ಚಲನಚಿತ್ರಗಳನ್ನು ಸಾರ್ವಜನಿಕ ಪ್ರದರ್ಶನಕ್ಕಾಗಿ ವಿಮರ್ಶಿಸಿ ಅನುಮೋದಿಸುವ 'ಸೆನ್ಸಾರ್' ಸಮಿತಿಗಳಲ್ಲಿಯೂ ಸದಸ್ಯೆಯರಾಗಿದ್ದಾರೆ. ಮಕ್ಕಳಲ್ಲಿ ಕ್ರಿಯಾತ್ಮಕ ಶಕ್ತಿಯನ್ನು ಹೆಚ್ಚಿಸಲು ಸ್ಪರ್ಧೆಗಳನ್ನು ನಡೆಸಿ ಬಹುಮಾನಗಳನ್ನು ವಿತರಣೆ ಮಾಡುತ್ತಾರೆ. ಸಮಾಜದ ಪುರೋವೃದ್ಧಿಗಾಗಿ ಹಾಗೂ ಮಕ್ಕಳ ಏಳಿಗೆಗಾಗಿ ಸ್ತ್ರೀ ಸಂಘಗಳು ದುಡಿಯುತ್ತಿವೆ.

## ಶಿಕ್ಷಣರಂಗದಲ್ಲಿ ಸ್ತ್ರೀ

ಇಂದು ವಿದ್ಯಾಭ್ಯಾಸದ ಆವಶ್ಯಕತೆ ಎಂದಿಗಿಂತ ಹೆಚ್ಚಾಗುತ್ತಿದೆ. ಸಮಾಜದ ಅನಕ್ಷರತೆ ಮತ್ತು ಅಜ್ಞಾನವನ್ನು ನೀಗಲು ಪ್ರಯತ್ನಗಳಾಗುತ್ತಿವೆ. ಯುವಕ ಜನಾಂಗದಲ್ಲಿ ಉತ್ತಮ ಚಿಂತನೆ ಮತ್ತು ಮಾನಸಿಕ ಬೆಳವಣಿಗೆಗೆ ಉತ್ತೇಜಕವಾದ ವಿದ್ಯಾಭ್ಯಾಸದ ಅವಶ್ಯಕತೆ ಇಂದು ಹೆಚ್ಚಾಗಿದೆಯೆಂದು ಖ್ಯಾತ ಶಿಕ್ಷಣತಜ್ಞರಾದ ವುಲ್‌ಸ್ಟೋನ್ ಕ್ರಾಫ್ ಹೇಳಿರುವುದನ್ನು ನಾವು ಸ್ಮರಿಸಿಕೊಳ್ಳಬಹುದಾಗಿದೆ. ಶಿಕ್ಷಣದಿಂದ ಸಮಾಜಕ್ಕೆ ಹೆಚ್ಚು ಉಪಯೋಗವಿದೆಯೆಂದು ಸಮಾಜ ಸುಧಾರಕರು ತಿಳಿಯುತ್ತಾರೆ. ಶಿಕ್ಷಣದಿಂದ ಜನತೆಯ ಜ್ಞಾನ ಹೆಚ್ಚಿ ವಿಶಾಲ ಮನೋಭಾವನೆಯುಂಟಾಗುತ್ತದೆ; ಸಮಾಜದಲ್ಲಿ ಸೌಹಾರ್ದ ಹೆಚ್ಚುತ್ತದೆ. ವಿದ್ಯೆಯಿಂದ ಸಮಾಜ ಘನವಾದ ಮಟ್ಟವನ್ನು ಮುಟ್ಟುವುದಲ್ಲದೆ ಜನ ಸುಸಂಸ್ಕೃತ ಜೀವನವನ್ನು ಸಾಗಿಸಲು ಸಾಧ್ಯವಾಗುತ್ತದೆ.

ಮನೆಯೇ ಒಮ್ಮೆ ಕಲಿಕೆಯ ಗೂಡಾಗಿತ್ತು. ಜೀವನದ ಎಲ್ಲ ಕ್ಷೇತ್ರಗಳಿಗೂ ಸಂಬಂಧಪಟ್ಟಂತೆ ತಾಯಿ ಮಕ್ಕಳಿಗೆ ಶಿಕ್ಷಣ ಕೊಡುತ್ತಿದ್ದಳು. ಇಂದು ಈ ಕೆಲಸವನ್ನು ಶಿಕ್ಷಕರು, ಪತ್ರಿಕೆಯ ಸಂಪಾದಕರು, ಗ್ರಂಥಪ್ರಕಾಶಕರು ಹಾಗೂ ಲೇಖಕರು ವಹಿಸಿದ್ದಾರೆ. ಮೊದಲಿದ್ದ ಕಲಿಕೆಯ ಉತ್ಸಾಹವನ್ನು ಯುವಕರು ಈಗಲೂ ತೋರಿಸುತ್ತಿದ್ದಾರೆ. ಬುದ್ಧಿವಂತಿಕೆಯಲ್ಲಿ ಬಾಲಿಕೆಯರು ಹಿಂದೆ ಉಳಿದಿಲ್ಲ. ಪ್ರಗತಿ ಪಥದಲ್ಲಿ ಸಾಗುತ್ತಿರುವ ಯಾವ ಸಮಾಜವೇ ಆಗಲಿ ತರುಣಿಯರನ್ನು ಕೇವಲ ಗೃಹಕೃತ್ಯಗಳಿಗೆ

ವಿನಾಸಲಿರಿಸಿ ಮೂಲೆಗೆ ತಳ್ಳಬಾರದು. ಸ್ತ್ರೀ ಮನೆಯೊಡತಿಯಾಗಿ ಮನೆಯಲ್ಲೆ ತನ್ನ ಕಾಲವನ್ನು ಕಳೆಯಬೇಕೆಂಬ ಅಭಿಪ್ರಾಯವನ್ನು ದೂರಮಾಡಬೇಕು. ಸ್ತ್ರೀಯರಿಗೆ ವಿದ್ಯಾಭ್ಯಾಸ ಸಲ್ಲದೆಂಬ ವಾದ ತಪ್ಪು ಹಾಗೂ ಈ ಭಾವನೆ ಹಳೆಯ ಸಂಪ್ರದಾಯಕ್ಕೆ ಸೇರಿದ್ದು.

ಅಡಿಗೆಮಾಡುವುದು, ಬಟ್ಟೆಬರೆಗಳನ್ನು ಒಗೆದು ಶುಭ್ರಗೊಳಿಸುವುದು, ಮಕ್ಕಳನ್ನು ಪೋಷಿಸುವುದೇ ಮೊದಲಾದ ಕೆಲಸಗಳು ಹಿಂದೆ ಸ್ತ್ರೀಯರ ಕೆಲಸಗಳಾಗಿದ್ದುವು. ವಿಕ್ಟೋರಿಯಾ ಕಾಲದ ಗಂಡಂದಿರು ಸಮಾಜದಲ್ಲಾಗುವ ಬದಲಾವಣೆಗಳನ್ನು ಗೃಹಿಣಿಯರು ತಿಳಿಯಬೇಕಾದ ಆವಶ್ಯಕತೆಯಿಲ್ಲವೆಂದು ನಂಬಿದ್ದರು. ಪತಿ ಕೊಡುವ ರಕ್ಷಣೆ ಮತ್ತು ಮಾರ್ಗದರ್ಶನವನ್ನು ಒಪ್ಪುವುದು ನ್ಯಾಯ. ಆದರೆ, ಕಲಿತ ಹೆಣ್ಣು ತನ್ನ ಹಕ್ಕುಬಾಧ್ಯತೆಗಳನ್ನು ಸಾಧಿಸುವ ತನ್ನ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾಳೆ; ಹಳೆಯ ಕಂದಾಚಾರಗಳನ್ನು ಧಿಕ್ಕರಿಸಿದ್ದಾಳೆ.

ಸುಮಾರು ನೂರು ವರುಷಗಳ ಹಿಂದೆ ಸ್ತ್ರೀ ವಿದ್ಯಾಭ್ಯಾಸವು ಪ್ರಾರಂಭವಾಯಿತೆಂದು ಹೇಳಬಹುದು. ಮೊದಮೊದಲು ಸ್ತ್ರೀಯರನ್ನು ಅಕ್ಷರ ಕಲಿಯಲು ಸಹ ಬಿಡುತ್ತಿರಲಿಲ್ಲ. ಶಾಲಾ ಕಾಲೇಜುಗಳಲ್ಲಿ ಅವರಿಗೆ ಪ್ರವೇಶವಿರಲಿಲ್ಲ. ಸ್ತ್ರೀ ಈ ಅನ್ಯಾಯದ ಕಟ್ಟಳೆಯ ವಿರುದ್ಧ ಹೋರಾಡಿದಳಲ್ಲದೆ ಶಾಲಾ ಕಾಲೇಜುಗಳಲ್ಲಿ ಓದುವ ಅವಕಾಶವನ್ನು ಪಡೆದುಕೊಂಡಳು. ತನಗೆ ದೊರಕಬೇಕಾದ ಸ್ಥಾನಮಾನಗಳು ವಿದ್ಯಾಭ್ಯಾಸವಿಲ್ಲದೆ ದೊರಕಲಾರದೆಂಬ ವಿಷಯವನ್ನು ಆಕೆ ಮನಗಂಡಳು. ಶಿಕ್ಷಣ ಕ್ಷೇತ್ರವಲ್ಲಿ ಪುರುಷನಷ್ಟೆ ಸ್ತ್ರೀಯೂ ಶಕ್ತಳಾಗಿದ್ದಾಳೆ. ಅವಳಿಗೆ ಸಮಾನ ಹಕ್ಕು ಸಿಗಬೇಕಾದದ್ದು ಯುಕ್ತವಾಗಿದೆ. ದಾರ್ಶನಿಕ ಪ್ಲೇಟೊ ವಿದ್ಯಾಕ್ಷೇತ್ರದಲ್ಲಿ ಸ್ತ್ರೀ ಪುರುಷರೆಂಬ ಭಾವನೆ ಸಲ್ಲದೆಂದು ಹೇಳಿದ್ದಾನೆ. ಹೆಣ್ಣುನಾಯಿ ಮನೆಕಾಯುವುದರಲ್ಲಿ ಗಂಡುನಾಯಿಯಷ್ಟೆ ಆಸಕ್ತಿ ತೋರಿಸುವುದರಿಂದ ಹೆಣ್ಣುನಾಯಿಯ ಸೇವೆಯನ್ನು ಸಹ ಪಡೆದುಕೊಳ್ಳುವುದು ಯುಕ್ತವೆಂದು ವಾದಿಸಿ ಆತ ಸ್ತ್ರೀ ವಿದ್ಯಾಭ್ಯಾಸಕ್ಕೆ ಉತ್ತೇಜನ ಕೊಟ್ಟಿದ್ದಾನೆ.

ಸ್ತ್ರೀ–ಪುರುಷರಿಗೆ ಹಾಗೂ ಬಾಲಕ–ಬಾಲಿಕೆಯರಿಗೆ ಆಧುನಿಕ ಸಮಾಜಗಳಲ್ಲಿ ಒಂದೇ ವಿಧವಾದ ವಿದ್ಯಾಭ್ಯಾಸ ಕ್ರಮವನ್ನು ಏರ್ಪಡಿಸಲಾಗಿದೆ. ಆದರೆ ಸ್ತ್ರೀ ಪ್ರೌಢವಯಸ್ಸನ್ನು ಮುಟ್ಟಿದ ಮೇಲೆ ವ್ಯಾಸಂಗ ಮಾಡಬೇಕೆ–ಬೇಡವೆ ಎಂಬ ಬಗ್ಗೆ ಕೆಲವು ಅಭಿಪ್ರಾಯಗಳಿವೆ. ಅವು ಆಧುನಿಕ ಪರಿಸ್ಥಿತಿಗಳಿಗೆ ಎಷ್ಟರಮಟ್ಟಿಗೆ ಅನ್ವಯವಾಗುತ್ತವೆಯೊ ಹೇಳಲಾಗುವುದಿಲ್ಲ: "ಒಂದು ಕ್ಲುಪ್ತ ವಯಸ್ಸಿನ ನಂತರ ಸ್ತ್ರೀಗೆ ವಿದ್ಯೆ ಕಲಿಯಲು ಸಾಧ್ಯವಾಗುವುದಿಲ್ಲ. ತರುಣಿ ಪ್ರೌಢಾವಸ್ಥೆಗೆ ಬರುವವರೆವಿಗೂ ಆಕೆ ಬಾಲಕರಂತೆ ಶಿಕ್ಷಣ ಪಡೆಯಲು ಸಾಧ್ಯ. ಪ್ರೌಢಾವಸ್ಥೆಗೆ ಬಂದೊಡನೆ ಆಕೆಯ ದೇಹದಲ್ಲಿ ಹಲವಾರು ಮಾರ್ಪಾಡುಗಳಾಗುತ್ತವೆ. ರಜಸ್ವಲೆಯಾದಾಗ ಆಕೆಗೆ ವಿಶ್ರಾಂತಿ ಆವಶ್ಯಕ. ಆದರೆ ಆಧುನಿಕ ಶಿಕ್ಷಣ ಕ್ರಮದಲ್ಲಿ ಇದಕ್ಕೆ ಅವಕಾಶ ಮಾಡಿಕೊಟ್ಟಿಲ್ಲ.

ಶಿಕ್ಷಣ ಕ್ರಮದಲ್ಲಿ ಪರೀಕ್ಷಾ ಪದ್ಧತಿಯು ದೈಹಿಕವಾಗಿ ಸ್ತ್ರೀಯ ಮೇಲೆ ಪರಿಣಾಮ ಗಳನ್ನುಂಟುಮಾಡಿ ಅವಳನ್ನು ನಿಶ್ಯಕ್ತಳನ್ನಾಗಿ ಮಾಡುತ್ತದೆ" ಎಂದು ಶ್ರೀ ಆರ್ಕಿಬಾಲ್ಡ್ ಕೊಲ್ಘೂನ್ (Archibald Colguhon) ಹೇಳಿದ್ದಾರೆ. ಸ್ತ್ರೀಯರ ನರಗಳ ಮೇಲಿನ ಯಾವುದೇ ಒತ್ತಡವು ಆಕೆಯನ್ನು ಮಂಕಳನ್ನಾಗಿ ಮಾಡುತ್ತದೆ. ಆದುದ ರಿಂದ ಸ್ತ್ರೀಗೆ ಆಯಾಸವಾಗುವ ಯಾವ ವಿದ್ಯಾಕ್ರಮವೇ ಆಗಲಿ ಹಾನಿಕರ.

ಇಂಥ ಅಭಿಪ್ರಾಯಗಳಿರುವಾಗ ಸ್ತ್ರೀಯರಿಗೆ ಯಾವ ಬಗೆಯ ವಿದ್ಯಾಭ್ಯಾಸ ಸರಿಯೆಂಬುದನ್ನು ಪರೀಕ್ಷಿಸುವುದು ಯುಕ್ತವಾಗಿದೆ. ಜೀವನದ ಸಮಸ್ಯೆಗಳನ್ನು ಬಗೆ ಹರಿಸಲು ಸಹಾಯಕವಲ್ಲದ ಶಿಕ್ಷಣ ಯಾರಿಗೇ ಆಗಲಿ ಯೋಗ್ಯವಲ್ಲ. ಅಂತಹ ಶಿಕ್ಷಣ ನಿಜವಾದ ಶಿಕ್ಷಣವಲ್ಲ. ಗಂಡಸರ ಚಟುವಟಿಕೆಗಳಿಗೆ ಯೋಗ್ಯವಾದ ಶಿಕ್ಷಣ ವನ್ನು ಅನುಕರಿಸುವ ಸ್ತ್ರೀ ವಿದ್ಯಾಭ್ಯಾಸ ಆಕೆಯ ಜೀವಿತಕ್ಕೆ ಹೊಂದಿಕೊಳ್ಳುವುದಿಲ್ಲ. ಸ್ತ್ರೀಯ ಯಾಜಮಾನ್ಯಕ್ಕೆ ಒಳಪಟ್ಟ ಕುಟುಂಬಕ್ಕೆ ಹಾನಿಯಾಗದಂಥ ವಿದ್ಯಾಭ್ಯಾಸವೇ ಅವಳಿಗೆ ತಕ್ಕ ವಿದ್ಯಾಭ್ಯಾಸ. ಕುಟುಂಬ ಜೀವನವನ್ನು ಮರೆಸಿ, ತಾಯಿಯ ಕರ್ತವ್ಯ ಗಳನ್ನು ಅಲ್ಲಗಳೆಯುವಂತೆ ಮಾಡುವ ವಿದ್ಯಾಭ್ಯಾಸ ಆಕೆಗೆ ಹಿತವಲ್ಲ. ಸರಿಯಾದ ವಿದ್ಯಾಭ್ಯಾಸವು ಆಕೆಯಲ್ಲಿ ಕುಟುಂಬದ ಬಗ್ಗೆ ಆಸಕ್ತಿ ಹುಟ್ಟಿಸುತ್ತದೆ. ಸ್ತ್ರೀ ಮಾನವೀಯತೆಯ ಪ್ರತಿರೂಪ. ಆಕೆ ಮಕ್ಕಳಿಗೆ ಮಾನವೀಯ ಗುಣಗಳನ್ನು ಕಲಿಸುವ ಗುರು. ವಿದ್ಯಾಭ್ಯಾಸ ಕ್ರಮ ತನ್ನ ನಿಜವಾದ ಗುರಿಯನ್ನು ಸಾಧಿಸಬೇಕಾದರೆ ಅದು ಮಕ್ಕಳನ್ನು ಸಮಾಜದ ಸತ್ಪ್ರಜೆಗಳನ್ನಾಗಿ ಮಾಡುವ ಬಗ್ಗೆ ಸ್ತ್ರೀಯರಿಗೆ ಉಪಯುಕ್ತ ವಾದ ಶಿಕ್ಷಣ ಕೊಡಬೇಕು. ಆಕೆಯ ಮೂಲಕವೇ ವಿಪತ್ತುಗಳು ನಾಶವಾಗಿ ಕುಟುಂಬ ಜೀವನ ಸುಖಮಯವಾಗಬಲ್ಲದು. ಕಲೆಗೆ ಅವಳೆ ಸ್ಫೂರ್ತಿದಾಯಕಳಲ್ಲದೆ, ಸದ್ಗುಣ ಗಳ ನೆಲೆಯೂ ಅವಳೆ. ಒಳ್ಳೆಯ ವಿದ್ಯಾಭ್ಯಾಸ ಹೊಂದಿದ ಸ್ತ್ರೀ ಉತ್ಸಾಹ ಮತ್ತು ಅಭಿಮಾನಗಳನ್ನು ಎಲ್ಲಾ ದಿಕ್ಕಿಗೂ ಪ್ರಸರಿಸುತ್ತಾಳೆ. ಈ ಸದ್ಗುಣಗಳಿಗೆ ಅಡ್ಡ ಬರುವ ಯಾವುದೇ ಶಿಕ್ಷಣವು ಆಕೆಗೆ ಯುಕ್ತವಾದುದಲ್ಲ.

ಸ್ತ್ರೀ ಪಡೆಯುವ ಶಿಕ್ಷಣದಲ್ಲಿ ತಾಯ್ತನ, ಆರೋಗ್ಯ, ನೈರ್ಮಲ್ಯ ಮೊದಲಾದ ವಿಷಯಗಳು ಸೇರಿರಬೇಕು. ಇವುಗಳೆಲ್ಲವೂ ಗೃಹ ವಿಜ್ಞಾನಕ್ಕೆ ಸಂಬಂಧಪಟ್ಟ ವಿಷಯ ಗಳು. ಅವು ಸ್ತ್ರೀಯರಿಗೆ ಬಹು ಮುಖ್ಯವಾದುವು. ಈ ವಿಷಯಗಳೊಂದಿಗೆ ಆಕೆ ಪ್ರಪಂಚದಲ್ಲಿ ಜರುಗುವ ವಿಷಯಗಳನ್ನು ತಿಳಿಯುವುದು ಕೂಡ ಮುಖ್ಯ. ಸಾಹಿತ್ಯ ಜೀವಿತವನ್ನು ವಿಶಾಲ ದೃಷ್ಟಿಯಿಂದ ನೋಡಲು ಯುಕ್ತಸಾಧನವಾದ್ದರಿಂದ ಆಕೆಯಲ್ಲಿ ಸಾಹಿತ್ಯಾಭಿರುಚಿ ಸಹ ಬೆಳೆಯಬೇಕು. ಅವಳ ವ್ಯಕ್ತಿ ವಿಕಾಸಕ್ಕೆ ಮತ್ತು ರಸಜ್ಞತೆಗೆ ಲಲಿತಕಲೆಗಳಲ್ಲಿ ಒಂದಷ್ಟು ಪರಿಶ್ರಮವಿರಬೇಕು. ಅವುಗಳೊಂದಿಗೆ ಧಾರ್ಮಿಕ ಮತ್ತು ನೈತಿಕ ವಿಷಯಗಳ ಅರಿವು, ಮಿತಸಂತಾನ, ಗೃಹವ್ಯವಸ್ಥೆ ಮೊದಲಾದ ವಿಚಾರಗಳ ಬಗ್ಗೆ ತಿಳಿವಳಿಕೆ ಸಹ ಅವಳಿಗಿರಬೇಕು.

ಸ್ತ್ರೀ ಮುಂದಿನ ಜನಾಂಗದ ತಾಯಿ; ಆ ಜನಾಂಗದಲ್ಲಿ ಧರ್ಮವೆಂಬ ಪ್ರವಾಹ ವನ್ನು ಹರಿಸುವ ಮಾತೆ. ಅವಳ ಮಡಿಲಲ್ಲಿ ಕೂತು ಮಕ್ಕಳು ಪ್ರೀತಿಯಿಂದ ಪಾಠ ಕಲಿಯುತ್ತಾರೆ. ಅವರ ವ್ಯಕ್ತಿತ್ವವನ್ನು ರೂಪಿಸುವವಳು ಸಹ ಅವಳೆ. ತಾಯಿಯ ಪಾದಕಮಲಗಳಲ್ಲಿ ಸ್ವರ್ಗ ಅಡಗಿದೆ ಎಂದು ಪೈಗಂಬರ ಮಹಮದ್ ಹೇಳಿದ್ದಾನೆ. ಅವಳ ಮಕ್ಕಳಲ್ಲಿ ಅವಳ ಅನುಕಂಪ ಪ್ರತಿಬಿಂಬಿತವಾಗಿರುತ್ತದೆ. ಆದುದರಿಂದ ಸ್ತ್ರೀ ವಿದ್ಯಾಭ್ಯಾಸವು ಆಕೆಯು ವಹಿಸಬೇಕಾದ ಪಾತ್ರಕ್ಕೆ ಹೆಚ್ಚು ಉಪಯುಕ್ತವಾಗಬೇಕು.

ಅಡಿಗೆ ಮಾಡುವುದರಲ್ಲಿ, ಶುಚಿತ್ವದಲ್ಲಿ, ಬಟ್ಟೆ ಇಸ್ತ್ರೀ ಮಾಡುವುದರಲ್ಲಿ, ತೋಟ ಗಾರಿಕೆ, ಕೋಳಿ ಸಾಕಣೆ, ಜೇನು ಸಾಕಣೆ, ಹೊಲಿಗೆ ಕೆಲಸ ಇವೇ ಮುಂತಾದ ಕೆಲಸಗಳಲ್ಲಿ ತರುಣಿಯರಿಗೆ ಆಧುನಿಕ ರೀತಿಯಲ್ಲಿ ಮೊದಮೊದಲು ತರಪೇತು ನೀಡಲು ಜರ್ಮನಿ ದೇಶದಲ್ಲಿ ಪ್ರಯತ್ನಿಸಲಾಯಿತು. ಜಪಾನ್ ದೇಶದಲ್ಲಿಯೂ ಕೂಡ ಇಂಥ ವಿಧಾನಗಳನ್ನೇ ಅನುಸರಿಸಲಾಯಿತು. ಅಡಿಗೆಮಾಡುವುದು, ಮನೆ ತೊಳೆಯುವುದು, ಊಟದ ಮೇಜುಗಳ ಜೋಡಣೆ, ಕೊಠಡಿಯನ್ನು ಅಲಂಕರಿಸುವುದು ಮತ್ತು ಗೃಹದ ಆರ್ಥಿಕ ವ್ಯವಹಾರವನ್ನು ನೋಡಿಕೊಳ್ಳುವುದು ಇವು ಜಪಾನ್ ಗೃಹಣಿಯ ಮುಖ್ಯ ಕರ್ತವ್ಯಗಳು.

ಸ್ತ್ರೀಯರು ತಮಗೆ ವಿದಾಭ್ಯಾಸ ಆವಶ್ಯಕವೆಂದು ಅರಿತು ಶಾಲಾ ಕಾಲೇಜು ಗಳಿಗೆ ಅಧಿಕ ಸಂಖ್ಯೆಯಲ್ಲಿ ಸೇರಲಾರಂಭಿಸಿದರು. ಕೂಪನ್ ಹೇಗನ್ ವಿಶ್ವವಿದ್ಯಾ ಲಯವು 1875ರಲ್ಲಿ ಸ್ತ್ರೀಯರಿಗೆ ಶಿಕ್ಷಣಪಡೆಯಲು ಪ್ರವೇಶ ನೀಡಿತು. ಆಗ ಈ ಅವಕಾಶವನ್ನು ಉಪಯೋಗಿಸಿಕೊಳ್ಳಲು ಹೆಚ್ಚು ಮಹಿಳೆಯರು ಮುಂದೆ ಬರಲಿಲ್ಲ. ಇಂದು ಆ ವಿಶ್ವವಿದ್ಯಾನಿಲಯದ ಪರೀಕ್ಷೆಗಳಿಗೆ ಕೂರುವವರಲ್ಲಿ ಶೇಕಡ ನಲವತ್ತರಷ್ಟು ಹುಡುಗಿಯರಿದ್ದಾರೆ. 1934-35ನೇ ಶಿಕ್ಷಣ ಸಾಲಿನಲ್ಲಿ ಈ ವಿಶ್ವವಿದ್ಯಾಲಯದಲ್ಲಿನ 914 ಮಂದಿ ವಿದ್ಯಾರ್ಥಿನಿಯರಲ್ಲಿ 352 ಮಂದಿ ತತ್ತ್ವ ಶಾಸ್ತ್ರವನ್ನೂ, 259 ಮಂದಿ ವಿದ್ಯಾರ್ಥಿನಿಯರು ವೈದ್ಯಕೀಯ ಶಾಸ್ತ್ರವನ್ನೂ, 213 ಮಂದಿ ನ್ಯಾಯಶಾಸ್ತ್ರವನ್ನೂ 68 ಮಂದಿ ಪ್ರಾಕೃತ ವಿಜ್ಞಾನಗಳನ್ನೂ, 53ಮಂದಿ ರಾಜ್ಯಶಾಸ್ತ್ರವನ್ನೂ, 12 ಮಂದಿ ವಾಣಿಜ್ಯಶಾಸ್ತ್ರವನ್ನೂ, 36 ಮಂದಿ ಲಲಿತ ಕಲೆ ಮತ್ತು ಜೀವವಿಮಾ ಅಧ್ಯಯನ ವನ್ನೂ ಮತ್ತೆ 6 ಮಂದಿ ವೇದಾಂತವನ್ನೂ ಆರಿಸಿಕೊಂಡಿದ್ದರು. ಈ ಮೇಲಿನ ಅಂಕಿ ಅಂಶಗಳಿಂದ ಸ್ತ್ರೀಯರು ತಮ್ಮ ಭವಿಷ್ಯಕ್ಕೆ ಅನುಕೂಲವಾಗುವ ವಿದ್ಯೆಯನ್ನು ಆರಿಸಿ ಕೊಳ್ಳುವರೆಂಬುದು ವಿದಿತವಾಗುತ್ತದೆ. ಆದುದರಿಂದ ಸ್ತ್ರೀವಿಧ್ಯಾಭ್ಯಾಸವನ್ನು ಸಮಾಜಿಕ ಅವಶ್ಯಕತೆಗಳಿಗೆ ಅನುಗುಣವಾಗಿ ರೂಪಿಸಬೇಕು.

ಸಹವಿದ್ಯಾಭ್ಯಾಸವು ಸ್ತ್ರೀಪುರುಷರಲ್ಲಿ ಸ್ನೇಹ ಮತ್ತು ಅಭಿಮಾನಗಳನ್ನು ಮೂಡಿಸುತ್ತದೆ. ಅದರಿಂದ ಪರಸ್ಪರ ಗುಣಗಳ ಅಧ್ಯಯನಕ್ಕೆ ಮತ್ತು ತಿಳಿವಳಿಕೆಗೆ ಸಹಾಯವಾಗುತ್ತದೆ. ಎರಡೂ ವರ್ಗದ ಸದಸ್ಯರು ಪರಸ್ಪರ ಅಭಿಪ್ರಾಯ ವಿನಿಮಯ ದಿಂದ ಪ್ರಭಾವಿತರಾಗುತ್ತಾರೆ; ಸದ್ಭಾವನೆಯಿಂದ ವರ್ತಿಸುತ್ತಾರೆ.

ಸಹವಿದ್ಯಾಭ್ಯಾಸಕ್ಕೆ ಅಡ್ಡಿ-ಆತಂಕಗಳು ಇಲ್ಲದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಸಹವಿದ್ಯಾಭ್ಯಾಸದ ಅವಕಾಶದಿಂದ ವಿದ್ಯಾರ್ಥಿ ವಿದ್ಯಾರ್ಥಿನಿಯರು ತಮ್ಮ ಕಾಲವನ್ನು ಲೈಂಗಿಕ ಜೀವನದಲ್ಲೇ ಕಳೆಯುತ್ತಾರೆ. ಅಮೇರಿಕೆಯಲ್ಲಿನ ಸಹವಿದ್ಯಾಭ್ಯಾಸ ಕ್ರಮವು ದೊರಕಿಸುವ ಅವಕಾಶಗಳಿಂದ ಅಲ್ಲಿ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಮದುವೆಯ ಮೊದಲೆ ಲೈಂಗಿಕ ಸಂಪರ್ಕ ಹೊಂದಿರುತ್ತಾರೆಂದು ತಿಳಿದುಬರುತ್ತದೆ. ಮದುವೆಗೆ ಮೊದಲೆ ಲೈಂಗಿಕ ಸಂಬಂಧ ಧರ್ಮ ಬಾಹಿರವೆಂಬುದನ್ನು ಅಲ್ಲಿನ ಜನರು ಸಹ ತಿಳಿಯುತ್ತಾರೆ. ಸರಿಯಾದ ಮೇಲ್ವಿಚಾರಣೆಯಿಂದ ಶಾಲಾಕಾಲೇಜುಗಳಲ್ಲಿ ಈ ದುರ್ವ್ಯವಹಾರವನ್ನು ನಿಲ್ಲಿಸಬಹುದು. ಡೆನ್ಮಾರ್ಕ್ ದೇಶದಲ್ಲಿ ಹದಿನಾಲ್ಕನೆ ವರುಷದ ವರೆವಿಗೆ ಸಹವಿದ್ಯಾಭ್ಯಾಸವನ್ನು ಕಡ್ಡಾಯಕ್ರಮವನ್ನಾಗಿ ಮಾಡಿದ್ದಾರೆ. ಈ ವಯಸ್ಸಿನ ನಂತರ ಸರಿಯಾದ ಮೇಲ್ವಿಚಾರಣೆಯಲ್ಲಿ ನಡೆಯುವ ಶಾಲಾಕಾಲೇಜುಗಳಿಗೆ ಯುವತಿಯರು ಸೇರಬಹುದಾಗಿದೆ. ಭಾರತದಲ್ಲಿ ಸಹವಿದ್ಯಾಭ್ಯಾಸವು ನೀತಿಯುತ ವಾತಾವರಣದಲ್ಲಿ ಮುಂದುವರಿಯುತ್ತಿರುವುದಲ್ಲದೆ ಉತ್ತಮ ಫಲಿತಾಂಶಗಳನ್ನು ತಂದಿದೆ. ಹಾಗೇನಾದರೂ ವಿದ್ಯಾರ್ಥಿ ವಿದಾರ್ಥಿನಿಯರು ವಯೋಧರ್ಮದಿಂದ ಪರಸ್ಪರ ಆಕರ್ಷಿತರಾದರೂ ಅವರ ಪ್ರಣಯ ವಿವಾಹದಲ್ಲಿ ಕೊನೆಗಾಣುತ್ತದೆ.

ವಿದ್ಯಾಭ್ಯಾಸವು ವ್ಯಕ್ತಿಯಲ್ಲಿ ತಾಳ್ಮೆ, ಸಹೃದಯತೆ ಮತ್ತು ಆತ್ಮವಿಶ್ವಾಸವನ್ನು ತುಂಬುವುದಲ್ಲದೆ ನೆಮ್ಮದಿಯಿಂದ ಬಾಳಲು ಮಾರ್ಗದರ್ಶಕವೂ ಆಗಿದೆ. ಜೀವನದ ಸಂಕಷ್ಟಗಳನ್ನು ಧೈರ್ಯವಾಗಿ ಹಾಗೂ ವಿವೇಚನೆಯಿಂದ ಎದುರಿಸಲು ವಿದ್ಯಾವಂತ ಸ್ತ್ರೀಗೆ ಸಾಧ್ಯ.

## ರಾಜಕೀಯದಲ್ಲಿ ಸ್ತ್ರೀ

ಬಹಳ ಕಾಲದವರೆಗೂ ಸ್ತ್ರೀ ರಾಜಕೀಯ ರಂಗಕ್ಕೆ ಇಳಿದಿರಲಿಲ್ಲ. ಕಾಲಕ್ರಮದಲ್ಲಿ ಆಕೆ ವಿದ್ಯಾವಂತಳಾಗಿ, ಸಂಪಾದನೆ ಮಾಡಲಾರಂಭಿಸಿ, ಹಿಂದಿನ ಕಟ್ಟಳೆಗಳನ್ನು ಮುರಿದು ಪುರುಷನೊಡನೆ ಸಮಾನಳಾಗಿ ನಿಲ್ಲಲು ಸಮರ್ಥಳಾದಳು. ಹಿಂದೆ ಸ್ತ್ರೀಯ ಸ್ಥಾನ ಒಲೆಯ ಮುಂದೆ ಎಂಬುದು ಸಾಮಾನ್ಯ ಭಾವನೆಯಾಗಿತ್ತು. ಆದರೆ ಕೈಗಾರಿಕಾ ಕ್ರಾಂತಿಯು ಪುರುಷನೊಡನೆ ಸಮಾನ ಸ್ಥಾನವನ್ನು ಹೊಂದುವಂತೆ ಸ್ತ್ರೀಯನ್ನು ಬಡಿದೆಬ್ಬಿಸಿತು. ರಾಜಕೀಯ ಸಮಾನತೆ ಪಡೆಯಲು ಸ್ತ್ರೀಯರು ಸಂಸ್ಥೆಗಳನ್ನು ಸ್ಥಾಪಿಸಿದರು. ರಾಜಕೀಯ ಕೈದಿಗಳಿಗೆ ಶ್ರೀಮತಿ ಇಮಿಲಿ ಪಂಕಸ್ಟ್ ಮತ್ತು ಆಕೆಯ ಪುತ್ರಿಯರು ಸಲ್ಲಿಸಿದ ಸೇವೆ ಗಣನೀಯವಾದದ್ದು. ಅವರು ಗುಂಡಿನೇಟು ಮತ್ತು ಲಾಠಿ ಪ್ರಹಾರಗಳನ್ನು ಧೈರ್ಯದಿಂದ ಎದುರಿಸಿದರು. ಅಶ್ರುವಾಯುವಿನ ಅನುಭವ ಅವರಿಗೆ ಸಾಮಾನ್ಯವಾಗಿತ್ತು.

ರಾಜಕೀಯ ವಿಮೋಚನೆಗಾಗಿ ಸ್ತ್ರೀಯರು ಭಾಗವಹಿಸಿದ ಚಳುವಳಿಯಲ್ಲಿ ಆಸ್ತಿಪಾಸ್ತಿಗಳಿಗೆ ಉಂಟಾದ ನಷ್ಟ ಈ ರೀತಿ ಇದೆ. ಸೈಂಟ್‌ಪಾಲ್ ಕಾಲೇಜಿನ ಕಟ್ಟಡ

ಸುಟ್ಟಿದ್ದರಿಂದ ಆದ ನಷ್ಟ ಸುಮಾರು 10,000 ಪೌಂಡುಗಳು, ಅಬ್ರೆಚಿಲ್ ಕ್ಯಾಸಲ್ ಮತ್ತು ಸೈಂಟ್ ಫಿಲಿಯನ್ಸ್ ಕ್ಯಾಸಲ್‌ಗಳಿಗೆ ಉಂಟಾದ ನಷ್ಟ ಹಲವಾರು ಸಾವಿರ ಪೌಂಡ್ಸ್‌ಗಳು, ಪರ್ತ್ ನಗರದ ರೋಸಾಹೌಸ್‌ಗೆ ಉಂಟಾದ ನಷ್ಟ 5000 ಪೌಂಡು ಗಳು, ಸೊಮರ್‌ಸೆಟ್‌ನಲ್ಲಿ ಹಾಳುಮಾಡಿದ ರೆಡ್‌ಲಿಂಚ್ ಮನೆಯ ನಷ್ಟ 40,000 ಪೌಂಡ್‌ಗಳು. ಯಾರ್‌ಮಾಂಟ್ ಮತ್ತು ಬೆಲ್‌ಫಾಸ್ಟ್‌ಗಳಲ್ಲಿ ಉಂಟಾದ ನಷ್ಟ ಕ್ರಮವಾಗಿ 40,000 ಮತ್ತು 20,000 ಪೌಂಡ್‌ಗಳು. ಇಮಿಲಿ ಪಾಂಕರ್ಸ್ಟ್ ಅನುಸರಿಸುತ್ತಿದ್ದ ಮತ್ತೊಂದು ಕ್ರಮವೆಂದರೆ ಕಲಾಕೃತಿಗಳನ್ನು ವಿರೂಪಗೊಳಿಸಿ ನಾಶಮಾಡುವುದು. ಸಾರ್ವಜನಿಕ ಕಟ್ಟಡಗಳನ್ನು ಮುಚ್ಚುವವರೆವಿಗೂ ಅಲ್ಲಿದ್ದ ಕಲಾಕೃತಿಗಳನ್ನು ವಿರೂಪಗೊಳಿಸಲಾಗುತ್ತಿತ್ತು. ವೀನಸ್ ವಿಗ್ರಹವೊಂದನ್ನು ನಾಶ ಗೊಳಸಿದ್ದರಿಂದ ಸವಾರು 45,000 ಪೌಂಡ್‌ಗಳಷ್ಟು ನಷ್ಟವಾಯಿತೆಂದು ಅಂದಾಜು ಮಾಡಲಾಗಿತ್ತು. ಚಿತ್ರ ಶಾಲೆಗಳಲ್ಲಿನ ಕಲಾಕೃತಿಗಳನ್ನು ಸುಟ್ಟು ಭಸ್ಮಮಾಡ ಲಾಯಿತು. ಅನೇಕ ಮಹಿಳೆಯರು ನಿರಶನ ಸತ್ಯಾಗ್ರಹವನ್ನು ಹೂಡಿದರು. ಆದರೆ ಅವರನ್ನು ಒತ್ತಾಯದಿಂದ ಆಹಾರತೆಗೆದುಕೊಳ್ಳುವಂತೆ ಮಾಡಲಾಯಿತು. 1914 ರಲ್ಲಿ ಇಂಗ್ಲೆಂಡ್ ಜರ್ಮನಿಯ ಮೇಲೆ ಯುದ್ಧಹೂಡಿದಾಗ ಸ್ತ್ರೀಯರು ತಮ್ಮ ಪ್ರತಿಭಟನಾ ಕಾರ್ಯಕ್ರಮಗಳನ್ನು ನಿಲ್ಲಿಸಿದರು. ಸ್ತ್ರೀಯರ ಬೇಡಿಕೆಗಳನ್ನು ಈಡೇರಿಸದೆ ಪುರುಷರು ಇರುವಂತಿರಲಿಲ್ಲ. ಸ್ತ್ರೀಯರಿಗೆ ಮತಚಲಾಯಿಸುವ ಮತ್ತು ಶಾಸನಸಭೆ ಗಳಲ್ಲಿ ಭಾಗವಹಿಸುವ ಹಕ್ಕನ್ನು ಕೊಡಲಾಯಿತಲ್ಲದೆ ಮಿಲಿಟರಿ ಹಾಗೂ ಸರ್ಕಾರಿ ಹುದ್ದೆಗಳಿಗೆ ನೇಮಕವಾಗಲು ಸಹ ಅವಕಾಶಕಲ್ಪಿಸಲಾಯಿತು.

ಸ್ತ್ರೀ ರಾಜಕೀಯಕ್ಕೆ ಅನರ್ಹಳಲ್ಲದೆ ರಾಜಕೀಯವನ್ನು ಹಾಳುಮಾಡುವಳೆಂದು ವಾದಿಸುವವರು ಇದ್ದಾರೆ. ಪಾಶ್ಚಾತ್ಯರಲ್ಲಿ ಚುನಾವಣೆಗಳ ಸಂಬಂಧವಾದ ಪ್ರಚಾರ ಚಟುವಟಿಕೆಗಳು ವಿಚಿತ್ರವಾಗಿವೆ: "ಮತವನ್ನು ಕರ್ತವ್ಯಜ್ಞಾನದಿಂದ ಚಲಾಯಿಸಿ ದಾಗ ಉತ್ತಮ ಉಮೇದುವಾರರು ಮಾತ್ರ ಅಧಿಕಾರಕ್ಕೆ ಬರಲು ಸಾಧ್ಯವಾಗುತ್ತದೆ. ಸಾಧಾರಣವಾಗಿ ಚುನಾವಣೆಗಳು ನಡೆಯುವ ಕಡೆ ಅನೀತಿಗೆ ಅವಕಾಶವಿರುತ್ತದೆ. ಮತಗಳನ್ನು ಸುಳ್ಳು ವಾಗ್ದಾನಗಳ ಮೇಲೆ ಹಾಗೂ ಮೋಸದ ಭರವಸೆಯ ಮೇಲೆ ಚುನಾವಣೆಗೆ ನಿಲ್ಲುವ ಉಮೇದುವಾರರು ಪಡೆದುಕೊಳ್ಳುತ್ತಾರೆ. ಚುನಾವಣಾ ಸಮಯದಲ್ಲಿ ಚಾರ್ಲ್ಸ್ ಫಾಕ್ಸ್‌ನ (1749-1806) ಹಿತಾಸಕ್ತಿಯಿಂದ ಡ್ಯೂಕನ ಪತ್ನಿ ಸಾಮಾನ್ಯ ಕಟುಕನೋರ್ವನಿಂದ ಚುಂಬಿಸಿಕೊಳ್ಳಲು ಹೇಸದಿರುವಾಗ, ಚುನಾ ವಣೆಗೆ ಅಭ್ಯರ್ಥಿಯಾಗಿ ನಿಂತ ಸಾಮಾನ್ಯ ವ್ಯಕ್ತಿ ತನ್ನ ಹೆಂಡತಿ ಇಲ್ಲವೆ ಮಗಳನ್ನು ಮತದಾರರನ್ನು ನೋಟದಿಂದ ಆಕರ್ಷಿಸಲು ಕಳುಹಿಸಬಹುದು.[7] ಮಕ್ಕಳನ್ನು ಪಡೆಯಲಾಗದ ಮತ್ತು ಮಕ್ಕಳನ್ನು ಹೆರುವ ಹಂತವನ್ನು ಮುಗಿಸಿಕೊಂಡಿರುವ ಸ್ತ್ರೀಯರು ಮಾತ್ರ ರಾಜಕೀಯಕ್ಕೆ ಪ್ರವೇಶಿಸಲು ಅರ್ಹರೆಂದು ಈ ಸಂದರ್ಭದಲ್ಲಿ ಹೇಳಬಹುದಾಗಿದೆ.

ಸ್ತ್ರೀಯರ ಬಗ್ಗೆ ಮಾಡುವ ಆರೋಪಗಳು ಸತ್ಯಕ್ಕೆ ದೂರವಾದವು. ಸ್ತ್ರೀಯ ರಲ್ಲಿರುವ ಬುದ್ಧಿಶಕ್ತಿ ಮತ್ತು ವಿವೇಚನಾಶಕ್ತಿಯಿಂದ ಅವರು ರಾಜಕೀಯದಲ್ಲಿ ಭಾಗ ವಹಿಸಲು ಅರ್ಹರಾಗಿದ್ದಾರೆ. ಅವರಲ್ಲಿ ಕಂಡುಬರುವ ಮಾನವೀಯತೆ, ಅನುಕಂಪ ಮತ್ತು ಕ್ರಿಯಾಶಕ್ತಿ ಅವರನ್ನು ದಕ್ಷ ರಾಜಕೀಯ ಮುಖಂಡರನ್ನಾಗಿಯೂ ಮಾಡಿದೆ. ವಿಕ್ಟೋರಿಯಾ ರಾಣಿ, ಶ್ರೀಮತಿ ಇಂದಿರಾಗಾಂಧಿ ಮೊದಲಾದವರು ಇಡೀ ರಾಷ್ಟ್ರಗಳಲ್ಲಿ ಸ್ನೇಹಭಾವನೆ ಹಾಗೂ ಸಹೃದಯತೆಯನ್ನು ಮೂಡಿಸಿದ ವ್ಯಕ್ತಿಗಳೆಂಬುದು ಚಾರಿತ್ರಿಕವಾದ ಹಾಗೂ ಜನ ತಿಳಿದಿರುವ ವಿಷಯವಾಗಿದೆ. ಪ್ರಮುಖ ಅಧಿಕಾರ ಸ್ಥಾನಗಳಲ್ಲಿ ಸ್ತ್ರೀಯರಿರುವ ದೇಶಗಳೇ ಉತ್ತಮ ರಾಜ್ಯಾಡಳಿತವನ್ನು ಹೊಂದಿವೆ ಯೆಂದು ಹೇಳಬಹುದು. ದೇಶಕ್ಕಾಗಿ ಪ್ರಾಣತೆತ್ತ ಚಿತ್ತೂರಿನ ಪದ್ಮಿನಿ, ಝಾನ್ಸಿ ರಾಣಿ ಲಕ್ಷ್ಮೀಬಾಯಿ ಇವರಂಥ ಸ್ತ್ರೀಯರು ನಮ್ಮ ದೇಶದ ಹಿರಿಮೆಯನ್ನು ಎತ್ತಿ ಹಿಡಿದಿದ್ದಾರೆ.

## ಯುದ್ಧರಂಗದಲ್ಲಿ ಸ್ತ್ರೀ

ಇಂದು ಸಮಾಜದಲ್ಲಿ ಸ್ತ್ರೀ ಎಲ್ಲಾ ಕ್ಷೇತ್ರಗಳಲ್ಲಿ ಕೆಲಸಮಾಡುತ್ತಿದ್ದಾಳೆ. ಯೋಧಳಾಗಿ ಪುರುಷರಷ್ಟೇ ದಕ್ಷತೆಯಿಂದ ಯುದ್ಧಮಾಡಬಲ್ಲಳೆಂಬುದನ್ನು ಆಕೆ ತೋರಿಸಿಕೊಟ್ಟಿದ್ದಾಳೆ. ಯೋಧಳಾಗಿ ಧೈರ್ಯ ಸ್ಥೈರ್ಯಗಳನ್ನು ತೋರಿಸಿದವರಲ್ಲಿ ಜೋನ್ ಆಫ್ ಆರ್ಕ್ ಒಬ್ಬಳು. ಆಂಗ್ಲರನ್ನು ಎದುರಿಸಿ ದೇಶಕ್ಕಾಗಿ ಹೋರಾಡು ವಂತೆ ಫ್ರೆಂಚರಲ್ಲಿ ಹುರಿಪುಂಬಿಸಿದವಳೇ ಅವಳು. ಭಾರತದಲ್ಲೂ ಚಾಂದ್‌ಬೀಬಿ, ರೆಸಿಯಾ ಸುಲ್ತಾನ, ಝಾನ್ಸಿ ಲಕ್ಷ್ಮೀಬಾಯಿ ಮುಂತಾದವರು ಮುಖ್ಯರು. ಇಂಗ್ಲೆಂಡ್ ದೇಶದ ಫ್ಲಾರೆನ್ಸ್ ನೈಟಿಂಗೇಲ್ ಯುದ್ಧರಂಗದಲ್ಲಿ ಗಾಯಗೊಂಡ ಯೋಧರ ಸೇವೆ ಮಾಡಿ ಹೆಸರುವಾಸಿಯಾದವಳು. ಯುದ್ಧರಂಗದಲ್ಲಿ ಆಕೆಯ ವೈದ್ಯಕೀಯ ನೆರವು ಸ್ಮರಣಾರ್ಹ. ಕಳೆದ ಎರಡು ಮಹಾಯುದ್ಧಗಳಲ್ಲಿ—ಅಂದರೆ 1914–18ರ ಘೋರ ಯುದ್ಧ ಮತ್ತು 1939–45ರ ವಿಶ್ವಯುದ್ಧಗಳಲ್ಲಿ—ಸ್ತ್ರೀಯರ ಪಾತ್ರ ಮುಖ್ಯ ವಾದದ್ದು. ಭೂ ಮತ್ತು ಜಲ ಸೇನೆಗಳಲ್ಲಿ ಅವರು ಸೇವೆಸಲ್ಲಿಸಿದ್ದಾರೆ. ಶತ್ರುಗಳ ಮೇಲೆ ಬಾಂಬಿನ ಧಾಳಿಯನ್ನೂ ಮಾಡಿದ್ದಾರೆ. ಪ್ರಪಂಚದ ಎಲ್ಲ ದೇಶಗಳಲ್ಲೂ ಸ್ತ್ರೀಯರು ಯುದ್ಧಗಳಲ್ಲಿ ಭಾಗವಹಿಸಿರುವುದನ್ನು ನಾವು ಕಾಣಬಹುದು. ಅನೇಕ ರಾಷ್ಟ್ರಗಳಲ್ಲಿ ಯುದ್ಧಾನಂತರ ಸ್ತ್ರೀಯರು ಪುರುಷರಂತೆಯೇ ಎಲ್ಲ ಕ್ಷೇತ್ರಗಳಲ್ಲಿಯೂ ಕೆಲಸಮಾಡುತ್ತಾರೆ. ರಷ್ಯಾದಲ್ಲಿ ರೈಲು ಮತ್ತು ಮೋಟಾರು ಟ್ರಕ್ಕುಗಳನ್ನು ನಡೆಸುವುದರಿಂದ ಹಿಡಿದು ಸರ್ವಸಾಮಾನ್ಯವಾದ ಕೆಲಸಗಳಿಗೂ ಸ್ತ್ರೀಯರು ನೇಮಕ ವಾಗುತ್ತಿದ್ದಾರೆ.

ಆದರೆ, ಸ್ತ್ರೀ ಯುದ್ಧದಲ್ಲಿ ಭಾಗವಹಿಸಿ ಯೋಧಜೀವನ ನಡೆಸುವುದಾದರೆ ಮನೆ ಯಲ್ಲಿ ಮಕ್ಕಳು ತೊಂದರೆಗೀಡಾಗುತ್ತಾರೆ. ಗೃಹಜೀವನ ನಿರ್ಲಕ್ಷಗೊಳ್ಳುತ್ತದೆ.

ಅನಾದಿಕಾಲದಿಂದಲೂ ಸ್ತ್ರೀಯನ್ನು ಮಾನವ ಜನಾಂಗದ ಜನನಿ ಎಂದು ಕರೆಯ ಲಾಗುತ್ತಿದೆ. ಕಲೆಯ ಸ್ಫೂರ್ತಿದಾಯಿನಿ ಆಕೆ. ಮಾನವನ ಸದ್ಗುಣಗಳನ್ನು ಪೋಷಿಸಿ, ನೀತಿಯನ್ನು ಬೋಧಿಸುವವಳೂ ಅವಳೆ. ಸ್ತ್ರೀ ಸೈನಿಕಳಾದರೆ ಈ ಎಲ್ಲಾ ಸದ್ಗುಣಗಳು ಮಾಯವಾಗುವುವು. ಮಾನವಕುಲ ಅಭಿವೃದ್ಧಿ ಹೊಂದಬೇಕಾಗಿರುವಲ್ಲಿ ಆಕೆ ವಿನಾಶಕಾರಿಣಿಯ ಪಾತ್ರ ವಹಿಸಬಾರದು. ಶಕ್ತಿಸ್ವರೂಪಳಾದ ಆಕೆ ಸೃಷ್ಟಿಗೆ ಸಮರ್ಥಳೆ ಹೊರತು ಲಯಕ್ಕೆ ಯೋಗ್ಯಳಲ್ಲ.

ಪುರುಷನಿಗಿರುವಷ್ಟೆ ಸಾಮರ್ಥ್ಯ ಸ್ತ್ರೀಗೆ ಕೂಡ ಇದೆ; ಆಕೆ ಅವನಂತೆಯೆ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸಬಲ್ಲಳು ಎಂಬ ವಾದವನ್ನು ಜನ ಮುಂದಿಡಬಹುದು. ಪುರುಷನೆಸೆದ ಬಾಂಬೊಂದು ಹೇಗೆ ನಗರಗಳನ್ನು ಸುಡಬಹುದೋ, ಅದೇ ರೀತಿ ಸ್ತ್ರೀ ಎಸೆದ ಬಾಂಬುಗಳು ಕೂಡ ವಿನಾಶಕಾರಿಯಾಗಬಹುದು. ಪರಕೀಯರ ಧಾಳಿಯನ್ನು ಎದುರಿಸಲು ಯುದ್ಧರಂಗದಲ್ಲಿ ಸ್ತ್ರೀಯ ನೆರವು ಬೇಕೆಂದು ಹೇಳಬಹುದು. ಏನೇ ಆಗಲಿ, ಸ್ತ್ರೀ ಜೀವರಕ್ಷಕಳೆ ವಿನಃ ವಿನಾಶಕಾರಿಣಿಯಲ್ಲ.

ಸ್ತ್ರೀ ಇಲ್ಲದ ಕುಟುಂಬ ದೇವರಿಲ್ಲದ ಗುಡಿ ಇದ್ದಂತೆ. ಇಂದು ಸ್ತ್ರೀ ಎಲ್ಲಾ ಕ್ಷೇತ್ರಗಳಲ್ಲಿ ದುಡಿಯುತ್ತಿರುವುದರಿಂದ ಆಕೆಯ ಬಗ್ಗೆ ಆಕ್ಷೇಪಣೆಗಳು ಸಹಜವೆ. ಮಕ್ಕಳನ್ನು ಕಡೆಗಣಿಸಿದರೆ ಸಮಾಜದ ಮುಖ್ಯ ಹಾಗೂ ಪ್ರಬಲ ಸಂಸ್ಥೆಯಾದ 'ಕುಟುಂಬ' ಹಾಳಾಗುತ್ತದೆ. ಕುಟುಂಬದಲ್ಲಿ ತಂದೆ-ತಾಯಿಯರು ಮಧುರ ಸನ್ನಿವೇಶವನ್ನು ಕಲ್ಪಿಸದಿದ್ದರೆ ಮಕ್ಕಳು ದಾರಿತಪ್ಪುವುದೂ ಉಂಟು. ಆದರೂ ಇಂದು ಸ್ತ್ರೀ ಸಾರ್ವಜನಿಕ ಚಟುವಟಿಕೆಗಳಲ್ಲಿ ಇದ್ದೂ ಮನೆಯನ್ನು ರಕ್ಷಿಸಿದ್ದಾಳೆ. ಕಾರ್ಖಾನೆ ಮತ್ತು ಇನ್ನಿತರ ಉದ್ಯಮ ಸಂಸ್ಥೆಗಳಲ್ಲಿ ದುಡಿಯುವ ಮಹಿಳೆಯರಿಗಾಗಿ ಶಿಶುಕ್ಷೇಮ ಕೇಂದ್ರ, ಶಿಶುವಿಹಾರಗಳು, ಗರ್ಭಿಣಿ ಸ್ತ್ರೀಯರನ್ನು ನೋಡಿಕೊಳ್ಳುವ ಆಸ್ಪತ್ರೆಗಳು ಇವೇ ಮೊದಲಾದ ವ್ಯವಸ್ಥೆಗಳಾಗಿವೆ. ಹೆರಿಗೆಯ ಕಾಲದಲ್ಲಿ ವೇತನ ಸೌಲಭ್ಯವನ್ನೂ ಅವರಿಗೆ ದೊರಕಿಸಲಾಗಿದೆ. ಸ್ತ್ರೀಯರಿಗೆ ವಿರಾಮ ಕಳೆಯಲು ಮಹಿಳಾ ಸಂಘಗಳು ಏರ್ಪಟ್ಟಿವೆ.

ಉದ್ಯೋಗ ನಿರತ ಮಹಿಳೆಯ ಗೃಹ ಕೆಲಸಗಳ ಬಗ್ಗೆ ಹಲವಾರು ಅನುಕೂಲ ಗಳಿವೆ. ಸೇವಕ ಅಡಿಗೆ ಕೆಲಸಗಳನ್ನು ನೋಡಿಕೊಂಡರೆ ಬಟ್ಟೆಬರೆ ಒಗೆಯಲು ಲಾಂಡ್ರಿಗಳಿವೆ. ಹೊಲಿಗೆಯವನು ಅವಳ ಉಡುಪನ್ನು ಹೊಲಿದು ಸಿದ್ಧಪಡಿಸಿದರೆ, ಶೃಂಗಾರ ಸಾಧನಗಳನ್ನು ಮನೆ ಬಾಗಿಲಿಗೆ ತಂದುಕೊಡುವ ವ್ಯಾಪಾರಿಗಳಿದ್ದಾರೆ. ಆಧುನಿಕ ವಿಜ್ಞಾನ ಸ್ತ್ರೀಗೆ ಮೌಂಟ್ ಎವರೆಸ್ಟ್ ಶಿಖರವನ್ನು ಹತ್ತಲು ಇಲ್ಲವೆ ಅಟ್ಲಾಂಟಿಕ್ ಸಾಗರವನ್ನು ದಾಟಲು ಅಥವಾ ಬಾಹ್ಯಾಕಾಶದಲ್ಲಿ ಹಾರಲು ಸಾಧನ ಗಳನ್ನು ಒದಗಿಸಿಕೊಟ್ಟಿದೆ.

ಇತ್ತೀಚಿನವರೆಗೆ ಸ್ತ್ರೀಗೆ ಮೀಸಲಾದ ಅನೇಕ ಕರ್ತವ್ಯಗಳಿದ್ದವು. ಅವಳು ಗಾಣದ ಎತ್ತಿನಂತೆ ದುಡಿಯುತ್ತಿದ್ದಳು. ಆದರೆ ಇಂದು ಗೃಹಕೃತ್ಯದ ಬಹುಪಾಲನ್ನು

ಹೊರಗಿನ ಸಂಘಸಂಸ್ಥೆಗಳು ನೋಡಿಕೊಳ್ಳುತ್ತಿವೆ. ಇದರಿಂದಾಗಿ ಆಕೆಗೆ ತನ್ನ ಮಕ್ಕಳನ್ನು ನೋಡಿಕೊಳ್ಳಲು ಸಾಕಷ್ಟು ಸಮಯ ಹಾಗೂ ಅವಕಾಶವಿದೆ. ಹಿಂದಿನ ದಿನಗಳಿಗಿಂತ ಇಂದು ಕುಟುಂಬ ಜೀವನ ಸ್ಥಿರವಾಗಿದೆ. ಸ್ತ್ರೀ ಸಾರ್ವಜನಿಕ ಕಾರ್ಯಗಳಿಗೆ ಹೋಗುವುದರಿಂದ ಕುಟುಂಬಜೀವನಕ್ಕೆ ಅಡ್ಡಿಯೇನಿಲ್ಲವೆಂದು ಧಾರಾಳವಾಗಿ ಹೇಳಬಹುದು.

ಸಂದರ್ಭಸೂಚಿ :


1. *Women in the Comunity*: Gloerfelt Tarp, pp. 11–12, Oxford University Press, 1937.
2. *Op. Cit.*, Gloerfelt Tarp, p. 14.
3. *Encyclopaedia of Social Sciences*: vol. 15, p. 455, Article: "Women in Industry", Ed. by R. A. Saligman, Macmillan, NY. 1935.
4. *Op. Cit.*, A. R. Wadia, p. 75.
5. *Op. Cit.*, A. R. W., p. 76.
6. *Op. Cit.*, A. R. W.,p. 70.
7 *Op. Cit.*, A. R. W., pp 91–92.

## ಅಧ್ಯಾಯ ೬

# ಆಧುನಿಕ ಬದಲಾವಣೆಗಳು

ಕೈಗಾರಿಕೆ, ಸಮಾಚಾರ ವ್ಯವಸ್ಥೆ, ಸಂಪರ್ಕ ಸಾಧನಗಳು, ರಾಜಕೀಯ ಪ್ರಜ್ಞೆ ಇವುಗಳಿಂದಲೂ, ಆಚಾರ–ವ್ಯವಹಾರಗಳಲ್ಲಿ ಹಾಗೂ ಸಾಮಾಜಿಕ ಚಟುವಟಿಕೆಗಳಲ್ಲಿ ಆಗುತ್ತಿರುವ ಬದಲಾವಣೆಗಳಿಂದಲೂ ಜನಜೀವನದಲ್ಲಿ ಅನೇಕ ಮಾರ್ಪಾಟು ಗಳಾಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಈ ಮಾರ್ಪಾಟುಗಳಿಂದ ಸ್ತ್ರೀಯಲ್ಲಿದ್ದ ಪುರಾತನ ಮನೋಭಾವ ಮತ್ತು ಆಸೆ-ಆಂಕಾಕ್ಷೆಗಳಲ್ಲೂ ಹಲವಾರು ನವಕಲ್ಪನೆ ಗಳುಂಟಾಗಿರುವುದು ಸ್ವಾಗತಾರ್ಹವಾದದ್ದೆ. ನಮ್ಮ ದೇಶದಲ್ಲೂ ಸಹ ಸ್ತ್ರೀಯರು ಹೊರಬಂದು ಪುರುಷರ ಸಂಗಡ ಸಮನಾಗಿ ದುಡಿಯುವುದಲ್ಲದೆ, ಅವರ ನಡೆನುಡಿ ಗಳನ್ನೇ ಅನುಸರಿಸುತ್ತಿದ್ದಾರೆ. ವಿದ್ಯೆಯಲ್ಲಿ, ಉಡುಪಿನಲ್ಲಿ, ಉದ್ಯಮದಲ್ಲಿ, ರೀತಿ ನೀತಿಗಳಲ್ಲಿ ಗಂಡು–ಹೆಣ್ಣು ಎಂಬ ಭೇದವಿಲ್ಲದೆ ಸ್ತ್ರೀ-ಪುರುಷರು ಸಮಜೀವನವನ್ನು ನಡೆಸುತ್ತಿದ್ದಾರೆ.

ಭೂಗ್ರಹದ ಮೇಲೆ ಶ್ರಮಜೀವಿಗಳು ತುಂಬಿಕೊಂಡು, ವ್ಯವಸಾಯ ಹಾಗೂ ಪಶು ಸಂಗೋಪನೆಯ ವೃತ್ತಿಗಳಿಗೆ ಅನುಗುಣವಾದ ಜೀವನವನ್ನು ಸಾಗಿಸುತ್ತ ಗ್ರಾಮೀಣ ಸಮಾಜಗಳನ್ನು ರಚಿಸಿಕೊಂಡ ಹಂತದಿಂದ ಸಾಗಿದ ಮಾನವರು ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಕಾಣಿಸಿಕೊಂಡ ಲೌಕಿಕತೆ, ಆಸ್ತಿಯ ಮೋಹ, ಸಾಹಸ ಪ್ರವೃತ್ತಿ, ಜನಜಂಗುಳಿಯ ನಗರಗಳಲ್ಲಿ ವಾಸ ಮೊದಲಾದವುಗಳಿಂದ ಪ್ರಭಾವಿತರಾಗಿ ದ್ದಾರೆ. ಹಿಂದಿದ್ದ ಜಾತಿ ಮತ್ತು ವರ್ಗಗಳ ಪ್ರಜ್ಞೆ ಮಾಯವಾಗಿದೆ. ಗ್ರಾಮ ಪ್ರದೇಶಗಳಿಂದ ದೊಡ್ಡ ದೊಡ್ಡ ನಗರಗಳತ್ತ ಧಾವಿಸುವ ಮನೋವೃತ್ತಿ ಯಂತ್ರ ಯುಗದ ವೈಶಿಷ್ಟ್ಯವಾಗಿದೆ. ಸೇವಾ ದೃಷ್ಟಿಯಿಂದಲೂ ಧರ್ಮ ದೃಷ್ಟಿಯಿಂದಲೂ ಮಾಡುತ್ತಿದ್ದ ನಿಷ್ಕಾಮ ಕ್ರಿಯೆಗಳು ಇಂದು ಹಣಗಳಿಕೆಯ ದೃಷ್ಟಿಯಿಂದ ನಡೆಯು ತ್ತಿವೆ. ಯಾರ ಸೇವೆಯನ್ನೇ ಆಗಲಿ ಕೊಂಡುಕೊಳ್ಳಬಹುದಾದಷ್ಟು ಮಟ್ಟಿಗೆ ಸಮಾಜ ಬದಲಾವಣೆ ಹೊಂದಿದೆ. ಮಾನವಸೇವೆ ಇಂದು ವ್ಯಾಪರ ವಸ್ತುವಾಗಿದೆ. ಧಣಿ ಮತ್ತು ಸೇವಕನ ಸಂಬಂಧಗಳು ಮಾರ್ಪಟ್ಟವೆ. ಇಂದು ಮಾಲಿಕ ಮತ್ತು ಕೆಲಸಗಾರರ ನಡುವಣ ಸಂಬಂಧ ಸರ್ಕಾರದ ಕಾನೂನುಗಳಿಂದ ನಿರ್ಧರಿಸಲ್ಪಟ್ಟವೆ. ತಾಯಂದಿರಿಗೆ ಸಹಾಯ, ಕೆಲಸಗಾರರ ಕಾಯಿಲೆ ಅಥವಾ ಆರೋಗ್ಯ ಸಂಬಂಧವಾದ ವಿಮೆ, ವೃದ್ಧಾಪ್ಯವೇತನ, ಆಕಸ್ಮಿಕಗಳ ಬಗ್ಗೆ ಪರಿಹಾರ ಮುಂತಾದುವು ಕೂಡ ಸರಕಾರದ ಆಜ್ಞೆಗಳಿಂದ ವ್ಯವಸ್ಥೆಗೊಂಡಿವೆ. ಕೈಗಾರಿಕೆಗಳಲ್ಲಿಯ ಹೊಸ ವಿಧಾನ

ಗಳಿಂದ ತಜ್ಞರನ್ನು ನೇಮಿಸಿಕೊಳ್ಳಬೇಕಾಗಿದೆ. ಕೈಗಾರಿಕೆಗಳ ಕ್ರಾಂತಿಕಾರಕ ವ್ಯವಸ್ಥೆಗೆ ಮೊದಲು ಕೆಲಸಗಳನ್ನು ಸುಲಭವಾಗಿ ತಿಳಿದುಕೊಳ್ಳಬಹುದಾಗಿತ್ತು. ಆದರೆ ಪ್ರತಿಯೊಂದು ಆಧುನಿಕ ಕೈಗಾರಿಕೆಯಲ್ಲಿಯೂ ಅದರದೇ ಆದ ವೈವಿಧ್ಯವಿರುವುದಲ್ಲದೆ ಅದರ ಬಗ್ಗೆ ಹೆಚ್ಚು ಪರಿಜ್ಞಾನವಿರುವ ತಜ್ಞರಿಂದಲೆ ಅದು ನಡೆಯಬೇಕಾಗಿದೆ. ಹಿಂದಿನಂತೆ ಇಂದು ಸಮಾಜದ ವರ್ಗಗಳಿಗನುಗುಣವಾಗಿ ಉದ್ಯಮಗಳು ನಡೆಯುತ್ತಿಲ್ಲ. ಗಾಣಿಗ ವರ್ಗದವರು ಗಾಣವಾಡುವುದಿಲ್ಲ, ಚಿಪ್ಪಿಗ ವರ್ಗದವರು ಬಟ್ಟೆ ಹೊಲೆಯುವುದಿಲ್ಲ, ಕಮ್ಮಾರರು ಕಬ್ಬಿಣದಕೆಲಸ ಮಾಡುವುದಿಲ್ಲ. ಉದ್ಯಮಗಳು ಇಂದಿನ ದಿನ ತರಪೇತಿ ಹಾಗೂ ಶಿಕ್ಷಣದ ಆಧಾರದ ಮೇಲೆ ನಡೆಯುತ್ತಿವೆ. ಜನ ಒಂದು ಉದ್ಯೋಗವನ್ನು ಬಿಟ್ಟು ಮತ್ತೊಂದು ಉದ್ಯೋಗಕ್ಕೆ ಹೋಗಲು ಅವಕಾಶವಿರುವುದರಿಂದ ವರ್ಗ ಭಾವನೆ ಕಡಿಮೆಯಾಗುತ್ತಿದೆ. ತನ್ನ ಜೀವನವನ್ನು ವ್ಯಕ್ತಿ ತಾನೇ ಆರಿಸಿಕೊಳ್ಳುವುದರಿಂದ ಅವನ ಅಳಿವು-ಉಳಿವು ಅವನನ್ನೇ ಅವಲಂಬಿಸಿರುತ್ತದೆ. ತನ್ನ ವರ್ಗದ ಬಗ್ಗೆ ವ್ಯಕ್ತಿಗೆ ಯಾವುದೇ ಅಭಿಮಾನವಿದ್ದರೆ ಅದು ಅವನು ಆ ವರ್ಗದ ಸದಸ್ಯನಾಗಿರುವುದರಿಂದಲ್ಲದೆ ಆ ಅಭಿಮಾನದಲ್ಲಿ ನೈತಿಕ ಬಲವಾಗಲಿ, ಸೌಹಾರ್ದವಾಗಲಿ ಕಂಡು ಬರುವುದಿಲ್ಲ.

ಇದು ಸಮಾಜ ಚಿತ್ರದ ಒಂದು ಮುಖ ಮಾತ್ರ. ಇದರಲ್ಲಿ ಇನ್ನೊಂದು ಮುಖವೂ ಇದೆ: ಕಾಲ ಮತ್ತು ದೇಶಗಳ ಅಡ್ಡಿಯನ್ನು ದಾಟಿ ಒಂದು ದೇಶದ ಜನರು ಮತ್ತೊಂದು ದೇಶದ ಜನರೊಡನೆ ಹೊಂದಿರುವ ಸಂಪರ್ಕ. ರೈಲು ಮತ್ತು ಶಕ್ತಿ ಚಾಲಕ ಯಂತ್ರಗಳನ್ನು ಕಡುಹಿಡಿದ ನಂತರ ಭೂ ಮತ್ತು ಜಲ ಪ್ರಯಾಣ ಸುಖಕರವೂ ಹಾಗೂ ಸುಲಭವೂ ಆಗಿದೆ. ಭೋಗವಸ್ತುಗಳಿಗೆ ಅಂತರ ರಾಷ್ಟ್ರೀಯ ಮಾರುಕಟ್ಟೆ ಇರುವುದರಿಂದ, ವಿವಿಧ ದೇಶಗಳ ಜನರ ಪರಸ್ಪರ ವ್ಯಾಪಾರಸಂಪರ್ಕದೊಡನೆ ಸಾಂಸ್ಕೃತಿಕ ಸಂಬಂಧಗಳಿಗೂ ಅವಕಾಶವಾಗಿದೆ. ಇದರಿಂದಾಗಿ ಯಾವುದೇ ದೇಶಕ್ಕೆ ಅಥವಾ ಪ್ರಾಂತ್ಯಕ್ಕೆ ಸೀಮಿತವಾಗದೆ ನಾಗರಿಕತೆ ಮತ್ತು ಸಂಸ್ಕೃತಿ ಹರಡಿವೆ. ಧರ್ಮಕ್ಕನುಗುಣವಾದ ಸಂಸ್ಕೃತಿ ಮತ್ತು ಸಮಾಜಕ್ಕನುಗುಣವಾದ ನಾಗರಿಕತೆ ಎಲ್ಲೆಲ್ಲೂ ಕಾಣುತ್ತದೆ. ನಾಗರಿಕತೆಯ ಮಟ್ಟ ಪ್ರಾದೇಶಿಕತೆಯನ್ನು ಕಳೆದುಕೊಂಡು ವಿಶ್ವರೂಪಿಯಾಗಿದೆ. ಅಂತರರಾಷ್ಟ್ರೀಯ ಒತ್ತಡಕ್ಕೆ ರಾಷ್ಟ್ರೀಯತೆ ಮಣಿಯುತ್ತದೆ.[1] ಪ್ರಪಂಚದಲ್ಲಿ ನಾನಾ ಮತಗಳಿದ್ದರೂ ಸಹ ಮಾನವಕುಲವನ್ನು ಬಂಧಿಸುವ ಮೂಲಭೂತ ನೈತಿಕ ಆದರ್ಶಗಳು ಸಾಕಷ್ಟು ಪರಿಶುದ್ಧವಾಗಿವೆ. ಇದನ್ನು ಪ್ರಪಂಚದ ಎಲ್ಲಾ ಜನಾಂಗಗಳೂ ಒಪ್ಪಿಕೊಂಡಿವೆ. ಅಮೇರಿಕ, ರಷ್ಯ, ಯೂರೋಪ್ ಮತ್ತು ಏಷ್ಯಾ ದೇಶಗಳ ಮುನ್ನಡೆಯಿಂದ ಇಂದು ವಿಜ್ಞಾನ ಸಾರ್ವತ್ರಿಕವಾಗಿದೆ. ಅಮೇರಿಕದ ಅಪೋಲೊ–11ರ ಗಗನಯಾತ್ರಿಕರು ಮೊಟ್ಟ ಮೊದಲ ಬಾರಿಗೆ ಚಂದಗ್ರಹಕ್ಕೆ ಹೋಗಿ ತಂದ ಚಂದ್ರಲೋಕದ ಶಿಲೆಯ ಚೂರನ್ನು ಅಮೇರಿಕ ರಾಷ್ಟ್ರವೇ ವೈಜ್ಞಾನಿಕ ದೃಷ್ಟಿಯಿಂದ ವಿವಿಧ ದೇಶಗಳ ವಿಜ್ಞಾನಿಗಳಿಗೆ ಕಳುಹಿಸಿರುವುದು ಇದಕ್ಕೊಂದು

ನಿದರ್ಶನ. ವಿಜ್ಞಾನ ಮತ್ತು ಧರ್ಮದ ಬಗ್ಗೆ ಹೊಸ ದೃಷ್ಟಿ ಮಾನವ ಕುಲಕ್ಕೆ ನವ ಚೇತನವನ್ನು ತಂದು ವಿಶ್ವಧರ್ಮದತ್ತ ಮಾನವನನ್ನು ಸಾಗಿಸುತ್ತಿದೆ. ಧರ್ಮದ ಬಗ್ಗೆ ಹಳೆಯ ಭಾವನೆಗಳನ್ನು ತ್ಯಜಿಸಿ, ನರಕ-ಸ್ವರ್ಗದ ಕಲ್ಪನೆ ವಿಜ್ಞಾನಕ್ಕೆ ದೂರವೆಂದು ಪರಿಗಣಿಸಿ ಮಾನವನು ವಿಶ್ವಕ್ಕೆಲ್ಲ ಒಂದೇ ಸಮಾಜ, ಒಂದೇ ಸರಕಾರ ರಚಿಸುವ ತರಾತುರಿಯಲ್ಲಿದ್ದಾನೆ. ಈ ಸಮಾನ ಭಾವನೆಯನ್ನು ನಾವು ಪ್ರಜಾಪ್ರಭುತ್ವ ಸೂತ್ರಗಳಲ್ಲಿ ಕಾಣುತ್ತೇವೆ. ಅದನ್ನು ಆರ್ಥಿಕ, ಕೌಟುಂಬಿಕ ಮತ್ತು ಧಾರ್ಮಿಕ ಸಂಸ್ಥೆಗಳಲ್ಲೂ ನಾವು ಕಾಣುತ್ತೇವೆ. ಮನುಷ್ಯನ ವ್ಯಕ್ತಿತ್ವಕ್ಕೆ ಗೌರವ, ವಾಕ್‌ಸ್ವಾತಂತ್ರ್ಯ ಧರ್ಮಸ್ವಾತಂತ್ರ್ಯ ಮತ್ತು ಸಂಘಸ್ವಾತಂತ್ರ್ಯ; ವಿದ್ಯಾಭ್ಯಾಸ, ಕೆಲಸ, ವಿಶ್ರಾಂತಿ ಮತ್ತು ಆಸ್ತಿ ಇವುಗಳ ಸಂಬಂಧವಾದ ಹಕ್ಕು ಮತ್ತು ವ್ಯಕ್ತಿಸ್ವಾತಂತ್ರ್ಯ—ಇವುಗಳೆಲ್ಲವೂ ಅಗತ್ಯ. ವ್ಯಕ್ತಿಸ್ವಾತಂತ್ರ್ಯವೆಂದರೆ ಸ್ತ್ರೀಯ ಮೇಲೆ ಪುರುಷ ಪ್ರಭುತ್ವ ಸಾಧಿಸಬೇಕೆಂದಾಗಲಿ ಅಥವಾ ಪುರುಷನ ಮೇಲೆ ಸ್ತ್ರೀಯ ಅಧಿಕಾರವಿರಬೇಕೆಂದಾಗಲಿ ಆಗುವುದಿಲ್ಲ. ಜೀವಿತದ ಯಾವ ಕ್ಷೇತ್ರದಲ್ಲಾಗಲಿ ವ್ಯಕ್ತಿಗಳ ನಡುವೆ ಪರಸ್ಪರ ಗೌರವ ಇಲ್ಲವಾದರೆ ಅಥವಾ ಅವರ ಸ್ವಾತಂತ್ರ್ಯಕ್ಕೆ ಮನ್ನಣೆಯಿಲ್ಲದಿದ್ದರೆ ವ್ಯಕ್ತಿ-ಸ್ವಾತಂತ್ರ್ಯಕ್ಕೆ ಅರ್ಥವಿಲ್ಲ.

ಧಾರ್ಮಿಕವಾಗಿ ಆಧುನಿಕ ಸಮಾಜ ನವಕಲ್ಪನೆಗಳಿಂದ ಪರಿವರ್ತನೆಯಾಗುತ್ತಿದೆ. ಹಳೆಯ ಸಂಪ್ರದಾಯಗಳಿಗೆ ಹಾಗೂ ಕಟ್ಟುಪಾಡುಗಳಿಗೆ ಇದ್ದ ಗೌರವ ಸಡಿಲವಾಗುತ್ತಿದೆ. ಹೊಸ ಕಲ್ಪನೆಗಳಿಂದ ಸಮಾಜದಲ್ಲಿ ಮಧ್ಯವರ್ತಿಯ ನಾಸ್ತಿಕತೆ, ಹದಗೆಟ್ಟ ಪರಿಸ್ಥಿತಿ, ಹಿಂದಿನ ಆದರ್ಶಗಳ ಬಗ್ಗೆ ತುಚ್ಛ ಭಾವನೆ ಮೊದಲಾದವು ಹುಟ್ಟಿಕೊಂಡಿವೆ. ಇಪ್ಪತ್ತನೆ ಶತಮಾನ ಮತ ಮತ್ತು ನೀತಿ ಸಂಬಂಧವಾದ ವಿಷಯಗಳನ್ನು ಕೇವಲವಾಗಿ ಕಾಣುತ್ತಿದೆ. ಇಂದಿನ ಶತಮಾನ ಹಲವಾರು ವಿಷಯಗಳಿಗೆ ಧರ್ಮ ದೃಷ್ಟಿಯಿಂದ ಉತ್ತರ ನೀಡಬೇಕಾಗಿದೆ: ಜನನ ನಿಯಂತ್ರಣವನ್ನು ವಿಜ್ಞಾನ ನೈತಿಕವಾಗಿ ಪ್ರತಿಪಾದಿಸಬಲ್ಲುದೆ? ಆಧುನಿಕ ಯಂತ್ರಗಳಿಂದ ಶ್ರೀಮಂತ ಮಾಲಿಕರು ಗಳಿಸುತ್ತಿರುವ ಐಶ್ವರ್ಯವನ್ನು ಸಮಾಜವಾದಿ ಹಾಗೂ ಸಮತಾವಾದಿ ಸಿದ್ಧಾಂತಗಳ ಮೇರೆಗೆ ವಿಶ್ವದ ಜನಕೋಟಿಗೆ ಸಮವಾಗಿ ಹಂಚಿ ಸುಖೀರಾಜ್ಯವನ್ನು ಸ್ಥಾಪಿಸಲು ಸಾಧ್ಯವೆ? ಧರ್ಮವನ್ನು ಪರಿಗಣಿಸದೆ ದ್ವೇಷವನ್ನು ಪ್ರಸರಿಸುವ ಯುದ್ಧಗಳಲ್ಲಿ ಮಾರಕಾಸ್ತ್ರಗಳನ್ನು ಪ್ರಯೋಗಿಸಲು ಕಾತುರರಾದ ಸಮರಪ್ರಿಯರ ನಾಸ್ತಿಕ ನಿಲವು ವೈಜ್ಞಾನಿಕವಾಗಿ ಯುಕ್ತವೆ?

(1) ಜನಸಂಖ್ಯೆಯ ಆನುಷಂಗಿಕ ಪ್ರಮಾಣಗಳನ್ನು ಅಂಕಿಅಂಶ ದಾಖಲೆಗಳು ಈ ರೀತಿ ತೋರಿಸುತ್ತವೆ: ಮಧುಮೇಹ ಮತ್ತು ಪರಂಗಿಹಣ್ಣಿನ ರೋಗಗಳಂತಹ ಬಹು ಕೆಟ್ಟರೋಗಗಳನ್ನು ನಿಯಂತ್ರಿಸಿದರೂ ಸಹ ಅವುಗಳಿಗೆ ತುತ್ತಾದ ಜನ ಸಾಮಾನ್ಯವಾಗಿ ಮನೋದೌರ್ಬಲ್ಯಕ್ಕೊಳಗಾಗುವುದರಿಂದ ಸಮಾಜಕ್ಕೆ ಮಾನಸಿಕ ಉಪದ್ರವಕಾರಿಗಳಾಗುತ್ತಾರೆಂದು ತಜ್ಞರು ಅಭಿಪ್ರಾಯಪಡುತ್ತಾರೆ.

ದೌರ್ಬಲ್ಯಕ್ಕೊಳಗಾದವರಿಗೆ ಹುಟ್ಟುವ ಮಕ್ಕಳು ಸಹ ಮಾನಸಿಕ ವ್ಯಾದಿಗಳಿಗೆ ತುತ್ತಾಗುವುದುಂಟು.[2] ಇದು ವಂಶಪಾರಂಪರ್ಯವಾಗಿ ಮುಂದುವರಿಯುತ್ತಿರುತ್ತದೆ. ಈ ಕಾರಣದಿಂದ ಇಂಥ ರೋಗಗಳಿಗೊಳಪಟ್ಟವರಿಗೆ ಸಂತಾನವಾಗದಂತೆ, ವೈದ್ಯಕೀಯ ಕ್ರಮ ಕೈಗೊಳ್ಳಲು ಕಾನೂನನ್ನು ಜಾರಿಗೆತಂದಿದ್ದಾರೆ. ಇನ್ನೊಂದು ವಿಷಯ ವೆಂದರೆ ದಿನೇದಿನೇ ಏರುತ್ತಿರುವ ಜನಸಂಖ್ಯೆಗೂ ಆಹಾರೋತ್ಪಾದನೆಗೂ ಹೇಳಲಸಾಧ್ಯ ವಾದ ವ್ಯತ್ಯಾಸಗಳು ಕಂಡುಬರುತ್ತಿರುವುದರಿಂದ ಆಹಾರ ಸಮಸ್ಯೆಯನ್ನು ಬಗೆಹರಿ ಸುವುದೇ ಕಷ್ಟವಾಗಿ ಪರಿಣಮಿಸಿದೆ. ಈ ಸಮಸ್ಯೆ ವಿಶೇಷವಾಗಿ ಭಾರತ, ಚೀಣ, ರಷ್ಯಾ, ಅಮೇರಿಕ ಮತ್ತು ಯುನೈಟೆಡ್ ಕಿಂಗ್‌ಡಮ್‌ಗಳಲ್ಲಿ (ಬ್ರಿಟನ್ ರಾಷ್ಟ್ರದಲ್ಲಿ) ಹೆಚ್ಚು ಜನಸಾಂದ್ರತೆಯುಳ್ಳ ಪ್ರದೇಶಗಳಲ್ಲಿ ಕಾಣುತ್ತಿದೆ. ವೈಜ್ಞಾನಿಕ ದೃಷ್ಟಿಯಲ್ಲಿ ಆಹಾರ ವಿತರಣೆ ಮತ್ತು ಜನನ ನಿಯಂತ್ರಣಗಳೆರಡೂ ಬಹುಮುಖ್ಯ ಸಾಮಾಜಿಕ ವಿಷಯಗಳಾಗಿವೆ. ಹೆಚ್ಚು ಮಕ್ಕಳಿಂದ ಕುಟುಂಬದ ಆರ್ಥಿಕ ಪರಿಸ್ಥಿತಿ ಹದಗೆಡುವು ದಲ್ಲದೆ ಬಡತನವೂ ಪ್ರಾಪ್ತವಾಗುತ್ತದೆ. ಆದ್ದರಿಂದ ಸಂತಾನನಿರೋಧ ಕ್ರಮಗಳನ್ನು ಜನಪ್ರಿಯಗೊಳಿಸಬೇಕಲ್ಲದೆ, ಸ್ತ್ರೀ–ಪುರುಷರಿಗೆ ಕುಟುಂಬ ನಿಯಂತ್ರಣ ಕಾರ್ಯದಲ್ಲಿ ಅವರ ಕರ್ತವ್ಯವೇನೆಂಬ ಬಗ್ಗೆ ಶಿಕ್ಷಣ ಕೊಡುವುದೂ ಆವಶ್ಯಕವಾಗಿದೆ.

ಜನನನಿಯಂತ್ರಣ ಕೇವಲ ಆರ್ಥಿಕ ವಿಷಯಕ್ಕೆ ಸಂಬಂಧಪಡದೆ ಸಹಜವಾಗಿ ಸಾಮಾಜಿಕ ಮತ್ತು ನೈತಿಕ ಸಮಸ್ಯೆಯೂ ಆಗಿದೆ. ಜನನನಿಯಂತ್ರಣ ಸಂಬಂಧ ವಾದ ಸುಲಭ ಸಾಧನಗಳು ಸ್ತ್ರೀ–ಪುರುಷರ ನೈತಿಕ ಮಟ್ಟವನ್ನು ಸಡಿಲಗೊಳಿಸ ಬಹುದು. ಸ್ತ್ರೀ ಸಂಬಂಧವಾದ ಪೂರ್ವದ ಆದರ್ಶ ಕಲ್ಪನೆಗಳು ಹಾಗೂ ಆಕೆಯ ಪರಿಶುದ್ಧತೆಯು ಆಧುನಿಕ ಸಂತಾನನಿರೋಧ ಸಾಧನಗಳಿಂದ ಸಡಿಲವಾಗದೆ ಇರದು. ಸುಲಭವಾಗಿ ದೊರೆಯುವ ಸಾಧನಗಳು ಕಾಮತೃಷೆಯನ್ನು ತೀರಿಸಿಕೊಳ್ಳುವ ಸಾಧನ ಗಳಾಗಿ ಯುವಜನಾಂಗದಲ್ಲಿ ವಿಶೇಷವಾಗಿ ಬಳಕೆಗೆ ಬರಬಹುದು. ವಿಶ್ವದ ಎಲ್ಲ ಧರ್ಮಗಳೂ ಸ್ತ್ರೀಯ ಪವಿತ್ರತೆಗೆ ಗಣನೀಯ ಸ್ಥಾನವನ್ನು ಕಲ್ಪಿಸಿರುವುದಲ್ಲದೆ, ವಿವಾಹಕ್ಕೆ ಹೆಚ್ಚು ಮನ್ನಣೆ ಕೊಟ್ಟಿವೆ. ಲೈಂಗಿಕ ವಿಚಾರಗಳಲ್ಲಿ ವಿಜ್ಞಾನ ತನ್ನ ನವ ನಿಯಂತ್ರಣಸಾಧನಗಳಿಂದ ಪಾರಂಪರ್ಯವಾಗಿ ಬಂದಿರುವ ಕುಟುಂಬ ಸಂಬಂಧ ವಾದ ಕಲ್ಪನೆಗಳಿಗೆ ಧಕ್ಕೆ ತಂದು, ನೀತಿ ನಿಯಮಗಳನ್ನೇ ಅಲ್ಲಗಳೆಯುವ ಸಮಾಜ ವನ್ನು ಸೃಷ್ಟಿಸಬಹುದು.

(2) ಆಸ್ತಿ ಹಿಂದಿನ ಅರ್ಥವನ್ನು ಕಳೆದುಕೊಂಡಿದೆ. ಆಸ್ತಿ ಅಥವಾ ಸ್ವತ್ತು ಹಿಂದಿನವರಿಗೆ ವ್ಯಕ್ತಿತ್ವದ ಬೆಳವಣಿಗೆ ಮತ್ತು ಸಾಮಾಜಿಕ ಸ್ಥಾನಮಾನಗಳಿಗೆ ಸಾಧನ ವಾಗಿರುತ್ತಿತ್ತು. ಕಮ್ಮಾರನಿಗೆ ಕಮ್ಮಾರಕೆಲಸ ಅವನ ಕುಲದ ಕಸುಬಾಗಿದ್ದಿತು. ಧರ್ಮ ಪ್ರಸಾರ ಕಾರ್ಯವು ಪುರೋಹಿತರಿಗೆ ಸೇರಿದ್ದಿತು. ಹೀಗೆ, ಆಯಾ ವೃತ್ತಿಗೆ ಸಂಬಂಧ ಪಟ್ಟಂತೆ ಸಮಾಜದ ಚಟುವಟಿಕೆಗಳಲ್ಲಿ ಜನ ನಿರತರಾಗಿ ತಮ್ಮ ಅಲ್ಪಸ್ವಲ್ಪ ವರಮಾನ ದಿಂದಲೇ ತೃಪ್ತರಾಗುತ್ತಿದ್ದರು. ಆದರೆ, ಮಧ್ಯಯುಗದ ಮೂಢನಂಬಿಕೆಗಳು ವಿಚಾರ

ಯುಗಕ್ಕೆ ಎಡೆಗೊಟ್ಟು ಜನತೆಯಲ್ಲಿ ನವಜ್ಞಾನ ಹುಟ್ಟಿದಾಗ ಯೂರೋಪ್ ಹಾಗೂ ಪ್ರಪಂಚದ ಇತರ ದೇಶಗಳಲ್ಲಿ ಸಮಾಜ ವೈಜ್ಞಾನಿಕವಾಗಿ ಅಭಿವೃದ್ಧಿ ಹೊಂದತೊಡಗಿತು. ಯಂತ್ರಸಾಧನಗಳನ್ನು ಕಂಡುಹಿಡಿದ ಮೇಲೆ ಕಾರ್ಖಾನೆಗಳ ಉತ್ಪಾದನೆಗಳಿಂದ ಐಶ್ವರ್ಯ ಶೇಖರಣೆಗೆ ಅವಕಾಶವಾಯಿತು. ಆಸ್ತಿಯ ಭಾವನೆಗಳು ಹೆಚ್ಚು ಹೆಚ್ಚು ಐಶ್ವರ್ಯ ಕೂಡಿಸುವ ಪ್ರವೃತ್ತಿಯನ್ನು ಜನರಲ್ಲಿ ಮೂಡಿಸಿದುವು. ಉದ್ಯಮಗಳನ್ನು ಕೈಗೊಂಡ ಜನರು ಐಶ್ವರ್ಯವಂತರಾದರು. ಐಶ್ವರ್ಯವನ್ನು ಹೆಚ್ಚಿಸಲು ಐಶ್ವರ್ಯವನ್ನು ಬಳಸುವುದು ಬಂಡವಾಳಗಾರರ ಗುರಿಯಾಯಿತು. ಇಪ್ಪತ್ತನೆಯ ಶತಮಾನದಲ್ಲಿ ಬಂಡವಾಳಗಾರರ ಸ್ವಾರ್ಥ ಮತ್ತು ದುರಾಸೆಗಳ ವಿರುದ್ಧ ಸಮತಾವಾದಿಗಳ ಮತ್ತು ಸಮಾಜವಾದಿಗಳ ಹೋರಾಟ ಪ್ರಾರಂಭವಾಯಿತು.[3] ಈ ಹೋರಾಟದಲ್ಲಿ ಹಳೆಯ ಬಂಡವಾಳಗಾರರ ನಿರ್ಮೂಲನದೊಡನೆ ಹಿಂದಿನ ಆಸ್ತಿಯ ಸಂಬಂಧವಾದ ನೈತಿಕ ಕಲ್ಪನೆಗಳು ಮತ್ತು ವೈಯಕ್ತಿಕ ಜವಾಬ್ದಾರಿಗಳು ಸಹ ನಿರ್ಮೂಲವಾಗಬೇಕೆ ಎಂಬ ವಿಷಯವನ್ನು ವಿಚಾರ ಶೀಲರು ಯೋಚಿಸಬೇಕಾಗಿದೆ.

(3) ಧರ್ಮವನ್ನು ಉಲ್ಲಂಘಿಸುವ, ಇಲ್ಲವೆ ಕಾನೂನನ್ನು ತಿರಸ್ಕರಿಸುವ ಮನುಷ್ಯ ಒಂದೊಂದು ಬಾರಿ ಕಾಡುಮೃಗಗಳಿಗಿಂತಲೂ ಅಪಾಯಕಾರಿಯಾಗಿ ವರ್ತಿ ಸುತ್ತಾನೆಂದು ಗ್ರೀಕ್ ದಾರ್ಶನಿಕ ಅರಿಸ್ಟಾಟಲ್ ಹೇಳಿದ್ದಾನೆ. ಅದೆ ರೀತಿ, ಆತ್ಮದ ರಹಸ್ಯವೇನೆಂಬುದನ್ನು ತಿಳಿಯದ ಹಾಗೂ ಸಾಧುಸಜ್ಜನರ ಸಹವಾಸವನ್ನು ಮಾಡದ ಮಾನವರ ಜೀವನ ಆಧ್ಯಾತ್ಮಿಕ ದೃಷ್ಟಿಯಲ್ಲಿ ನಿಷ್ಪ್ರಯೋಜಕವಾಗುತ್ತದೆ. ಇಂಥ ವ್ಯಕ್ತಿ ಗಳಿಂದ ಸಮಾಜಕ್ಕೆ ಯಾವ ಪ್ರಯೋಜನವನ್ನೂ ನಿರೀಕ್ಷಿಸುವಂತಿಲ್ಲ. ಧರ್ಮಶ್ರದ್ಧೆ ಕಡಮೆಯಾಗಿ ಈರ್ಷೆ ಮತ್ತು ವೈರ ಪ್ರವೃತ್ತಿಗಳೇ ಸಮಾಜದಲ್ಲಿ ಮೂಡಿ ನಾಸ್ತಿಕ ವಾದಕ್ಕೆ ಎಡೆಕೊಡಬಹುದು. ದೇವಾಲಯಗಳಿಗೆ ಪ್ರಾರ್ಥನೆಗೆ ಹೋಗುತ್ತಿರುವವರ ಸಂಖ್ಯೆ ದಿನೇ ದಿನೇ ಕಡಿಮೆಯಾಗಿ ಧಾರ್ಮಿಕ ಆರಾಧನೆಗಳಿಗೆ ಪ್ರತಿಯಾಗಿ ಮಂತ್ರ ಕ್ರಿಯಾವಿಧಿಗಳು ಹೆಚ್ಚಾಗಬಹುದು. ವಿಜ್ಞಾನದಲ್ಲಿ ವಿಶ್ವಾಸವೇ ಇಂಥ ಪ್ರವೃತ್ತಿ ಗಳಿಗೆ ಕಾರಣ. ಪ್ರಾರ್ಥನೆ ಮತ್ತು ಹರಕೆಗಳಿಗಿಂತ ಪೆನ್ಸಿಲಿನ್ ಮತ್ತು ಜೀವಸತ್ವದ ಗುಳಿಗೆಗಳಲ್ಲಿ ನಮಗೆ ಹೆಚ್ಚಿನ ನಂಬಿಕೆ ಇದೆ. ವಿಜ್ಞಾನದ ಬೆಳವಣಿಗೆಯಿಂದ ಆತ್ಮದ ಕರೆಗೆ ಜನ ಕಿವುಡರಾಗಿದ್ದಾರೆ. ಧರ್ಮ ಇಂದು ಕಾಂತಿಹೀನವಾಗಿದೆ. ಒಂದು ಕಾಲ ದಲ್ಲಿ ವ್ಯಕ್ತಿಯನ್ನೂ ಸಮಾಜವನ್ನೂ ನಿಯಂತ್ರಿಸುತ್ತಿದ್ದ ಧರ್ಮ ಇಂದು ಹಿಂದಕ್ಕೆ ಸರಿದು ಜನತೆಯ ಕಲ್ಪನೆಗಳಿಗೆ ತಕ್ಕಂತೆ ಹಲವಾರು ಪಂಥಗಳ ರೂಪವನ್ನು ತಾಳಿದೆ. ಈ ಪಂಥಗಳೆಲ್ಲ ಮಾನವನಿಗೆ ಸುಖವನ್ನು ದೊರಕಿಸಿಕೊಡಬಹುದೆ ಹೊರತು ಶಾಂತಿ ಯನ್ನು ದೊರಕಿಸಿಕೊಡಲಾರವು.

ನಡೆನುಡಿ, ಅಭಿರುಚಿ, ಸಂಪ್ರದಾಯ ಇವುಗಳಿಗೆ ಸಂಬಂಧಿಸದಂತೆ ಇಂದು ನಾವು ಹೊಸ ಸಮಾಜವನ್ನೇ ಕಾಣುತ್ತಿದ್ದೇವೆ. ಪುರುಷನು ಹೊಂದಿದ್ದ ಮತದಾನದ ಹಕ್ಕನ್ನು ಸ್ತ್ರೀ ಇಂದು ಸಮಾನವಾಗಿ ಪಡೆದುಕೊಂಡು ತನ್ನ ಗುಲಾಮಗಿರಿ, ಪರಾವ

ಲಂಬನೆ ಮತ್ತು ಹೀನ ಪರಿಸ್ಥಿತಿಗಳ ಸಂಕೋಲೆಯಿಂದ ಬಿಡಿಸಿಕೊಂಡಿದ್ದಾಳೆ. ಉಡುಪು, ಸಹವಾಸ, ಉದ್ಯೋಗ, ವಿವಾಹ, ಗೃಹಕೃತ್ಯ, ಕ್ರೀಡೆ, ಪ್ರವಾಸ ಮೊದಲಾದ ವಿಷಯಗಳಲ್ಲಿ ಸ್ತ್ರೀಯರಲ್ಲಿ ಹೊಸ ಸ್ವಾತಂತ್ರ್ಯಪ್ರಜ್ಞೆ ಮತ್ತು ಸಮಾನಭಾವನೆ ವ್ಯಕ್ತವಾಗುತ್ತಿದೆ. ವಿಕ್ಟೋರಿಯಾ ಯುಗದಿಂದ ಇಂದಿನವರೆಗೆ ಸ್ತ್ರೀ ಪೋಷಾಕಿನ ಬಗೆಗೆ ಉಂಟಾಗಿರುವ ಬದಲಾವಣೆಗಳು ಕ್ರಾಂತಿಕಾರಕವೆಂದೇ ಹೇಳಬೇಕು. ಮಿನಿ ಲಂಗ, ತುಂಡು ಸೆರಗು, ಬರಿಕತ್ತು, ತೋಳಿಲ್ಲದ ರವಿಕೆಗಳು, ಫುಲ್‌ಓವರ್‌ಗಳು ಅಲಂಕಾರದ ಶೈಲಿ, ಆಧುನಿಕ ಆಭರಣಗಳ ಸರಳತೆ ಇವೇ ಮುಂತಾದವು ಇಂದಿನ ಸ್ತ್ರೀ, ಹಿಂದಿನ ದಿನಗಳ ಸ್ತ್ರೀಯರ ಮನೋಭಾವವನ್ನು ತಾಳಿಲ್ಲವೆಂಬುದನ್ನು ವ್ಯಕ್ತಪಡಿಸುತ್ತವೆ.[1] ಆಧುನಿಕ ಮಹಿಳೆ ತನ್ನ ಪ್ರಕೃತಿದತ್ತ ಸೌಂದರ್ಯವನ್ನು ಅರಿತಿರುವಳು. ಆಕೆಗೆ ಅವಳ ಆಧುನಿಕ ಜೀವನದಲ್ಲಿ ಹಿಂದಿನ ಕಾಲದಂತೆ ಮೊಣಕಾಲ ಕೆಳಗಿನ ವರೆಗಿನ ನೆಲಗುಡಿಸುವಂಥ ಉಡುಪಿನ ಅವಶ್ಯಕತೆ ಇಲ್ಲ. ಪಾಶ್ಚಾತ್ಯ ಸ್ತ್ರೀಯರಲ್ಲಿ ವಿಶಾಲವಾದ ಕುಲಾವಿಗಳ ಬಗ್ಗೆ ಇದ್ದ ವ್ಯಾಮೋಹ ಇಂದು ಮಾಯವಾಗಿದೆ. ಆಭರಣಗಳು ವಿಶ್ವದಾದ್ಯಂತ ಸ್ತ್ರೀಯರಲ್ಲಿ ಇಂದು ಪ್ರಾಚೀನ ವಸ್ತುವಿನಂತಾಗಿವೆ. ಕಡಿಮೆ ಬಟ್ಟೆಯ ಉಡುಗೆಗಳು ಸೌಂದರ್ಯವರ್ಧನೆಗೆ ಸಾಧಕವಾಗಿವೆ. ಕಳೆದೆರಡು ಮಹಾಯುದ್ಧಗಳು ಸ್ತ್ರೀಯರನ್ನು ಮನೆಯ ಏಕಾಂತವಾಸದಿಂದ ಹೊರಡಿಸಿ ಉದ್ಯೋಗಗಳಲ್ಲಿ ನಿರತರಾಗುವಂತೆ ಮಾಡಿವೆ. ಆಕೆ ವಿವೇಚನೆಯಿಂದಲೂ, ಚಲನೆಯಿಂದಲೂ ಮಾಡಬೇಕಾದ ಕೆಲಸಗಳಿಗೆ ತಕ್ಕ ಉಡುಗೆತೊಡಿಗೆಗಳನ್ನು ಧರಿಸಬೇಕೆಂಬ ವಿಷಯ ತರ್ಕಬದ್ಧವಾಗಿಯೇ ಇದೆ. ನವನಾಗರಿಕತೆ ಅವಳ ಉಡುಪು ಆಭರಣಗಳಲ್ಲಿ ನವಶೈಲಿಗಳನ್ನು ತಂದಿರುವುದು ಸ್ವಾಭಾವಿಕ.

ಯುದ್ಧಾನಂತರ ದಿನಗಳಲ್ಲಿ ಸ್ತ್ರೀಯರ ಕರ್ತವ್ಯಗಳ ಬಗ್ಗೆ ಅನೇಕ ಮಾರ್ಪಾಟುಗಳಾಗಿವೆ. ಹಿಂದೆ ಕೆಳವರ್ಗದವರು ತಮಗೆ ಮಾಡಿಕೊಡುತ್ತಿದ್ದ ಕೆಲಸಗಳನ್ನೆಲ್ಲಾ ಮಧ್ಯಮ ವರ್ಗದ ಮತ್ತು ಉನ್ನತ ವರ್ಗದ ಸ್ತ್ರೀಯರು ತಾವೆ ಮಾಡಿಕೊಳ್ಳುವ ಪರಿಸ್ಥಿತಿ ಉಂಟಾಗಿದೆ: ಎಲ್ಲ ಸ್ತ್ರೀಯರಿಗೂ ಉದ್ಯಮಾವಕಾಶ ದೊರಕಿದುದೆ ಇದಕ್ಕೆ ಕಾರಣ. ವರ್ಗಭೇದ ಮಾಯವಾಗುತ್ತಿದೆ. ಸ್ತ್ರೀ–ಪುರುಷರ ಕಾರ್ಯಗಳೆಂಬ ಹಳೆಯ ಕರ್ತವ್ಯಗಳ ವರ್ಗೀಕರಣಕ್ಕೆ ಇಂದು ಮನ್ನಣೆಯಿಲ್ಲ. ಸಾರಿಗೆ ವಾಹನ ಚಾಲಕರು, ಟ್ಯಾಕ್ಸಿ ಚಾಲಕರು, ರೈಲ್ವೆ ಕೆಲಸಗಾರರು, ರಾಡರ್ ಉದ್ಯೋಗಸ್ಥರು, ಮಿಲಿಟರಿ ಗೂಢಚಾರರು, ರೆಡ್‌ಕ್ರಾಸ್ ಸೇವಕರು, ಯುದ್ಧಾಸ್ತ್ರ ಉಗ್ರಾಣಗಳ ಕಾರ್ಯನಿರ್ವಾಹಕರು, ಪೋಲೀಸ್ ಹಾಗೂ ಜಾಗೃತ ಸಮಿತಿಯ ಸದಸ್ಯರು ಇವೇ ಮೊದಲಾದ ಹುದ್ದೆಗಳಿಗೆ ಸ್ತ್ರೀಯರನ್ನೂ ನೇಮಿಸಿಕೊಳ್ಳುತ್ತಿದ್ದಾರೆ. ಪುರುಷನ ಸ್ಥಾನವನ್ನು ತಾನು ಆಕ್ರಮಿಸಿ, ಆತನನ್ನು ಯುದ್ಧರಂಗಕ್ಕೆ ಕಳುಹಿಸುವ ವ್ಯವಸ್ಥೆಯಾದ ದಿನಗಳಿಂದ ತಾನೂ ಪುರುಷನಂತೆ ದಕ್ಷತೆಯಿಂದ ಕೆಲಸಮಾಡಬಲ್ಲೆನೆಂದು ಸ್ತ್ರೀ ತೋರಿಸಿಕೊಟ್ಟಿದ್ದಾಳೆ. ಹಿಂದಿನ ಕಾಲದಲ್ಲಿ ಸ್ತ್ರೀ ಏನಾದರೂ ಸೈಕಲ್ ಸವಾರಿ ಮಾಡಿ

ಕೊಂಡು ಹೋಗುತ್ತಿದ್ದರೆ ಜನ ಗೇಲಿಮಾಡುತ್ತಿದ್ದರು. ಇಂದು ಸ್ತ್ರೀ ಸಹ ಪುರುಷ ನಂತೆ ಮೋಟಾರ್ ವಾಹನಗಳನ್ನು ಹಾಗೂ ಸ್ಕೂಟರ್‌ಗಳನ್ನು ಚಲಿಸುವುದು ಸರ್ವ ಸಾಮಾನ್ಯವಾಗಿದೆ. ಹಿಂದೆ ಕುಲೀನ ಸ್ತ್ರೀಯರ ಸೇವಕಿಯರಾಗಿರುತ್ತಿದ್ದ ವೃದ್ಧ ಸ್ತ್ರೀಯರು ಇಂದು ಕಾಣಸಿಗುವುದಿಲ್ಲ. ಇವೆಲ್ಲದರ ಜೊತೆಗೆ ಇಂದಿನ ಮಹಿಳೆಗೆ ತಾನು ಇಚ್ಛಿಸಿದ ಉದ್ಯೋಗದಲ್ಲಿ ಕೆಲಸಮಾಡುವ ಹಾಗೂ ತಾನು ಪಡೆದಿರುವ ವ್ಯಕ್ತಿ ಸ್ವಾತಂತ್ರ್ಯದಿಂದ ಪುರುಷರಂತೆ ವ್ಯವಹರಿಸುವ ಅವಕಾಶ ದೊರಕಿದೆ. ಆಕೆಯನ್ನು ಸಮಾಜ ಟೀಕಿಸದಂತೆ ಕಾನೂನು ಅವಳಿಗೆ ರಕ್ಷಣೆಕೊಟ್ಟಿದೆ.

ವಿವಿಧ ಮನೋವೃತ್ತಿಗಳುಳ್ಳ ಪುರುಷರೊಡನೆ ಸೇರುವ ಕಾರಣ ಸ್ತ್ರೀಯರಿಗೆ ಮಾನವಗುಣವನ್ನರಿಯಲು ಸಾಧ್ಯವಾಗಿರುವುದಲ್ಲದೆ ಆಕೆ ಹೆಚ್ಚು ವಿವೇಚನಾಪರಳೂ ಆಗಿದ್ದಾಳೆ. ತನ್ನ ವಿದ್ಯೆ ಮತ್ತು ವಿವೇಚನೆಯಿಂದ ಆಕೆ ಮೋಸಹೋಗತಕ್ಕವ ಳಾಗಿಲ್ಲ. ಸ್ತ್ರೀಯರೊಡನೆ ಸ್ನೇಹ ಬೆಳೆಸುವುದರಿಂದ ಪುರುಷರ ಮನೋಭಾವ ಹಾಗೂ ಚಿತ್ತವೃತ್ತಿಗಳು ಉತ್ತಮಗೊಂಡಿವೆ. ವ್ಯಕ್ತಿಯ ಅಭಿಪ್ರಾಯಗಳು ಊರ್ಧ್ವಾಭಿ ಮುಖವಾಗಿ ಚಲಿಸಿದರೆ ಸಮಾಜವು ಅಧೋಮುಖವಾಗಿ ಚಲಿಸುತ್ತದೆ ಎಂದು ಬುಲ್‌ವರ್ ಹೇಳಿರುತ್ತಾನೆ.[5] ಪುರುಷನೊಡನೆ ಸಮಾನವಾಗಿ ಹಾಗೂ ಒಟ್ಟಿಗೆ ದುಡಿಯುವ ಅವಕಾಶಗಳಿರುವುದರಿಂದ ಕೀಳು ವರ್ಗದ ಬಡ ಸ್ತ್ರೀಯರು ಸಹ ಆತ್ಮ ಗೌರವ, ಧೈರ್ಯ, ಹಾಗೂ ಸಾಹಸ ಪ್ರವೃತ್ತಿಯನ್ನು ಹೊಂದಲು ಸಾಧ್ಯವಾಗಿದೆ. ಸಮಾಜದ ಸಕಲ ಕ್ಷೇತ್ರಗಳಲ್ಲಿಯೂ ಭಾಗವಹಿಸುವಷ್ಟರ ಮಟ್ಟಿಗೆ ಸ್ತ್ರೀ ತನ್ನ ವ್ಯಕ್ತಿತ್ವ ವನ್ನು ರೂಪಿಸಿಕೊಂಡಿದ್ದಾಳೆ. ಇಪ್ಪತ್ತನೆಯ ಶತಮಾನವು ಸ್ತ್ರೀಗೆ ಸಮಾನ ವಿದ್ಯಾಭ್ಯಾಸ, ಕ್ರಿಯಾತ್ಮಕ ಚಟುವಟಿಕೆಗಳು, ಸಾಕಷ್ಟು ವಿರಾಮ, ಸ್ವಾತಂತ್ರ್ಯ ಮತ್ತು ಬಾಳಿನಲ್ಲಿ ಸ್ವಚ್ಛಂದತೆ —ಮೊದಲಾದುವನ್ನು ತಂದುಕೊಟ್ಟಿದೆ. ಇಂದು ಸ್ತ್ರೀಯರು ಸಮಾಜಕ್ಕೆ ಅಮೂಲ್ಯ ಸೇವೆ ಸಲ್ಲಿಸುತ್ತಿದ್ದಾರೆ. ವಿಜ್ಞಾನ, ಸಂಶೋಧನೆ, ಉದ್ಯಮ, ವೈದ್ಯಕೀಯ, ಶಿಕ್ಷಣ ಮೊದಲಾದ ಕ್ಷೇತ್ರಗಳಲ್ಲಿ ಅವರು ಪುರುಷರಂತೆಯೇ ದುಡಿಯುತ್ತಿದ್ದಾರೆ.

## ಕುಟುಂಬದಲ್ಲಿ ಬದಲಾವಣೆಗಳು

ಗಂಡು–ಹೆಣ್ಣಿನ ಪರಸ್ಪರ ಪ್ರೇಮ, ಲೈಂಗಿಕ ಜೀವನ, ಮಕ್ಕಳನ್ನು ಮುಂದೆ ತರಬೇಕೆಂಬ ಅವರ ಉದ್ದೇಶ, ಅವರ ಆತ್ಮೀಯತೆ ಇವು ಒಂದು ಕುಟುಂಬ ಅಸ್ತಿತ್ವಕ್ಕೆ ಬರಲು ಆಧಾರಗಳು.[6] ಕುಟುಂಬ ಜೀವನವು ದೈಹಿಕ ಹಾಗೂ ಮಾನಸಿಕ ತೃಪ್ತಿಯನ್ನೊದಗಿಸುತ್ತದೆ.[7] ಪ್ರಾಣಿ ವರ್ಗದ ಲೈಂಗಿಕ ಪ್ರಚೋದನೆಯಲ್ಲಿ ಕುಟುಂಬದ ಜೈವಿಕ ಮೂಲವಿರುವುದಿಲ್ಲ. ಅವುಗಳಲ್ಲಿ ತಾಯ್ತನ ಇರುವ ವರೆಗೆ ಮಾತ್ರ ತಾಯಿ–ಮಕ್ಕಳಲ್ಲಿ ಬಾಂಧವ್ಯ ಉಳಿಯುತ್ತದೆ. ಮಾನವ ಕುಟುಂಬದ ಅಸ್ತಿತ್ವಕ್ಕೆ ಮೂಲಾಧಾರವೆಂದರೆ ಸ್ತ್ರೀಯು ತಾಯ್ತನದ ಇಚ್ಛೆ.[8] ಗರ್ಭಧರಿಸುವುದು,

ಮಗುವಿಗೆ ಹಾಲುಣಿಸುವ ಬಯಕೆ ಮತ್ತು ತನ್ನ ಕಂದನಲ್ಲಿ ತನ್ನನ್ನೇ ಮರೆಯುವುದು —ಇವು ಸ್ತ್ರೀಯ ಮಾನಸಿಕ ಲಕ್ಷಣಗಳು. ಆಕೆಯ ದೇಹರಚನೆಯಲ್ಲಿಯ ನಿಯತ ಕಾಲಿಕವಾದ ಏರಿಳಿತಗಳಂತೆ ಇದೂ ಒಂದು ಪ್ರಬಲ ಭಾಗ. ತಾಯ್ತನದ ಇಚ್ಛೆ ಯನ್ನು ಬಿಟ್ಟರೆ ಆಕೆಯ ವ್ಯಕ್ತಿತ್ವವು ಅಪಕ್ವ, ಹಾಗೂ ಅಸ್ಥಿರವಾಗುತ್ತದೆ.[9] ಸ್ತ್ರೀಯನ್ನು, ಭೂಮಿಯನ್ನು ಸೃಷ್ಟಿಸಿದವನು ಅತಿಮಾನವನೇ ಸರಿ. ಅದ್ಭುತ ಕಲಾ ಕೃತಿಗಳೆಲ್ಲವೂ ಪ್ರಕೃತಿಯ ಅನುಕರಣೆಯಿಂದಲೇ ಸೃಷ್ಟಿಯಾಗಿವೆ. ಈ ಅನುಕರಣ ಶಕ್ತಿ ಪುರುಷನ ಕಲಾಸೃಷ್ಟಿಯಲ್ಲಿ ಸಹಜವಾದ ಪಕ್ಷದಲ್ಲಿ ಸ್ತ್ರೀಯ ಸಂಬಂಧದಲ್ಲಿಯೂ ಸಹಜವಾಗಬೇಕೆಂದು ಕಾಂಟ್ ತಿಳಿಸುತ್ತಾನೆ.[10] ಆದುದರಿಂದ ಸ್ತ್ರೀಯಾದವಳಿಗೆ ಪತಿ, ಮನೆ, ಮಕ್ಕಳು ಇವೆಲ್ಲವೂ ಆಕೆಯ ಪ್ರಪಂಚವಾಗುತ್ತದೆ. ಈ ಪ್ರಪಂಚದಲ್ಲಿ ಅವಳ ಕ್ರಿಯಾತ್ಮಕ ಶಕ್ತಿಯನ್ನು ಕಾಣಬಹುದು. ಪುರುಷ ತನ್ನ ಬಲದಿಂದ ತನ್ನ ಇಚ್ಛೆಯನ್ನು ನೆರವೇರಿಸಿಕೊಳ್ಳುವನಲ್ಲದೆ ಇತರ ವಿಷಯಗಳಲ್ಲೂ ತನ್ನ ಅಧಿಕಾರವನ್ನು ಹೊರಿಸುತ್ತಾನೆ. ಸ್ತ್ರೀ ತನ್ನ ಪರಿಸ್ಥಿತಿಗೆ ತಕ್ಕಂತೆ ಹೊಂದಿಕೊಂಡು ಜೀವಿತವನ್ನು ರೂಪಿಸಿ ಕೊಳ್ಳುತ್ತಾಳೆ. ಸ್ತ್ರೀಗೆ ತಾಳ್ಮೆ, ಸಹನೆ, ಸಹೃದಯತೆ, ಅನುಕಂಪ ಇವೆ ಮೊದಲಾದ ಗುಣಗಳಿರುವುದರಿಂದ ಆಕೆ ಕುಟುಂಬದ ಕಷ್ಟಕರವಾದ ಕೆಲಸಗಳನ್ನು ನಿರ್ವಹಿ ಸಲು ಹಾಗೂ ಕಠಿಣ ಸಮಸ್ಯೆಗಳನ್ನು ಎದುರಿಸಲು ಶಕ್ತಳಾಗುತ್ತಾಳೆ. ಕುಟುಂಬ ದಲ್ಲಿ ಆಕೆಯ ಪಾತ್ರ ಪ್ರಧಾನವಾದುದು. ತೊಟ್ಟಿಲನ್ನು ತೂಗುವವಳೂ ಅವಳೆ, ಮನೆಯ ಜ್ಯೋತಿಯನ್ನು ಬೆಳಗುವವಳೂ ಅವಳೆ. ಆದ್ದರಿಂದಲೆ ಕುಟುಂಬವು ಜೀವನದ ಬೇಸರಿಕೆಯನ್ನು ಹೋಗಲಾಡಿಸುವ ಹಾಗೂ ಮನುಷ್ಯನಿಗೆ ನೆಮ್ಮದಿ ಯನ್ನುಂಟುಮಾಡುವ ನೆಲೆಯಾಗಿದೆ.[11] ಕುಟುಂಬಜೀವನವಿಲ್ಲದಿದ್ದರೆ, ಸ್ತ್ರೀಯ ಮಾನವೀಯ ಪ್ರಭಾವ ಮನುಷ್ಯನ ಜೀವಿತವನ್ನು ಪರಿವರ್ತಿಸದಿದ್ದರೆ ಬಹುಶಃ ಅವನು ಅಡವಿಯ ಮೃಗಕ್ಕೆ ಸಮನಾಗುತ್ತಿದ್ದ. ವಾಸ್ತವವಾಗಿ ಒಂದು ಕುಟುಂಬದ ವಿಚಾರಗಳನ್ನು ಅರಿತುಕೊಳ್ಳುವುದೆಂದರೆ ಅದರ ಸಂಸ್ಕೃತಿ ಮತ್ತು ನಾಗರಿಕತೆಯನ್ನು ಅರಿತುಕೊಂಡಂತೆ. ಮಕ್ಕಳನ್ನು ಸುಸಂಸ್ಕೃತರನ್ನಾಗಿ ಮಾಡಿ ಅವರಲ್ಲಿ ಜೀವನದ ಆದರ್ಶಗಳನ್ನು ರೂಪಿಸುವ ಸಮಾಜ ಘಟಕವೆ ಕುಟುಂಬ.

ಇತ್ತೀಚಿಗೆ ಕುಟುಂಬ ಸಂಬಂಧವಾದ ಹಿಂದಿನ ಕಲ್ಪನೆಗಳು, ಸಂಪ್ರದಾಯಗಳು ಹಾಗೂ ಆದರ್ಶಗಳು ಒಂದೊಂದಾಗಿ ಕಳಚಿಬೀಳುತ್ತಿವೆ. ಇತಿಹಾಸದ ಯಾವ ಕಾಲದಲ್ಲೂ ಆಗಲಿ ಇಲ್ಲದಿದ್ದಷ್ಟು ಮಾರ್ಪಾಟುಗಳು ಕುಟುಂಬ ಜೀವನದಲ್ಲಿ ಆಗುತ್ತಿವೆ: ಕುಟುಂಬದಲ್ಲಿಯೇ ದೊರಕುತ್ತಿದ್ದ ಸೌಕರ್ಯಗಳನ್ನು ಕುಟುಂಬದ ಸದಸ್ಯರು ಇಂದು ಹೊರಗಡೆ ಪಡೆಯುವ ಹಂತವನ್ನು ಮುಟ್ಟಿದ್ದಾರೆ. ಉತ್ತಮ ಭೋಜನಕ್ಕಾಗಿ ಹೊಟೇಲುಗಳಿಗೆ ಹೋಗುತ್ತಾರೆ, ಮನರಂಜನೆಗಾಗಿ ಚಲನಚಿತ್ರಮಂದಿರ ರೇಸ್ ಕೋರ್ಸ್ ನೃತ್ಯಮಂದಿರ ಮುಂತಾದ ಸ್ಥಳಗಳಿಗೆ ಹೋಗುತ್ತಾರೆ. ಕುಟುಂಬದಲ್ಲಿ ನಡೆಯುತ್ತಿದ್ದ ರೋಗಿಗಳ ಚಿಕಿತ್ಸೆ, ನಿಶ್ಯಕ್ತರ ಪೋಷಣೆ ಮುಂತಾದವು ಆಸ್ಪತ್ರೆ,

ಅನಾಥಾಲಯ ಹಾಗೂ ಧಾರ್ಮಿಕ ಸಂಘ ಸಂಸ್ಥೆಗಳಲ್ಲಿ ನಡೆಯುತ್ತಿವೆ. ಕುಟುಂಬದಲ್ಲಿ ಮಕ್ಕಳಿಗೆ ಆಗುತ್ತಿದ್ದ ಶಿಕ್ಷಣವನ್ನು ಇಂದು ಶಿಕ್ಷಣಸಂಸ್ಥೆಗಳು ಹಾಗೂ ರೇಡಿಯೋ ಕಾರ್ಯಕ್ರಮಗಳು ನಡೆಸುತ್ತಿವೆ.[12]

ಹೀಗೆ ನಾವು ಕುಟುಂಬದಲ್ಲಿ ಕಾಣುತ್ತಿದ್ದ ರಚನಾತ್ಮಕ ಕ್ರಿಯೆಗಳೆಲ್ಲವೂ ಅದರ ಎಲ್ಲೆಯನ್ನು ಬಿಟ್ಟು ಹೊರ ಸಂಸ್ಥೆಗಳ ಪಾಲಾಗಿವೆ. ಕುಟುಂಬದ ಶಿಸ್ತಿನ ಜೀವನ, ಹಿರಿಯರಲ್ಲಿ ಭಕ್ತಿ, ಕಿರಿಯರಲ್ಲಿ ವಿಶ್ವಾಸ, ಸಜ್ಜನ ಸಹವಾಸ, ಧರ್ಮ ಪ್ರವೃತ್ತಿ ಮುಂತಾದುವುಗಳಿಗೆ ಬೆಲೆಯಿಲ್ಲದಂತಾಗಿ ಕುಟುಂಬದ ಸದಸ್ಯರಲ್ಲಿ ವರ್ತನೆ ಐಚ್ಛಿಕ ವಾಗುತ್ತಿದೆ. ಇಂದು ಕುಟುಂಬದ ಕರ್ತವ್ಯಗಳಲ್ಲಿ ಪಾಲುಗಾರಿಕೆ ಹೆಚ್ಚು ನಿರ್ದಿಷ್ಟ ವಾಗಿದ್ದು ಸ್ತ್ರೀ–ಪುರುಷರು ತಮ್ಮ ಅಭದ್ರತೆಯ ಬಗ್ಗೆ ಹೆಚ್ಚು ಜಾಗ್ರತರಾಗಿದ್ದಾರೆ. ಏನೇ ಆಗಲಿ, ಗೃಹಜೀವನದಲ್ಲಿ ಸ್ತ್ರೀಯ ಮಾತೃಸ್ಥಾನವನ್ನು ಯಾರೂ ವಾದಿಸು ವಂತಿಲ್ಲ.[13] ಹೊರಗಿನ ದುಡಿಮೆ ಇಲ್ಲಿಯವರೆವಿಗೆ ಸ್ತ್ರೀವರ್ತನೆಯಾಗಿರಲಿಲ್ಲ.[14] ಹೊರಗೆ ದುಡಿದು ಬರುವ ಸ್ತ್ರೀಯರಿಗೆ ಆಧುನಿಕ ಸಾಧನಗಳು ಗೃಹಕೃತ್ಯದ ದುಡಿಮೆಯನ್ನು ಕಡಿಮೆ ಮಾಡಿರುವುದಲ್ಲದೆ ಆಕೆಗೆ ಹೆಚ್ಚು ವಿಶ್ರಾಂತಿಯನ್ನೂ ದೊರ ಕಿಸಿ ಕೊಟ್ಟವೆ. ಸ್ತ್ರೀ–ಪುರುಷರು ತಮ್ಮ ಬಾಳನ್ನು ಹಸನಾಗಿಸಿಕೊಳ್ಳಲು ನೆಮ್ಮದಿಯ ಜೀವನ ಸಹಾಯಮಾಡಿದೆ. ಗೃಹಕೃತ್ಯಗಳಲ್ಲಿ ಯಾವುದು ಸ್ತ್ರೀಯ ಕೆಲಸವೆಂದು ದೃಢವಾಗಿ ಹೇಳುವಂತಿಲ್ಲ.[15] ಹಾಗೆಯೇ ಸ್ತ್ರೀ ಭಾಗವಹಿಸದಿರುವ ಸಾಮಾಜಿಕ ಕ್ಷೇತ್ರವೇ ಇಲ್ಲ. ಈ ರೀತಿ ಆಧುನಿಕ ಕುಟುಂಬದ ಎಲ್ಲಾ ಸದಸ್ಯರಿಗೂ ಜೀವನದಲ್ಲಿ ಸಮಾನವಾಗಿ ಭಾಗವಹಿಸುವ ಅವಕಾಶ ಸಿಕ್ಕಿದೆ. ಇಂದು ಕುಟುಂಬವು ಅದರ ಸಂಕೀರ್ಣ ಸ್ವಭಾವದಿಂದ ಹಿಂದಿನ ಕುಟುಂಬಗಳಿಗಿಂತ ಮಹತ್ವಪೂರ್ಣವಾಗಿದೆ ಯಲ್ಲದೆ ಜೈವಿಕ ಮತ್ತು ಸಾಂಸ್ಕೃತಿಕ ಧ್ಯೇಯಗಳಿಗೆ ಸಮೀಪವಾಗಿದೆ.[16] ಇಂದು ವಿವಾಹದ ಅತಿ ಗಮನಾರ್ಹ ವೈಶಿಷ್ಟ್ಯ ಅದರ ಜಾತ್ಯಾತೀತ ಸ್ವಭಾವ.[17] ಆಧುನಿಕ ನಾಗರಿಕ ಸಮಾಜಗಳಲ್ಲಿ ಹಿಂದಿನ ವಿವಾಹ ಸಂಬಂಧವಾದ ಕಲ್ಪನೆಗಳು ಮಾಯವಾಗಿ, ವಿವಾಹ ಸಂಸ್ಕಾರವಾಗಿರದೆ ಕರಾರಿನ ಆಧಾರದ ಮೇಲೆ ನಡೆಯು ತ್ತದೆ. ಈ ಪದ್ಧತಿ ಸ್ತ್ರೀ–ಪುರುಷರ ವ್ಯಕ್ತಿ ಸ್ವಾತಂತ್ರ್ಯದ ಆಧಾರದ ಮೇಲೆ ಅನುಷ್ಠಾನಕ್ಕೆ ಬಂದಿದೆ. ಧಾರ್ಮಿಕ ಸಂಸ್ಕಾರಗಳಿಂದ ಕೂಡಿದ ವಿವಾಹಗಳಲ್ಲಿ ಪುರುಷನು ತಾನು ಮದುವೆಯಾಗಲಿರುವ ಸ್ತ್ರೀಯನ್ನು ಜೀವನಪರ್ಯಂತ ಗೌರವಿಸಿ ರಕ್ಷಿಸುವೆನೆಂದು ಪ್ರಮಾಣಮಾಡುತ್ತಾನೆ. ಈ ಧರ್ಮಸ್ವರೂಪವಾದ ವಿವಾಹದಲ್ಲಿ ಗಂಡ–ಹೆಂಡತಿ ಕೊನೆಯವರೆಗೂ ಕಷ್ಟ–ಸುಖಗಳಲ್ಲಿ ಭಾಗಿಗಳಾಗುತ್ತಾರೆ. ಇಬ್ಬರೂ ಕುಟುಂಬವನ್ನು ರಕ್ಷಿಸಿಕೊಂಡು ಬರುತ್ತಾರೆ. ಮಕ್ಕಳನ್ನು ಬೆಳೆಸಿ ಅವರೂ ಸಹ ಸಂಪ್ರದಾಯಬದ್ಧರಾಗಿ ಹಿರಿಯರ ಪದ್ಧತಿಗಳನ್ನೇ ಅನುಸರಿಸುವಂತೆ ಶಿಕ್ಷಣ ಕೊಡು ತ್ತಾರೆ. ಹಿಂದೂ ಧರ್ಮದಲ್ಲಿ ಗೃಹಿಣಿಗೆ ಪಾತಿವ್ರತ್ಯವೆ ಭೂಷಣ. ಸಾವಿತ್ರಿ, ದಮಯಂತಿ, ಸೀತೆ, ಮಂಡೋದರಿ ಮೊದಲಾದ ಮಹಿಳಾಮಣಿಗಳು ಅವರಿಗೆ ಆದರ್ಶ

ಪ್ರಾಯರು. ಸ್ತ್ರೀಯ ದುರ್ನಡತೆ ದಂಡನಾರ್ಹ. ಆದರೆ ಪುರುಷನ ಅಪರಾಧ ಗಳನ್ನು ಗಣನೆಗೆ ತೆಗೆದುಕೊಳ್ಳುವಂತಿಲ್ಲ.

ಆದರೆ, ಜಾತ್ಯಾತೀತ ದೃಷ್ಟಿಯಲ್ಲಿ ಸ್ತ್ರೀ-ಪುರುಷರು ವಿವಾಹದ ಕರಾರನ್ನು ಭಾಗಶಃ ಸಾಮಾಜಿಕ ಕರಾರೆಂದೂ, ಭಾಗಶಃ ಲೈಂಗಿಕ ಅವಶ್ಯಕತೆಗಳಿಗೆ ಸಂಬಂಧಪಟ್ಟ ಕರಾರೆಂದೂ ಪರಿಗಣಿಸುತ್ತಾರೆ. ಸಾಮಾಜಿಕವಾಗಿ ಇಂದಿಗೂ ವಿವಾಹ ಒಂದು ಗೌರವಾರ್ಹ ವ್ಯವಸ್ಥೆಯೇ ಸರಿ. ಅದು ವ್ಯಕ್ತಿಗೆ ಸಮಾಜದಲ್ಲಿ ಪ್ರತಿಷ್ಠಿತ ಸ್ಥಾನ ಕಲ್ಪಿಸಿಕೊಡುವುದರ ಜೊತೆಗೆ ಸಾಮಾಜಿಕ ಸೌಕರ್ಯಗಳನ್ನೂ ಕಲ್ಪಿಸಿಕೊಡುತ್ತದೆ. ಉದ್ಯಮಕ್ಷೇತ್ರದಲ್ಲಿ ವಿವಾಹಿತ ಮಹಿಳಾ ಕಾರ್ಮಿಕರು ಹಾಗೂ ಉದ್ಯಮಿಗಳು ಸಭ್ಯ ಹಾಗೂ ನಂಬಲರ್ಹರಾದ ನೌಕರರೆಂದು ಹೆಸರುಗಳಿಸಿರುವುದಲ್ಲದೆ ಕೆಲಸಗಳನ್ನು ತ್ವರಿತವಾಗಿ ಮತ್ತು ದಕ್ಷತೆಯಿಂದ ಮಾಡಿ ಮುಗಿಸುವ ಸಾಮರ್ಥ್ಯವನ್ನು ಹೊಂದಿದ್ದಾರೆ. ಇತ್ತೀಚೆಗೆ ಉಪಾಹಾರ ಮಂದಿರಗಳಲ್ಲಿಯೂ, ಸಾರ್ವಜನಿಕ ಸಂಸ್ಥೆಗಳಲ್ಲಿಯೂ ಪುರುಷರಿಗಿಂತ ಸ್ತ್ರೀಯರನ್ನೇ ಕೆಲಸಗಳಿಗೆ ಹೆಚ್ಚಾಗಿ ನೇಮಿಸಿಕೊಳ್ಳುತ್ತಿದ್ದಾರೆ. ಇದರಿಂದ ಸಮಾಜ ಸ್ತ್ರೀಯರ ಕಾರ್ಯದಕ್ಷತೆಯನ್ನು ಅಂಗೀಕರಿಸಿದೆ ಎಂದು ಹೇಳಬಹುದು.

ಸಮಾಜದಲ್ಲಿನ ಆಧುನಿಕ ಸ್ಥಿತಿಗತಿಗಳು ಸ್ತ್ರೀ ಮತ್ತು ಪುರುಷರನ್ನು ಅನೇಕ ಉದ್ಯೋಗಗಳಲ್ಲಿ ಒಂದುಗೂಡಿಸಿವೆ. ಹಿಂದೆ ಸಂಪ್ರದಾಯಬದ್ಧ ಸಮಾಜದಲ್ಲಿ ಸ್ತ್ರೀ-ಪುರುಷರು ಅಪರಿಚಿತರಂತೆ ವರ್ತಿಸುವ ಹಾಗೆ ಮಾಡಿದ್ದ ಕಟ್ಟುಪಾಡುಗಳು ಇಂದು ಇಲ್ಲವಾಗಿವೆ. ಆದರೂ ಸಹ ವ್ಯಕ್ತಿ-ವರ್ಗ ಎಂದು ವರ್ಗೀಕರಿಸುವ ಪ್ರಜ್ಞೆ ಇಂದಿಗೂ ಇದೆ. ಸಮಕಾಲೀನ ಸಮಾಜದಲ್ಲಿ ಸ್ತ್ರೀ-ಪುರುಷರು ಸೇರಿ ಪರಸ್ಪರ ಅರಿತುಕೊಳ್ಳುವ ಅವಕಾಶ ಅಮಿತವಾದುದು. ಸಹವಿದ್ಯಾಭ್ಯಾಸ ಮತ್ತು ಸಹಜೀವನಕ್ಕೆ ಅವಕಾಶವಿರುವ ಶಿಬಿರಗಳು, ಈಜುಕೊಳಗಳು, ಸಮಾರಂಭಗಳು, ಕೂಟಗಳು ಮೊದಲಾದ ಕಡೆಗಳಲ್ಲಿ ಯುವಕ ಯುವತಿಯರು ಭೇದವಿಲ್ಲದೆ ನಡೆದುಕೊಳ್ಳುವುದನ್ನು ನಾವು ಕಾಣಬಹುದು. ಇಂಥ ಸಲುಗೆಯ ವಾತಾವರಣದಲ್ಲಿ ಒಂದೇ ಭಯವೆಂದರೆ ವಿವಾಹಪೂರ್ವ ತಾಯ್ತನ. ಇಂದೂ ಕೂಡ ಅವಿವಾಹಿತ ತಾಯಂದಿರನ್ನು ಸಮಾಜವು ನಿಂದೆಗೆ ಗುರಿ ಮಾಡುವುದಲ್ಲದೆ ಆಕೆಯನ್ನು ಬಹಿಷ್ಕರಿಸುತ್ತದೆ. ಇಂದಿನ ಸಂತಾನ ನಿರೋಧ ಶಸ್ತ್ರಚಿಕಿತ್ಸೆ ಮತ್ತು ಸಂತಾನ ನಿರೋಧ ಸಾಧನಗಳಿಂದ ಲೈಂಗಿಕ ಸಂಪರ್ಕ ಹೊಂದಿದರೂ ತಾಯ್ತನದ ಭೀತಿಯಿರುವುದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ಅವಿವಾಹಿತ ತಾಯಂದಿರ ಶಿಶುಗಳನ್ನು ರಕ್ಷಿಸುವ ಕೇಂದ್ರಗಳಿರುವುದರಿಂದ ಜಾರಜ ಮಕ್ಕಳ ಪೋಷಣೆ ಸುಲಭವಾಗಿದೆ. ಆಧುನಿಕ ವಿಜ್ಞಾನ ಇಂದು ಸ್ತ್ರೀ-ಪುರುಷರಿಗೆ ಆದಿಕಾಲದ ಜನರಲ್ಲಿದ್ದ ಲೈಂಗಿಕ ಸ್ವಾತಂತ್ರ್ಯವನ್ನು ತಂದುಕೊಟ್ಟಿದೆ.

ಆಧುನಿಕ ಸಮಾಜದಲ್ಲಿ ವಿವಾಹಿತ ಸ್ತ್ರೀಯ ಆರೋಗ್ಯ ಮತ್ತು ಸಂಸಾರದ ಆರ್ಥಿಕ ದೃಷ್ಟಿಯಿಂದ ಮಿತ ಸಂಸಾರವನ್ನು ಪ್ರತಿಪಾದಿಸುತ್ತಿರುವುದೇ ಅಲ್ಲದೆ ಹಲವಾರು

ಜನನ ನಿಯಂತ್ರಣ ಸಾಧನಗಳನ್ನೂ ಬಳಸಲಾಗುತ್ತಿದೆ. ಈ ಸಂತಾನ ನಿರೋಧ
ಸಾಧನಗಳು ಸುಲಭ ಬೆಲೆಗಳಲ್ಲಿ ದೊರೆಯುತ್ತಿವೆಯಲ್ಲದೆ ವಿವಾಹಪೂರ್ವ ಲೈಂಗಿಕ
ಸಂಪರ್ಕಕ್ಕೆ ಅವುಗಳಿಂದ ಯಾವ ನೈತಿಕ ತಡೆಯೂ ಇಲ್ಲದಂತಾಗಿದೆ. ಇಂದು
ವ್ಯಕ್ತಿಗೌರವ ಮತ್ತು ಮರ್ಯಾದೆಗಳಿಗೆ ಹೆದರದ ಎಚ್ಚರಗೇಡಿ ಯುವಕ, ತಾನು
ಆಪಾದನೆಗೆ ಸಿಲುಕದೆ ತನ್ನ ಪ್ರೇಯಸಿ ಗರ್ಭವತಿಯಾಗದಂತೆಯೂ ಆಕೆಯನ್ನು ರಕ್ಷಿಸ
ಬಹುದಾಗಿದೆ. ಈ ರೀತಿ ಆಧುನಿಕ ಸಮಾಜಗಳಲ್ಲಿ ವಿವಾಹದ ಆಧಾರದ ಮೇಲೆ
ಲೈಂಗಿಕ ತುಷ್ಟಿಗಿರುವ ಗೌರವ ಸಡಿಲವಾಗಿ, ವಿವಾಹದ ಆದರ್ಶಗಳಿಗೆ ಯಾವ
ಬೆಲೆಯೂ ಇಲ್ಲದಂತಾಗುತ್ತಿದೆ.

ಇಂದು ವಿವಾಹದ ಉದ್ದೇಶ ಸಂತಾನಾಭಿವೃದ್ಧಿಯೇ ಆಗಿರದೆ ಸ್ತ್ರೀ–ಪುರುಷರ
ಬಾಳ್ವೆಗೆ ಹೊಸರೂಪು ಕೊಟ್ಟಿದೆ. ಆಧುನಿಕ ವಿವಾಹ ಜೀವನಪರ್ಯಂತ ದಂಪತಿಗಳು
ಜೊತೆಗಾರಿಕೆಯಲ್ಲಿರಬೇಕೆಂಬ ಕಲ್ಪನೆಯಿಲ್ಲದೆ ಅದು ಗಂಡು–ಹೆಣ್ಣಿಗೆ ಸಂಬಂಧಪಟ್ಟ
ಐಚ್ಛಿಕ ವಿಷಯವಾಗಿದೆ. ಸ್ತ್ರೀ–ಪುರುಷರ ಪ್ರಣಯ ವಿವಾಹದಲ್ಲಿ ಕೊನೆಗಾಣುತ್ತದೆ.
ಅವರು ತಮ್ಮ ಪರಸ್ಪರ ಲೋಪದೋಷಗಳನ್ನು ತಿದ್ದಿಕೊಂಡು ಹೊಂದಿಕೊಳ್ಳುತ್ತಾರೆ.
ಕೆಲವು ತಿಂಗಳ ಇಲ್ಲವೆ ಕೆಲವು ವರುಷಗಳ ಸಹಜೀವನದಲ್ಲಿ ಗಂಡ–ಹೆಂಡರು ಪರಸ್ಪರ
ಅರಿತುಕೊಂಡು ತುಂಬು ಜೀವನವನ್ನು ನಡೆಸುತ್ತಾರೆ. ಆಧುನಿಕ ಪ್ರಣಯವಿವಾಹ
ಗಳು ವೇದಗಳ ಕಾಲದ ಆದರ್ಶಗಳನ್ನು ಹಾಗೂ ಹಿಂದಿನ ಸ್ವಯಂವರ ಪದ್ಧತಿಯನ್ನು
ನೆನಪಿಗೆ ತರುತ್ತವೆ. ಧರ್ಮಶಾಸ್ತ್ರಗಳಲ್ಲಿ ಸಹ ಸ್ವಯಂವರ ರೀತಿಯ ವಿವಾಹವೇ
ಉತ್ತಮ ರೀತಿಯ ವಿವಾಹವೆಂದು ಸಾರಿದ್ದಾರೆ. ಮುಂದುವರೆದ ಎಲ್ಲಾ ದೇಶಗಳ
ಲ್ಲಿಯೂ ವಿವಾಹಗಳು ಜಾತಿಭೇದವಿಲ್ಲದೆ ಕೇವಲ ಸ್ತ್ರೀ–ಪುರುಷರ ಆಕರ್ಷಣೆ ಮತ್ತು
ಪ್ರೇಮದ ಆಧಾರದ ಮೇಲೆ ನಡೆಯುತ್ತವೆ. ಇಂದು ಪುರುಷ ಕಟ್ಟುಪಾಡುಗಳಿಲ್ಲದೆ
ಸ್ವತಂತ್ರವಾಗಿ ನಡೆಯುತ್ತಾನೆ. ಸಂಪ್ರದಾಯಕ್ಕೆ ಹೆದರದೆ, ಧಾರ್ಮಿಕ ವಿಧಿಗಳನ್ನು
ಉಲ್ಲಂಘಿಸಿ ಅವನು ತನ್ನ ಜೀವಿತವನ್ನು ರೂಪಿಸಿಕೊಳ್ಳುವಷ್ಟರ ಮಟ್ಟಿಗೆ ಶಕ್ತನಾಗಿ
ದ್ದಾನೆ. ಆಧುನಿಕ ಸ್ತ್ರೀಯು ತನ್ನ ವ್ಯಕ್ತಿತ್ವ, ಯೋಗ್ಯತೆ, ಧ್ಯೇಯ ಮತ್ತು ಚೈತನ್ಯ
ವನ್ನು ಅರಿತುಕೊಂಡಿದ್ದಾಳಲ್ಲದೆ ತನಗೆ ಹೊಂದಿಕೊಳ್ಳಬಲ್ಲ ಮತ್ತು ತಾನು ಮೆಚ್ಚಿದ
ವರನನ್ನೂ ವಿವಾಹವಾಗಲು ಅವಕಾಶ ಪಡೆದುಕೊಂಡಿದ್ದಾಳೆ.

ಸ್ತ್ರೀಯರಲ್ಲಿ ಮಾತೃತ್ವದ ಪ್ರಜ್ಞೆಯನ್ನು ತಪ್ಪಿಸಲಾಗುವುದಿಲ್ಲ. ಫ್ರಾನ್ಸ್
ದೇಶದಲ್ಲಿ ಗರ್ಭಿಣಿ ಸ್ತ್ರೀಯರು ಹೊರಗೆ ಬರಲು ನಾಚಿಕೊಳ್ಳುತ್ತಿದ್ದರು. ಸಂಪ್ರ
ದಾಯಕ್ಕೆ ವಿರುದ್ಧ ತಾನು ಅಪರಾಧ ಮಾಡಿರುವೆನೆಂಬ ಭಾವನೆ ಅವಿವಾಹಿತ ಗರ್ಭಿಣಿ
ಸ್ತ್ರೀಯರಲ್ಲಿರುತ್ತಿತ್ತು. ರಾಷ್ಟ್ರದ ಸುಸ್ಥಿತಿಗೆ ಅದರಿಂದ ಭೀಕರ ಪರಿಣಾಮವಾದೀತೆಂದು
ಭಾವಿಸಿ ಗರ್ಭಿಣಿಯರಲ್ಲಿ ಇಂಥ ಭಾವನೆಗಳನ್ನು ಹೋಗಲಾಡಿಸಲು ಸಾರ್ವಜನಿಕ
ಕ್ರಮಗಳನ್ನು ತೆಗೆದುಕೊಳ್ಳಬೇಕಾಗಿ ಬಂದಿತು. ಇದೇ ರೀತಿಯ ಭಾವನೆಗಳು
ಜರ್ಮನಿ ದೇಶದಲ್ಲೂ ಇದ್ದಿತಾದರೂ ಹಿಟ್ಲರನು ಅಧಿಕಾರಕ್ಕೆ ಬಂದ ನಂತರ ಈ

ಭಾವನೆಗಳು ಕೊನೆಗಂಡವು. ಇಟಲಿ ದೇಶದಲ್ಲೂ ಈ ಭಾವನೆ ಇದ್ದು ಸರ್ವಾಧಿಕಾರ ತತ್ತ್ವ (ಫ್ಯಾಸಿಸಂ) ಇಟಲಿಯ ರಾಜಕೀಯದಲ್ಲಿ ನೆಲೆಗೊಂಡಾಗ ಸರ್ಕಾರ ತನ್ನ ಸಾಮಾಜಿಕ ಚಟುವಟಿಕೆಗಳಲ್ಲಿ ತಾಯ್ತನವನ್ನು ಪ್ರೋತ್ಸಾಹಿಸಿತು. ಮುಸ್ಸೋಲಿನಿ ಅಧಿಕಾರಕ್ಕೆ ಬಂದ ತರುವಾಯ ಹೆಚ್ಚು ಮಕ್ಕಳನ್ನು ಹಡೆದ ತಾಯಂದಿರಿಗೆ ಪದಕಗಳನ್ನು ಮತ್ತು ವಿಶ್ರಾಂತಿ ವೇತನಗಳನ್ನು ಕೊಟ್ಟು ಗೌರವಿಸಲಾಗುತ್ತಿತ್ತು. ನಾಲ್ಕು ಮಕ್ಕಳನ್ನು ಒಟ್ಟಿಗೆ ಹಡೆದ ಮಹಿಳೆಯರಿಗೆ ದೇಶದ ಮುಖಂಡರುಗಳಿಂದ ಪದಕಗಳನ್ನು ಕೊಡಿಸಿ ಸತ್ಕರಿಸಲಾಗುತ್ತಿತ್ತು.

ಆಧುನಿಕ ದೇಶಗಳ ಬಲಾಬಲಗಳು ಅವುಗಳ ಪ್ರಜಾಬಲವನ್ನವಲಂಬಿಸಿರುವುದಾಗಿ ಸರ್ವಾಧಿಕಾರ ವಾದಿಗಳು ('ಫಾಸಿಸ್ಟ್' ವಾದಿಗಳು) ಹೊಸ ಸಿದ್ಧಾಂತವನ್ನು ಮಂಡಿಸಿದರು. ಜನತೆಯ ಒತ್ತಡವು ಹೆಚ್ಚುವುದೇ ರಾಷ್ಟ್ರದ ಜೀವಶಕ್ತಿಯ ಕುರುಹು ಎಂಬುದಾಗಿ ಅವರು ಭಾವಿಸಿದರು. ರಾಷ್ಟ್ರ ವಿಸ್ತರಣೆಗಾಗಿ ಯುದ್ಧ ಮಾಡುವ ಮುಖಂಡರಿಗೆ ಜನಬಲವು ದೊಡ್ಡ ಶಕ್ತಿಯಂತೆ ಕಾಣುತ್ತಿತ್ತು. ಮೊದಲನೆ ಮಹಾಯುದ್ಧವು (1914–18) ಯಂತ್ರ ಮತ್ತು ಆಯುಧಗಳಿಗೆ ಉಂಟಾಗಬಹುದಾದ ನಷ್ಟವನ್ನು ಸರಿದೂಗಿಸುವುದಕ್ಕಿಂತ ಮಾನವ ಶಕ್ತಿಯನ್ನು ಪುನಃ ·ತುಂಬುವುದು ಕಷ್ಟಸಾಧ್ಯವೆಂಬುದನ್ನು ತೋರಿಸಿಕೊಟ್ಟಿತು. ಯುದ್ಧವು ಪ್ರಮುಖವಾಗಿ ರಾಷ್ಟ್ರಗಳ ಬಲಾಬಲಗಳ ಪರೀಕ್ಷೆ. ಇದು ಹೆಚ್ಚಿನ ಜನರನ್ನು ಯುದ್ಧರಂಗಕ್ಕೆ ಎಳೆಯುತ್ತದೆ. ದೇಶರಕ್ಷಣೆಗೆ ಪ್ರತಿಯೊಬ್ಬನೂ ಸಿದ್ಧನಾಗಬೇಕು. ಯುದ್ಧದ ಭೀಕರ ಪರಿಣಾಮವಾಗಿ ಅಸಂಖ್ಯಾತ ಪುರುಷರು ಮಡಿದು ಪುರುಷರಿಗಿಂತ ಸ್ತ್ರೀಯರ ಸಂಖ್ಯೆಯೇ ಹೆಚ್ಚಾಗಿ ಉಳಿಯುತ್ತದೆ. ಪುರುಷರ ಸಂಖ್ಯೆ ಇಳಿಮುಖವಾದರೆ ದೇಶದ ಆರ್ಥಿಕ ಸ್ಥಿತಿಯೂ ಇಳಿಮುಖವಾಗುತ್ತದೆ. ಕೈಗಾರಿಕೆ, ವ್ಯವಸಾಯ ಹಾಗೂ ಉದ್ಯಮಗಳಲ್ಲಿ ಕಾರ್ಮಿಕರ ಕೊರತೆ ಕಂಡುಬಂದು ದೇಶದ ಪ್ರಗತಿಗೆ ಅಡಚಣೆಯುಂಟಾಗುತ್ತದೆ.

ಜನಬಲವೇ ದೇಶದ ಬಲವೆಂದು ಸಾರಿದ ಸರ್ವಾಧಿಕಾರಿಗಳ ರಾಷ್ಟ್ರಗಳಲ್ಲಿ ಪ್ರಜಾಸಂಖ್ಯೆಗೆ ಸ್ತ್ರೀಯರ ಕೊಡುಗೆ ಮುಖ್ಯವೆಂದು ಪರಿಗಣಿಸಲಾಗಿತ್ತು. ಜನನ ನಿಯಂತ್ರಣ, ಸಂತಾನನಿರೋಧ ಕ್ರಮಗಳು, ಸ್ತ್ರೀ ಅಥವಾ ಪುರುಷರ ಒಂಟಿ ಜೀವನ, ವಿವಾಹವಿಚ್ಛೇದನ ಇವೇ ಮುಂತಾದವುಗಳಿಗೆ ಸರ್ವಾಧಿಕಾರ ಸಮಾಜ ಉತ್ತೇಜನ ಕೊಡುತ್ತಿರಲಿಲ್ಲ. ಹಿಟ್ಲರನ ಜರ್ಮನಿಯಲ್ಲಿ 'ಸ್ತ್ರೀಯ ಸ್ಥಾನ ಮನೆ' ಎಂಬ ಕೂಗು ದೇಶದಾದ್ಯಂತ ಕೇಳಿಬರುತ್ತಿತ್ತು. ಮಕ್ಕಳನ್ನು ಹೆರುವುದು, ಗೃಹಕೃತ್ಯವನ್ನು ಸುಗಮವಾಗಿ ನೋಡಿಕೊಳ್ಳುವುದು ಮತ್ತು ದೇಶದ ಸಂಸ್ಕೃತಿಯನ್ನು ಅಭಿವೃದ್ಧಿಪಡಿಸಿ ಮುಂದಿನ ಪೀಳಿಗೆಗೆ ಅದನ್ನು ಒಪ್ಪಿಸುವುದು—ಇವು ದೇಶಪ್ರೇಮಿ ಸ್ತ್ರೀಯರ ಮುಖ್ಯ ಕರ್ತವ್ಯಗಳೆಂದು ಹಿಟ್ಲರನೇ ಸಾರಿ ಹೇಳಿದ್ದನು. ಸ್ತ್ರೀಯು ಜನಾಂಗದ ಜನನಿ, ರಾಷ್ಟ್ರ ಸಂಸ್ಕೃತಿಯ ಪೋಷಿಣಿ ಹಾಗೂ ಮನೆಯ ಬೆಳಕೆಂದು ಭಾವಿಸಲಾಗಿತ್ತು. ಆದ್ದರಿಂದ ಆಕೆಗೆ ವಿಶೇಷ ಗೌರವ ಸಲ್ಲುತ್ತಿತ್ತು. ತಾಯಂದಿರು ಇತರ ಸ್ತ್ರೀಯರಿಗೆ

ಆದರ್ಶ ಪ್ರಾಯರಾಗಿದ್ದರೆನ್ನಬಹುದು. ನೀಟುಗಾರಿಕೆಯ (ಫ್ಯಾಷನ್) ಹೆಸರಿನಲ್ಲಿ ತುಟಿಗೆ ಸಿಗರೇಟಿನ ತುಂಡನ್ನು ಸಿಗಿಸಿಕೊಂಡು ಬೀದಿಗಳಲ್ಲಿ ಅಲೆಯುವ ಸ್ತ್ರೀಯರನ್ನು ತಿರಸ್ಕಾರಭಾವದಿಂದ ಜನ ಕಾಣುತ್ತಿದ್ದರು. ಸ್ತ್ರೀಯರನ್ನು ಆಧುನಿಕ ನಡೆನುಡಿಗಳಿಗೆ ಈಡುಮಾಡುವ ಸಾಮಾಜಿಕ ಶಕ್ತಿಗಳನ್ನು ತಡೆಯಲು ಸ್ತ್ರೀ ವಿದ್ಯಾಭ್ಯಾಸ, ಉದ್ಯೋಗ, ಮನರಂಜನೆ, ಸಂಘಜೀವನ ಹಾಗೂ ಸ್ತ್ರೀಯರ ಇತರ ಚಟುವಟಿಕೆಗಳನ್ನು ಸರ್ಕಾರವೇ ನಿಯಂತ್ರಿಸುತ್ತಿತ್ತು. ರಾಷ್ಟ್ರದ ಆರ್ಥಿಕಾಭಿವೃದ್ಧಿಯನ್ನು ರಾಜಕೀಯ ಆದರ್ಶಕ್ಕೆ ಅನುಗುಣವಾಗಿ ನಿಯಂತ್ರಿಸಲಾಗಿತ್ತು. ಈ ಅಭಿವೃದ್ಧಿಕಾರ್ಯಗಳು ಯುದ್ಧಾಸ್ತ್ರಗಳ ತಯಾರಿಕೆ ಮತ್ತು ಪುನರ್ವಸತಿಯ ದೃಷ್ಟಿಯಿಂದಲೇ ಅಲ್ಲದೆ ಸಮಾಜದ ವಿಕಾಸ ದೃಷ್ಟಿಯಿಂದಲೂ ಜರುಗುತ್ತಿದ್ದವು. ಈ ತೆರನ ಸಾಂಸ್ಕೃತಿಕ ಪರಂಪರೆಯನ್ನು ಸಹಸ್ರಾರು ವರುಷಗಳಿಂದಲೂ ಉಳಿಸಿಕೊಂಡು ಬರುತ್ತಿದ್ದ ಪ್ರಾಚ್ಯ ದೇಶಗಳತ್ತ ಯುರೋಪ್ ಖಂಡದ ಜನರ ದೃಷ್ಟಿ ಹೊರಳಿತು. ಪ್ರಾಚ್ಯ ದೇಶಗಳ ಕುಟುಂಬ ಜೀವನ, ಅದರಲ್ಲೂ ವಿಶೇಷವಾಗಿ ಭಾರತ ಚೀಣಾಗಳ ಕುಟುಂಬ ಜೀವನ ಪಾಶ್ಚಾತ್ಯರನ್ನು ಬಹುವಾಗಿ ಆಕರ್ಷಿಸಿತು.

ಕುಟುಂಬ, ವಿವಾಹ ಮತ್ತು ತಾಯ್ತನದ ಬಗೆಗಿನ ಕಟ್ಟುನಿಟ್ಟಾದ ಭಾವನೆಗಳು ಪಾಶ್ಚಾತ್ಯ ದೇಶಗಳಲ್ಲಿ ಒಂದು ತೆರನ ವಿರೋಧ ಪ್ರತಿಕ್ರಿಯೆಯನ್ನೇ ಉಂಟು ಮಾಡಿದಂತೆ ಕಾಣುತ್ತದೆ. ಇಂಗ್ಲೆಂಡ್, ಫ್ರಾನ್ಸ್ ಮತ್ತು ಅಮೆರಿಕೆಗಳಲ್ಲಿ ಸ್ತ್ರೀಯರನ್ನಡಗಿಸುವ ಪ್ರಯತ್ನಗಳು ಮೂಢಯುಗದ ಯಥಾಸ್ಥಾಪನೆಯ ಬಗ್ಗೆ ಸರ್ವಾಧಿಕಾರಿಗಳು ಹೂಡಿರುವ ಸಂಚು ಎಂದು ಪರಿಗಣಿಸಲಾಗಿತ್ತು. ಪ್ರಜಾಪ್ರಭುತ್ವ ರಾಷ್ಟ್ರಗಳು ಸ್ತ್ರೀಯರ ಮತದಾನದ ಹಕ್ಕನ್ನು ಸಾರ್ವಜನಿಕ ವಿಷಯಗಳ ನಿರ್ಣಯ ದಲ್ಲಿ ಅವರಿಗಿರುವ ಸ್ವಾತಂತ್ರ್ಯವನ್ನು ಸೂಚಿಸುತ್ತದೆಯೆಂದು ಘೋಷಿಸಿದವು.

ಆಧುನಿಕ ಸಮಾಜದ ಕಲ್ಪನೆಗಳು ತಾಯ್ತನವನ್ನು ಐಚ್ಛಿಕವನ್ನಾಗಿಸಿವೆ. ಆದರೆ ತಾಯ್ತನ ಮತ್ತು ಮಕ್ಕಳ ಲಾಲನೆ-ಪಾಲನೆಗಳನ್ನು ಕುಟುಂಬದ ಪರಿಸರದಿಂದ ಹೊರಗೆ ತೆಗೆದುಹಾಕಲಾಗದು. ಸಂಸಾರ ಜೀವನವೇ ಸ್ತ್ರೀಯ ಭಾಗ್ಯ. ಮಕ್ಕಳನ್ನು ಧಾರ್ಮಿಕ ಹಾಗೂ ನೈತಿಕ ವಾತಾವರಣದಲ್ಲಿ ಬೆಳೆಸುವುದು ಕುಟುಂಬ ಜೀವನದಲ್ಲಿಯೇ ಸಾಧ್ಯ. ತಾಯ್ತನದ ಮನೋವೃತ್ತಿ ಕುಟುಂಬದ ಬಗೆಗಿನ ಮನೋವೃತ್ತಿಗೆ ನಿಕಟ ವಾಗಿದೆ. ಇಂದು ತಾಯ್ತನದ ಬಯಕೆ ಐಚ್ಛಿಕವಾಗಿದ್ದರೂ, ಕುಟುಂಬಗಳನ್ನು ಅವ್ಯವಸ್ಥೆಗೊಳಿಸಲು ತೊಡಗಿರುವ ವಿವಾಹವಿಚ್ಛೇದ, ಸಂತಾನನಿಯಂತ್ರಣ ಸಾಧನ ಗಳು ಮೊದಲಾದ ಪ್ರೇರಕ ಶಕ್ತಿಗಳು ಈ ಬಯಕೆಯನ್ನು ಪ್ರತಿಬಂಧಿಸುತ್ತಿವೆ. ಜೀವನ ನಿರ್ವಹಣೆಗಾಗಿ ಸ್ತ್ರೀ ಪುರುಷರು ಉದ್ಯೋಗನಿರತರಾಗಿರುವ ನಗರ ಪ್ರದೇಶ ಗಳಲ್ಲಿ ತಾಯ್ತನವು ನಿಜವಾದ ಸಮಸ್ಯೆಯನ್ನು ತಂದೊಡ್ಡಿದೆ.[18] ಈ ಸಮಸ್ಯೆಯನ್ನು ಪರಿಹರಿಸಲು ಮುಂದುವರೆದ ನಾಗರಿಕ ದೇಶಗಳಿಗೆ ಮಾತ್ರ ಸಾಧ್ಯವಾಗಿದೆಯೆನ್ನ ಬಹುದು. ಈ ನಾಗರಿಕ ದೇಶಗಳಲ್ಲಿಯೂ ಕೂಡ ಸ್ತ್ರೀಯರ ವೈಯಕ್ತಿಕ ಮನೋ

ವೃತ್ತಿ ಎಂದಿಗಿಂತಲೂ ಇಂದೂ ಬದಲಾವಣೆ ಹೊಂದಿ ಕ್ಷಿಪ್ರ ವಿವಾಹಕ್ಕೆ ಅವರು ಒಪ್ಪದೆ ಕೆಲವು ವಯಸ್ಸಿನ ನಂತರ ತಾಯಿಯರಾಗಲು ಬಯಸುತ್ತಾರೆ.

ಸ್ತ್ರೀಯ ತಾಯ್ತನದ ಭಾವನೆಯು ಆಕೆಗೆ ಗೃಹಕೃತ್ಯದ ಬಗೆಗಿರುವ ಭಾವನೆಯನ್ನು ಅವಲಂಬಿಸಿರುತ್ತದೆ. ಕೆಲವು ಪ್ರಗತಿ ಹೊಂದಿದ ದೇಶಗಳಲ್ಲಿ, ಕಳೆದ ಮೂರು ನಾಲ್ಕು ತಲೆಮಾರಿನಿಂದ ಗೃಹಕೃತ್ಯದ ಹಲವಾರು ಕಟ್ಟುಪಾಡುಗಳಿಗೂ ಕ್ರೂರ ಪದ್ಧತಿಗಳಿಗೂ ಒಳಗಾಗಿದ್ದ ಸ್ತ್ರೀಯರನ್ನು ಅಂಥ ಕಟ್ಟುಪಾಡುಗಳಿಂದ ಮತ್ತು ಪದ್ಧತಿಗಳಿಂದ ಬಿಡಿಸಲಾಗಿದೆ. ದೇಶದ ಕೈಗಾರಿಕೆಯ ಮುನ್ನಡೆ ಹಾಗೂ ಸಮಾಜದ ಪ್ರಗತಿ ಸ್ತ್ರೀಯರಿಗೆ ಗೃಹಕೃತ್ಯಗಳಿಂದ ಹೆಚ್ಚು ವಿರಾಮ ದೊರಕಿಸಿಕೊಟ್ಟಿವೆ. ಇಂದು ಸುಧಾರಿತ ತಿಂಡಿತಿನುಸುಗಳನ್ನು ಅಂಗಡಿಗಳಲ್ಲಿ ಕೊಂಡುಕೊಳ್ಳಬಹುದಾಗಿದೆಯಲ್ಲದೆ ಆಧುನಿಕ ಉಪಕರಣಗಳಿಂದ ಶೀಘ್ರವಾಗಿ ಅಡಿಗೆಮಾಡಿ ಅಡಿಗೆ ಮನೆಯನ್ನು ನಾಜೂಕಿನ ಕೊಠಡಿಗಳಂತೆ ಇಡಲು ಸಾಧ್ಯವಾಗಿದೆ.[19] ಹಿಂದೆ ತಾಯಿಯ ಕರ್ತವ್ಯಗಳಾಗಿದ್ದ ಒಗೆಯುವ ಕೆಲಸ, ಬೀಸುವ ಕೆಲಸ, ಮಕ್ಕಳ ವಿದ್ಯಾಭ್ಯಾಸ, ಮನರಂಜನೆ ಮೊದಲಾದ ಕೆಲಸಗಳನ್ನು ಇಂದು ಇತರರ ನೆರವಿನಿಂದ ಮತ್ತು ಸಂಘ ಸಂಸ್ಥೆಗಳ ಮೂಲಕ ಮಾಡಿಕೊಳ್ಳಬಹುದಾಗಿದೆ. ಇಷ್ಟೆಲ್ಲ ಅನುಕೂಲಗಳಿದ್ದರೂ ಮಧ್ಯಮ ವರ್ಗದ ಸ್ತ್ರೀಯರಿಗೆ ಮಕ್ಕಳನ್ನು ಸ್ವಯಂ ನೋಡಿಕೊಳ್ಳುವ ಕೆಲಸ ಇದ್ದೆ ಇರುತ್ತದೆ. ಆಧುನಿಕ ಸೌಲಭ್ಯಗಳಿಂದ ದೊರಕುವ ವಿರಾಮಕಾಲವನ್ನು ಅವರು ಸಾಂಸ್ಕೃತಿಕ ಚಟುವಟಿಕೆಗಳಿಗೆ, ಹಾಗೂ ಓದಿ ಜ್ಞಾನಾರ್ಜನೆ ಮಾಡಿಕೊಳ್ಳಲು ಉಪಯೋಗಿಸಕೊಳ್ಳಬಹುದು.

ಮಧ್ಯಮ ವರ್ಗದ ಸ್ತ್ರೀಯರು ಹೊರಗಿನ ಜೀವನವನ್ನು ಕಾಣದೆ, ಗೃಹವೆ ತಮ್ಮ ಸರ್ವಸ್ವವೆಂದು ಭಾವಿಸಿರುವುದರಿಂದ ಆಧುನಿಕ ದೃಷ್ಟಿಯಲ್ಲಿ ಅವರು ಯಾವ ಉದ್ಯೋಗದಲ್ಲಿಯೂ ತೊಡಗಿಲ್ಲದೆ ಕುಟುಂಬದ ಯಜಮಾನನ ಆದಾಯದ ಮೇಲೆ ಜೀವಿಸುವ ಪರಾವಲಂಬಿಗಳಾಗಿದ್ದಾರೆ. ಆದರೆ ಅವರು ಪರೋಪಜೀವಿಗಳಲ್ಲ. ಒಂದಲ್ಲ ಒಂದು ಕೆಲಸದಲ್ಲಿ ಅವರು ತೊಡಗಿರುತ್ತಾರೆ. ಎಂದಿಗಿಂತಲೂ ಇಂದು ಗೃಹಕೈಗಾರಿಕೆಗಳು ಹೆಚ್ಚು ಆಕರ್ಷಕವಾಗತೊಡಗಿವೆ. ಭಾರಿ ಕೈಗಾರಿಕೆಗಳಲ್ಲಿ ಸಂಪಾದಿಸುವ ಕಾರ್ಮಿಕನ ಜೀವನ ಸುಗಮವಾಗಿರುತ್ತದೆ. ಕಡಿಮೆ ಕೂಲಿ ಸಂಪಾದಿಸುವಾತ ತನ್ನ ಹೆಂಡತಿಯನ್ನು ಸಂಪಾದನೆಗೆ ಕಳುಹಿಸುತ್ತಾನೆ. ಇದರಿಂದ ಆದಾಯ ಹೆಚ್ಚಿ ಜೀವನ ಮಟ್ಟ ಏರುತ್ತದೆ. ವಿದ್ಯಾವಂತ ಮಹಿಳೆಯರು ಕೆಲಸಗಳಿಗೆ ಸೇರಿಕೊಂಡು ಕುಟುಂಬದ ವರಮಾನವನ್ನು ಹೆಚ್ಚಿಸಿಕೊಳ್ಳುತ್ತಿದ್ದಾರೆ. ಆ ಮೂಲಕ ಜೀವನ ಮಟ್ಟ ಉತ್ತಮಗೊಳ್ಳುವುದರಿಂದ ಸ್ತ್ರೀಯರು ಮನೆಯನ್ನು ಉತ್ತಮ ರೀತಿಯಲ್ಲಿ ಇಟ್ಟುಕೊಂಡು ನೆಮ್ಮದಿಯಿಂದ ಜೀವಿಸುತ್ತಾರೆ. ಆದುದರಿಂದ ಗೃಹಜೀವನ ಉತ್ತಮಗೊಳ್ಳಬೇಕಾದರೆ ಸಾಕಷ್ಟು ಆರ್ಥಿಕ ಬಲವಿರಬೇಕು.

ವೈಜ್ಞಾನಿಕವಾಗಿ ಸ್ತ್ರೀ ತಾಯ್ತನವನ್ನು ಸ್ವಾಭಾವಿಕವಾಗಿಯೇ ಬಯಸುತ್ತಾಳೆ. ಈ ಬಯಕೆ ಆಕೆಯಲ್ಲಿ ಬೇರೂರಿದೆ. ಪ್ರಕೃತಿ ವಿನ್ಯಾಸದಂತೆ ಸ್ತ್ರೀಯು ಜನಾಂಗದ

ಜನನಿ. ಆಕೆಗೆ ಗೃಹದ ವಾತಾವರಣ ಅನುಕೂಲವಾಗಿದ್ದರೆ ಗೃಹಕೃತ್ಯಗಳನ್ನೇ ಅಲ್ಲದೆ ಮಾತೆಯ ಪಾತ್ರವನ್ನು ಸಹ ಚೆನ್ನಾಗಿ ನಿರ್ವಹಿಸಬಲ್ಲಳು. ಸಾಮಾಜಿಕ ಹಾಗೂ ಆರ್ಥಿಕ ಬಿಕ್ಕಟ್ಟಿಗೆ ಒಳಗಾಗಿರುವ ಸ್ತ್ರೀ ಮಾನಸಿಕ ಹಾಗೂ ನರಗಳ ದೌರ್ಬಲ್ಯಕ್ಕೆ ಈಡಾಗುವುದು ಸಾಮಾನ್ಯ. ಸ್ವಯಿಚ್ಛೆಯಿಂದ ಸ್ತ್ರೀಯರು ಗೃಹಕೃತ್ಯಗಳನ್ನು ಹೆಚ್ಚಿಗೆ ಆಶಿಸುತ್ತಾರೆ. ಆದುದರಿಂದ ಸ್ತ್ರೀಯರು ಬೇಡುವಂಥ ವೈಯಕ್ತಿಕ ತೃಪ್ತಿ ಗೃಹಕೃತ್ಯದಲ್ಲಿ ದೊರೆಯುವಂತೆ ಸರಿಯಾಗಿ ನೋಡಿಕೊಳ್ಳುವುದು ಮುಖ್ಯ.

ಗೃಹಜೀವನದಿಂದ ಪಡೆದುಕೊಳ್ಳಬಹುದಾದ ತೃಪ್ತಿಯು ಸೌಂದರ್ಯ ಮತ್ತು ನೈತಿಕ ಭಾವನೆಗಳ ಮೇಲೆ ನಿಂತಿರುತ್ತದೆ. ಈ ಬಗ್ಗೆ ಪುರುಷರ ತೃಪ್ತಿಯು ಅವರ ಶಕ್ತಿಸಾಮಾರ್ಥ್ಯ ಹಾಗೂ ಸಾಧನೆಗಳಿಂದ ಸಾಧ್ಯವಾಗಿರುವಲ್ಲಿ, ಸ್ತ್ರೀಯರ ತೃಪ್ತಿಯು ಅವರ ಸಹನೆ, ಅನುಕಂಪ, ಸ್ಥೈರಣೆ ಮೊದಲಾದ ಗುಣಗಳಿಂದ ಉಂಟಾಗುತ್ತದೆ. ಸ್ತ್ರೀಯರ ಉದಾರತೆ ಹಾಗೂ ತ್ಯಾಗ ಅವರ ಜೀವಿತಕ್ಕೆ ಸ್ವಾಭಾವಿಕವಾಗಿದ್ದು ಅವುಗಳ ಮೂಲಕ ಅವರಿಗೆ ಆತ್ಮ ತೃಪ್ತಿಯಾಗುತ್ತದೆ. ಸ್ತ್ರೀಪುರುಷರ ಗುಣಗಳಿಗನುಸಾರವಾಗಿಯೆ ಪುರುಷರ ಸ್ವಭಾವ ಬಹಿರ್ಮುಖವಾದದ್ದು, ಸ್ತ್ರೀಯ ಸ್ವಭಾವ ಅಂತರ್ಮುಖವಾದದ್ದು ಎಂದು ಹೇಳುತ್ತಾರೆ. ಇನ್ನುಳಿದ ಬಾಹ್ಯ ಗುಣಗಳು ಸ್ತ್ರೀಪುರುಷರಿಬ್ಬರಿಗೂ ಸಮವಾಗಿರುತ್ತವೆ. ಯಾವ ಸ್ತ್ರೀಯಲ್ಲಿ ಉದಾತ್ತಗುಣಗಳಿವೆಯೊ, ಮಾನವೀಯ ಆದರ್ಶಗಳಿವೆಯೊ ಆ ಸ್ತ್ರೀ ಗೃಹಣಿಯಾಗಲು ಸಮರ್ಥಳಾಗಿರುತ್ತಾಳೆ. ಅಂಥ ಸ್ತ್ರೀಗೆ ಸಮಾಜದ ದುರ್ವ್ಯಾಪಾರಗಳು ಹಿಡಿಸುವುದಿಲ್ಲ; ಅನೀತಿಯುತವಾದ ಆಕರ್ಷಣೆಗಳಿಗೆ ಆಕೆ ಮಾರುಹೋಗುವುದಿಲ್ಲ. ತನಗೆ ಆಪ್ತರಾದವರಿಗಾಗಿ, ತನ್ನ ಮಕ್ಕಳಿಗಾಗಿ ಎಷ್ಟು ನೋವನ್ನಾದರೂ ಅನುಭವಿಸುವ ತ್ರಾಣ ಆಕೆಯಲ್ಲಿದೆ. ಈ ಕಾರಣದಿಂದ ಸ್ತ್ರೀಯ ಜೀವಿತವು ಅವಳ ಮಡಲಿನಲ್ಲಿರುವ ಮಗುವನ್ನೇ ಅವಲಂಭಿಸಿರುವುದನ್ನು ನಾವು ಕಾಣಬಹುದು. ತಾಯಿ ಮಗು ಎಂಬ ಬಗ್ಗೆ ಹೊರಗಿನವರ ನೋಟ ಒಂದಾದರೆ ತಾಯಿಯಾದವಳ ಮನೋಭಾವನೆಗಳು ಮಗುವಿನ ಬಗ್ಗೆ ತಮ್ಮದೇ ಆದ ಗಾಢತೆಯನ್ನು ಹೊಂದಿರುತ್ತವೆ. ಮನೆ, ಪ್ರೇಮಿಗಳ ಶಯನ ಹಾಗೂ ಆಲೋಚನಾರಂಗ ಮಾತ್ರವೇ ಆಗಿರದೆ ಆಯಾಸಗೊಂಡ ದೇಹಕ್ಕೆ ವಿಶ್ರಾಂತಿಧಾಮವೂ ಆಗಿರುತ್ತದೆ. ಅಲ್ಲಿನ ವಾತಾವರಣ ನೆಮ್ಮದಿಯ ವಾತಾವರಣವಾಗಿರುತ್ತದೆ. ಸ್ತ್ರೀದೃಷ್ಟಿಯಲ್ಲಿ ಆಕೆಯ ಕಣ್ಮುಂದೆ ಬೆಳೆಯುವ ಮಗುವೇ ಆಕೆಯ ಆತ್ಮವನ್ನು ಬೆಳಗಿಸಿ ಮನೆಗೆ ಬೆಳಕನ್ನು ತರುತ್ತದೆ. ಮನೆಯ ಬೆಳಕೆ ಮಗುವಾಗಿದ್ದು ಆ ಬೆಳಕನ್ನು ಪೂಜಿಸುವವಳೆ ತಾಯಿ.

ಪುರುಷನೆ ಗೃಹದ ಸರ್ವಾಧಿಕಾರಿಯೆಂಬ ಭಾವನೆ ಗೃಹದ ಪ್ರಶಾಂತ ವಾತಾವರಣವನ್ನು ನಾಶಮಾಡಲೂ ಬಹುದು. ಪುರುಷಪ್ರಭುತ್ವ ಕುಟುಂಬಗಳಲ್ಲಿ ಪುರುಷನೆ ಸಾಮಾನ್ಯವಾಗಿ ದುಡಿದು ಸಂಪಾದಿಸುವ ಜೀವಿಯಾದ್ದರಿಂದ ಸ್ತ್ರೀ ಪರಾವಲಂಬಿಯೆಂಬ ಅಭಿಪ್ರಾಯಕ್ಕೆ ಎಡೆಯುಂಟು. ಗೃಹ ಕೃತ್ಯಗಳಲ್ಲಿ ತೊಡಗಿರುವ ಸ್ತ್ರೀಯ ಕೆಲಸಗಳ ಬಗ್ಗೆ ಮೌಲ್ಯಮಾಪನ ಮಾಡಲು ಸಾಧ್ಯವಿಲ್ಲ; ಆಕೆಯನ್ನು ವೇತನವಿಲ್ಲದ ಸೇವಕಿ

ಯೆಂದು ಪರಿಗಣಿಸಲಾಗಿದೆಯಲ್ಲದೆ, ಆಕೆಯು ಕೇವಲ ಗಂಡನ ದಾಸಿಯೆಂಬ ಭಾವನೆಯೂ ಉಂಟಾಗಿದೆ. ಗಂಡ–ಹೆಂಡಿರ ಜೀವನದಲ್ಲಿ ಅನೇಕ ಸಾಂಸಾರಿಕ ವಿಷಯಗಳೊಂದಿಗೆ ಲೈಂಗಿಕ ತುಷ್ಟಿಯೂ ಒಂದು ಅಂಶವಾಗಿರುವುದರಿಂದ ಸ್ತ್ರೀಯಲ್ಲಿ ಕಂಡುಬರುವ ನ್ಯೂನತೆಗಳು ಅಷ್ಟಾಗಿ ಕಾಣುವುದಿಲ್ಲ. ಗೃಹದ ಎಲ್ಲ ಕೆಲಸಗಳನ್ನೂ ಸ್ತ್ರೀಯೇ ನಿರ್ವಹಿಸುವುದರಿಂದ ಆಕೆಯಿಲ್ಲದೆ ಸಂಸಾರ ಸಾಗುವುದೇ ದುಸ್ತರವಾಗುತ್ತದೆ. ಒಂದು ವೇಳೆ ಸ್ತ್ರೀಯೇ ಸಂಪಾದಿಸುವವಳೆಂದು ತಿಳಿಯೋಣ: ಈ ಸಂದರ್ಭದಲ್ಲಿ ಸಹ ಪುರುಷನ ನ್ಯೂನತೆಗಳನ್ನು ಆತನು ನಿರ್ವಹಿಸಬಹುದಾದ ಗೃಹಕೃತ್ಯಗಳಿಂದ ತುಂಬಲಾಗುವುದಿಲ್ಲ. ಸ್ತ್ರೀ ಗೃಹಕೃತ್ಯದಿಂದ ಸಂತೃಪ್ತಳಾಗುತ್ತಾಳೆ, ಚೇತನ ಹೊಂದುತ್ತಾಳೆ, ತನ್ನ ವ್ಯಕ್ತಿತ್ವವನ್ನು ಪರಿಪೂರ್ಣಗೊಳಿಸಿಕೊಳ್ಳುತ್ತಾಳೆ. ಆಕೆ ತನ್ನ ಒಲವಿನಿಂದ ಗೃಹದಲ್ಲಿ ಶಾಂತಿಯುತ ವಾತಾವರಣವನ್ನು ಕಲ್ಪಿಸುತ್ತಾಳೆ; ಗೃಹದಲ್ಲಿ ತಾಯಿಗೆ ಮಗುವಿನಲ್ಲಿರುವ ಪ್ರೀತಿ ಒಂದು ವಿಶ್ವವನ್ನೇ ಸೃಷ್ಟಿಸುತ್ತದೆ.

ಮಾನವ ಜೀವನಸೌಂದರ್ಯವನ್ನು ಅರಿತ ಹೊರತು ಸಮಾಜದಲ್ಲಿ ಅವನಿಗೆ ಸ್ಥಾನವಿಲ್ಲವೆಂದು ದಾರ್ಶನಿಕ ಕಾನ್ಫ್ಯೂಷಿಯಸ್ ತಿಳಿಸುತ್ತಾನೆ. ಸಹೃದಯನಲ್ಲದ ಯಾವನಿಗೆ ಆಗಲಿ ಗೃಹದಲ್ಲಿ ಸ್ಥಾನವಿಲ್ಲವೆಂದು ಹೇಳಬಹುದು. ಮೆನ್ಸೀಯಸ್‌ನ ಪ್ರಕಾರ ತನ್ನ ಸರಳವಾದ ಶಿಶು ಸ್ವಭಾವವನ್ನು ಉಳಿಸಿಕೊಂಡಿರುವವನೆ ನೈತಿಕವಾಗಿ ಹಿರಿಯನೆನಿಸಿಕೊಳ್ಳಬಲ್ಲನು. ಯಾವನಿಗೆ ಆಗಲಿ ತಾಯಿಯ ಮಡಿಲಲ್ಲಿ ಕುಳಿತು ಬೆಳೆದ ದಿನಗಳನ್ನು ನೆನೆದರೆ ತಾಯಿಗಿಂತ ಬೇರೆ ದೇವರಿಲ್ಲವೆಂಬ ಕಲ್ಪನೆಯು ಉಂಟಾಗುವುದು.

## ಸ್ತ್ರೀಯರು ಹಾಗೂ ಉದ್ಯೋಗಗಳು

ಎರಡನೆಯ ಮಹಾ ಯುದ್ಧದ (1939–45) ತರುವಾಯ ಸ್ತ್ರೀಯರಿಗೆ ಮತ್ತು ಪುರುಷರಿಗೆ ಪ್ರತ್ಯೇಕವಾಗಿ ವಿಭಾಸಲಾದ ಉದ್ಯೋಗಗಳಾವೂ ಇಲ್ಲ. ಸಮಾಜದ ಎಲ್ಲ ಕ್ಷೇತ್ರಗಳಲ್ಲಿಯೂ ಅವರು ಉದ್ಯೋಗಗಳಲ್ಲಿ ನೇಮಕವಾಗುತ್ತಿದ್ದಾರೆ. ಆಂಬುಲೆನ್ಸ್ ಚಾಲಕರು, ದಾಯಿಗಳು, ವೈದ್ಯರು ಮೊದಲಾದವರನ್ನು ಸ್ತ್ರೀ–ಪುರುಷರಿಬ್ಬರಿಂದಲೂ ಆರಿಸಿಕೊಳ್ಳುತ್ತಾರೆ. ಸ್ತ್ರೀಯರು ಪುರುಷರಷ್ಟೇ ಚತುರರಾದ ವಿಮಾನಚಾಲಕರಾಗಿದ್ದಾರೆ. ನಾವೆಯನ್ನು, ರೈಲು, ಮೋಟಾರು, ಟ್ರಕ್ಕು ಮೊದಲಾದ ವಾಹನಗಳನ್ನು ನಡೆಸುತ್ತಾರೆ. ಪೋಲೀಸು ದಳಗಳಲ್ಲಿಯೂ ಕೆಲಸಮಾಡುತ್ತಾರೆ. ಇಂಥ ಕೆಲಸಗಳಿಗೆ ಸ್ತ್ರೀ ಅಸಮರ್ಥಳೆಂದು ಹಿಂದೆ ಭಾವಿಸಲಾಗಿತ್ತು. ಬೇಟೆಯಾಡುವುದು ಮರ ಕಡಿಯುವುದು, ಹವಳಗಳಿಗಾಗಿ ಸಮುದ್ರದ ತಳಕ್ಕೆ ಹೋಗುವುದು ಮುಂತಾದ ಕಷ್ಟಕರವಾದ ಕೆಲಸಗಳನ್ನು ಸ್ತ್ರೀಯರು ಮಾಡುವುದನ್ನು ನಿಷೇಧಿಸಲಾಗಿತ್ತು. ಆದರೂ ಸಹ ಸ್ತ್ರೀಯರನ್ನು ಕೈಗಾರಿಕಾ ಕ್ರಾಂತಿಯ ದಿನಗಳಲ್ಲಿ ಗಣಿಗಳಲ್ಲಿ ಕೆಲಸಮಾಡಲು ಕಳುಹಿಸತೊಡಗಿದರು. ಪಿಂಗಾಣಿ ಮತ್ತು ಗಾಜಿನ ಕಾರ್ಖಾನೆಗಳಲ್ಲಿ ಕೆಲಸಮಾಡು

ವುದು ಸ್ತ್ರೀಯರ ಮಟ್ಟಿಗಂತೂ ಆರೋಗ್ಯಕ್ಕೆ ಹಾನಿಕರವಾದುದಾಗಿತ್ತು. ಕಾನೂನು ಬಾಲಕರನ್ನು ಹಾಗೂ ಸ್ತ್ರೀಯರನ್ನು ಇಂಥ ಕೆಲಸಗಳಿಗೆ ನೇಮಿಸುವುದನ್ನು ನಿಷೇಧಿಸ ದಿದ್ದರೆ ಪುರುಷರಂತೆ ಸ್ತ್ರೀಯರನ್ನು ಸಹ ಆ ಕೆಲಸಗಳಿಗೆ ನೇಮಿಸಿಕೊಳ್ಳಲು ಯಾವ ನಿರ್ಬಂಧವೂ ಇರುತ್ತಿರಲಿಲ್ಲ. ಸೈನ್ಯದಲ್ಲಿ ಪೂರ್ಣಭಾರದ ಮದ್ದು ಗುಂಡುಗಳನ್ನು ಬೆನ್ನಮೇಲೆ ಹೊತ್ತು ದೂರ ನಡೆಯಬಲ್ಲ ಸಾಮರ್ಥ್ಯ ಪುರುಷರಿಗೆ ಮಾತ್ರ ಇದೆ ಯೆಂಬ ಅಭಿಪ್ರಾಯವಿತ್ತು. ಯುದ್ಧರಂಗದಲ್ಲಿ ಪ್ರಾಣಾಪಾಯ ಹೆಚ್ಚಾದ ಕಾರಣ ಸ್ತ್ರೀಯರನ್ನು ಅಲ್ಲಿ ನೇಮಿಸಿಕೊಳ್ಳುತ್ತಿರಲಿಲ್ಲ. ಆದರೆ ಇಪ್ಪತ್ತನೆ ಶತಮಾನದ ಯುದ್ಧ ಪರಿಸ್ಥಿತಿಗಳು ಬದಲಾಗಿ ಯುದ್ಧರಂಗದಲ್ಲಿ ಎಷ್ಟು ಅಪಾಯವಿದೆಯೋ ಅಷ್ಟೇ ಅಪಾಯ ಪೌರ ಪ್ರದೇಶಗಳಿಗೂ ಇರುತ್ತದೆ. ಎರಡನೆಯ ವಿಶ್ವ ಯುದ್ಧದಲ್ಲಿ ಮಹಿಳೆ ಯರು ಯುದ್ಧಕಾಲದ ಚಟುವಟಿಕೆಗಳಲ್ಲಿ ಪುರುಷರಂತೆಯೇ ಭಾಗವಹಿಸಿದ್ದಾರೆ.

ಈಗ ಪುರುಷರಂತೆಯೇ ಸ್ತ್ರೀಯರೂ ಸಮಾಜದಲ್ಲಿ ವರ್ತಿಸುವುದನ್ನು ಕಾಣ ಬಹುದು. ಸ್ತ್ರೀಯ ಈ ಸಮಾನತೆಗೆ ಯಾವುದಾದರೂ ಅಡೆತಡೆ ಇದ್ದರೆ ಅದು ಕೇವಲ ಪುರುಷನ ಅಸೂಯೆ ಮತ್ತು ಸಾಂಪ್ರದಾಯಿಕ ಮನೋಭಾವವೇ ಎನ್ನ ಬಹುದು. ಎರಡನೆಯ ಮಹಾ ಯುದ್ಧದಲ್ಲಿ ರಷ್ಯಾ ದೇಶದ ಸ್ತ್ರೀಯರು ತಮ್ಮ ಮಾತೃಭೂಮಿಯನ್ನು ಹಿಟ್ಲರನ ಧಾಳಿಯಿಂದ ರಕ್ಷಿಸಲು ಸೈನ್ಯಗಳಿಗೆ ಸೇರಿ ಹೋರಾ ಡಿದ ವಿಷಯ ಸಾಮಾನ್ಯವಾದದ್ದೇನೂ ಅಲ್ಲ. ಪುರುಷರಂತೆ ಸ್ತ್ರೀಯರೂ ಕೂಡ ಇಂಥ "ಗೆರಿಲ್ಲಾ" ಯುದ್ಧ ರೀತಿಯಲ್ಲಿ ಬಂದೂಕ ಮತ್ತು 'ಗ್ರೈನೇಡ್'ಗಳನ್ನು ಉಪಯೋಗಿಸತೊಡಗಿದ್ದಾರೆ. ಕಳೆದ ಮೂವತ್ತು ವರುಷಗಳಲ್ಲಿ ರಷ್ಯಾದೇಶ ಸ್ತ್ರೀ ವಿಮಾನ ಚಾಲಕರನ್ನು ತಯಾರುಮಾಡಿದಷ್ಟು ಬೇರೆ ಯಾವ ದೇಶವೂ ತಯಾರು ಮಾಡಿಲ್ಲ. ಸ್ತ್ರೀಯರು ಅತ್ಯುತ್ತಮ ಈಜುಗಾರರು, ಹಾಗೂ ಕ್ರೀಡಾಪಟುಗಳಾಗಿ ದ್ದಾರೆ. ವೈಜ್ಞಾನಿಕ ಸಂಶೋಧನೆಗಳಲ್ಲಿ ಹಾಗೂ ಸಂಶೋಧನಾ ಕೇಂದ್ರಗಳಲ್ಲಿ ಪುರುಷರಿಗೆ ಸಮಾನರಾಗಿ ನಿಂತು ಸ್ತ್ರೀಯರು ಸ್ತುತ್ಯಾರ್ಹ ಸೇವೆ ಸಲ್ಲಿಸುತ್ತಿದ್ದಾರೆ. ನನಗೆ ತಿಳಿದಿರುವ ಮಟ್ಟಿಗೆ ರಷ್ಯಾ ದೇಶವು ಮಾತ್ರ ಭೂಗರ್ಭಶಾಸ್ತ್ರ ಸರ್ವೇಕ್ಷಣೆ ಮತ್ತು ಪ್ರಾಯೋಗಿಕ ವ್ಯವಸಾಯ ಇಲಾಖೆಗಳಲ್ಲಿ ಪ್ರಪ್ರಥಮವಾಗಿ ಸ್ತ್ರೀಯರನ್ನು ನೇಮಿಸಿಕೊಂಡಿದ್ದಿತು. ಅಲ್ಲಿ ಕೆಲವು ವರುಷಗಳ ಹಿಂದೆ ಹಿರಿಯ ವ್ಯವಸಾಯ ನಿರ್ದೇ ಶಕರಾಗಿದ್ದವರೂ ಸ್ತ್ರೀಯೆ. ಶಿಲ್ಪಕಲೆ, ವಾಸ್ತುಶಿಲ್ಪ, ಇಂಜನಿಯರಿಂಗ್ ಮುಂತಾದ ಉದ್ಯೋಗಗಳಲ್ಲಿ ಸ್ತ್ರೀಯರನ್ನು ದೂರವಿಡುವ ಯಾವ ಪ್ರತಿಬಂಧಕವೂ ಈಗಿಲ್ಲ. ಕ್ಷೌರ ಮಾಡುವುದು, ಬಟ್ಟೆ ಒಗೆಯುವುದು, ಕುಂಬಾರ ಕೆಲಸ, ನೇಯ್ಗೆ, ಮನೆ ರಿಪೇರಿ, ಅಡಿಗೆ ಮುಂತಾದ ಕೆಲಸಗಳಲ್ಲಿ ಸ್ತ್ರೀ ಪುರುಷರೀರ್ವರೂ ಸಮನಾಗಿ ಪಾಲ್ಗೊಳ್ಳುತ್ತಿ ದ್ದಾರೆ. ಇದರಿಂದಾಗಿ ಯಾವುದೇ ಕೆಲಸ ಸ್ತ್ರೀ ಪುರುಷರಿಗೇ ಮೀಸಲೆಂಬುದಾಗಿ ಹೇಳುವುದು ಕಷ್ಟ. ಹಾಗೇನಾದರೂ ಕೆಲಸಗಳ ಬಗ್ಗೆ ಯಾವ ಜನಾಂಗದಲ್ಲಿಯೇ ಆಗಲಿ ವರ್ಗೀಕರಣವಿರುವ ಪಕ್ಷದಲ್ಲಿ ಅದನ್ನು ಸ್ತ್ರೀ ಪುರುಷರ ಸ್ವಾಭಾವಿಕ ಇಲ್ಲವೆ

ಆಧ್ಯಾತ್ಮಿಕ ಗುಣಗಳ ಆಧಾರದ ಮೇಲೆ ಮಾಡಿದ ವರ್ಗೀಕರಣವೆಂದು ಭಾವಿಸ ಲಾಗುವುದಿಲ್ಲ.

ಸೃಷ್ಟಿ ಸಾಮರ್ಥ್ಯ ಪುರುಷರಿಂದ ಚಿಲುಮೆಗೊಳ್ಳುತ್ತದೆ ಎಂದು ವಾದಿಸುವವರೂ ಇದ್ದಾರೆ. ಜಗತ್ತಿನ ಹಿರಿಯ ಧರ್ಮಗಳು ಪುರುಷರ ಹೃದಯದಲ್ಲಿ ವಿಕಾಸಗೊಂಡು ವೆಂದು ಅವರು ಹೇಳುತ್ತಾರೆ. ಹಾಗೆಯೆ ಕಲೆ, ಅನ್ವೇಷಣೆ, ಸಂಶೋಧನೆ ಮುಂತಾ ದವು ಪುರುಷನ ಪ್ರತಿಭೆ ಹಾಗೂ ಕ್ರಿಯಾಶಕ್ತಿಯಿಂದ ಸಾಧ್ಯವೆಂದು ಭಾವಿಸುತ್ತಾರೆ. ವಿವಿಧ ಬಳಕೆ ವಸ್ತುಗಳ ತಯಾರಿಕೆ, ನೇಯ್ಗೆಯಲ್ಲಿನ ವೈವಿಧ್ಯ ಮೊದಲಾದವು ಪುರುಷನ ರಚನಾತ್ಮಕ ಶಕ್ತಿಯಿಂದಲೆ ಎಂಬ ನಂಬಿಕೆಯಿದೆ. ಈ ರಚನಾತ್ಮಕ ಶಕ್ತಿಯಲ್ಲಿ ಎಲ್ಲ ಕಲೆಗಳ, ಸಕಲ ಶಾಸ್ತ್ರಗಳ, ಸಂಶೋಧನೆಗಳ, ಧರ್ಮ ಹಾಗೂ ವಿಜ್ಞಾನಗಳ ಮೂಲವಿದೆ ಎಂದು ಸಮರ್ಥಿಸುತ್ತಾರೆ.

ಈ ರೀತಿಯ ವಿಚಾರಸರಣಿಯಲ್ಲಿ ನಾವು ಎರಡು ಅಂಶಗಳನ್ನು ಕಾಣಬಹುದು. ಮೊದಲನೆಯದಾಗಿ ರಚನಾತ್ಮಕ ಶಕ್ತಿಯುಳ್ಳವರು ಕೆಲವರೇ ಆಗಿರುತ್ತಾರೆ. ಯಂತ್ರ ಯುಗದಲ್ಲಿ ದೈಹಿಕಶಕ್ತಿಯ ಮೌಲ್ಯ ಕಡಿಮೆಯಾಗಿದೆ. ಎರಡನೆಯದಾಗಿ ವ್ಯಕ್ತಿಯಲ್ಲಿ ಸ್ತ್ರೀ ಪುರುಷರ ಗುಣಗಳು ಒಟ್ಟಿಗೆ ಕಾಣಿಸಿಕೊಳ್ಳುತ್ತವೆ. ಯಾವುದು ಸ್ತ್ರೀ ಸಹಜ ವಾದ ಶಕ್ತಿ, ಯಾವುದು ಪುರುಷ ಸ್ವಭಾವದ ಶಕ್ತಿ ಎಂದು ತಿಳಿಯದಷ್ಟು ಮಟ್ಟಿಗೆ ಮನುಷ್ಯನ ವ್ಯಕ್ತಿತ್ವ ರೂಪಿತವಾಗಿದೆ. ಸ್ತ್ರೀಯ ಮೃದುತ್ವ, ಪುರುಷನ ಕಾಠಿಣ್ಯ, ಸ್ತ್ರೀಯ ಚಂಚಲತೆ, ಪುರುಷನ ಸ್ಥಿರ ಪ್ರವೃತ್ತಿ ಇಂಥ ಗುಣಗಳೆಲ್ಲ ಮನುಷ್ಯನ ವ್ಯಕ್ತಿತ್ವ ದಲ್ಲಿ ಅಡಕವಾಗಿವೆ. ಆದರೆ ವ್ಯಕ್ತಿಯಲ್ಲಿ ಈ ಸ್ತ್ರೀ–ಪುರುಷ ಲಕ್ಷಣಗಳೆರಡೂ ಸಮನಾಗಿರುತ್ತವೆಯೆಂದು ದೃಢಪಡಿಸುವ ಯಾವುವೇ ಆಧಾರಗಳು ನಮಗೆ ದೊರಕು ವಂತಿಲ್ಲ. ಸಾಮಾನ್ಯವಾಗಿ ಸ್ತ್ರೀಯರಿಗಿಂತ ಪುರುಷವರ್ಗದಲ್ಲಿ ಈ ಗುಣಗಳು ಸರಿ ದೂಗಿವೆಯೆಂದೇ ಹೇಳಬಹುದು. ದೈಹಿಕವಾಗಿ ಪುರುಷರಿಗಿಂತ ಸ್ತ್ರೀಯರು ಹೆಚ್ಚು ಲೈಂಗಿಕ ಆಸಕ್ತಿಯುಳ್ಳವರಾಗಿರುತ್ತಾರೆ.

ಸಮಾಜದ ಮುಖ್ಯಲಕ್ಷಣ ವ್ಯಕ್ತಿಗಳ ಪರಸ್ಪರ ಸಂಪರ್ಕ ಮತ್ತು ಸಹಕಾರ ಜೀವನವಾಗಿದೆ. ಸಾಮಾಜಿಕ ವ್ಯವಹಾರಗಳಲ್ಲಿ ಸ್ತ್ರೀಯ ಪಾತ್ರ ಹಿಂದಿನಿಂದಲೂ ನಿರ್ದಿಷ್ಟವಾಗಿದೆ. ಯುದ್ಧ ಮತ್ತು ಬೇಟೆಯ ಅವಶ್ಯಕತೆ ಇತಿಹಾಸಪೂರ್ವ ಮಾನವ ರನ್ನು ಒಟ್ಟುಗೂಡಿಸಿ ಸಮುದಾಯದ ಕ್ರಿಯೆಗಳಲ್ಲಿ ಭಾಗವಹಿಸುವಂತೆ ಮಾಡಿದಾಗ ಸ್ತ್ರೀಯ ಕರ್ತವ್ಯಗಳೂ ಕ್ಲುಪ್ತವಾದವು. ಆದಿ ಸಮಾಜಗಳ ಚಟುವಟಿಕೆಗಳಲ್ಲಿ ಪುರುಷರೇ ನಿಯಮಿತ ಕಾರ್ಯಗಳನ್ನು ವಹಿಸಿಕೊಂಡು ವ್ಯವಸ್ಥಿತ ಪ್ರಯತ್ನಗಳಲ್ಲಿ ಅಭಿವೃದ್ಧಿ ಹೊಂದತೊಡಗಿದರು. ಈ ಕಾರ್ಯ ವಿಭಜನೆಯಲ್ಲಿ ಮನೆಯೆ ಸ್ತ್ರೀಯರ ಕಾರ್ಯಕ್ಷೇತ್ರವಾಯಿತು.

ಆದರೆ, ಇಂದಿನ ಪರಿಸ್ಥಿತಿಗಳು ಕುಟುಂಬದ ರಚನೆಯನ್ನೆ ಪರಿವರ್ತಿಸಿವೆ. ಕುಟುಂಬದ ಕೆಲಸಗಳಲ್ಲಿ ಸ್ತ್ರೀ–ಪುರುಷರು ಸಮನಾಗಿ ಭಾಗವಹಿಸುವುದನ್ನು ಇಂದಿನ

ಸಮಾಜದಲ್ಲಿ ಕಾಣುತ್ತೇವೆ. ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಅವಶ್ಯ
ಕತೆಗಳ ತುಷ್ಟಿಗಾಗಿ ಸ್ತ್ರೀಪುರುಷರು ಶ್ರಮಿಸುತ್ತಾರೆ. ಉತ್ತಮ ಆದರ್ಶ, ಆಕಾಂಕ್ಷೆ
ಮತ್ತು ಗಾಢ ನಂಬಿಕೆಗಳ ಮೂಲಕ ಜೀವನ ಸುಗಮಗೊಳ್ಳುವುದೆಂದು ಆಧುನಿಕ
ಪರಿಸ್ಥಿತಿಗಳು ತೋರಿಸಿಕೊಟ್ಟಿವೆ. ಸ್ತ್ರೀ–ಪುರುಷರಿಬ್ಬರಿಗೂ ಸಮಾಜದ ಎಲ್ಲ ಕ್ಷೇತ್ರ
ಗಳಲ್ಲಿ ಸಮಾನಾವಕಾಶವಿರುವ ಈ ಕಾಲದಲ್ಲಿ ಸಹಕಾರ ಮತ್ತು ಪರಸ್ಪರ ಅರಿವು
ಮುಖ್ಯ. ಚಲನ ಸ್ವಾತಂತ್ರ್ಯವಿರುವ ಸ್ತ್ರೀಗೆ ಆಧುನಿಕ ಪರಿಸ್ಥಿತಿಯಲ್ಲಿ ತಾಯ್ತನವು
ಸಮಸ್ಯೆಯಾಗಿಲ್ಲ. ಆಕೆ ಉದ್ಯಮನಿರತ ಮಹಿಳೆಯಾದರೂ, ಹೊರಗಿನ ಚಟುವಟಿಕೆ
ಗಳಿಂದ ಆಕೆಯ ಗೃಹಕೃತ್ಯಗಳಿಗೆ ಅಡ್ಡಿಯುಂಟಾಗಿಲ್ಲ.

ಆದುದರಿಂದ ಎಂದಿಗಿಂತಲೂ ಇಂದು ಸ್ತ್ರೀಗೆ ಹೆಚ್ಚಿನ ಗೌರವಾದರಗಳು ಸಿಕ್ಕಿವೆ
ಯಲ್ಲದೆ ನಾನಾ ಕ್ರಿಯಾತ್ಮಕ ಕ್ಷೇತ್ರಗಳಲ್ಲಿ ಪ್ರತಿಭೆಯನ್ನು ತೋರಲು ಆಕೆಗೆ ಉತ್ತೇಜನ
ದೊರಕುತ್ತಿದೆ. ತಮ್ಮ ತಲೆಮಾರಿನಲ್ಲಿಯೆ ತಮಗೆ ದೊರಕುವ ಅವಕಾಶಗಳನ್ನು
ಪಡೆದುಕೊಂಡು ಸ್ತ್ರೀಯರು ದಕ್ಷತೆಯಿಂದ ಕೆಲಸಮಾಡುತ್ತಿರುವುದನ್ನು ನಾವು ನೋಡು
ತ್ತಿದ್ದೇವೆ. ಇಂದಿನ ದಿನಗಳಲ್ಲಿ ಯಾವ ಕೆಲಸಕ್ಕೇ ಆಗಲಿ ಲೈಂಗಿಕ ಭೇದವಿಲ್ಲ.
ನಾಗರೀಕತೆಯ ಗತಿಯೆ ಬದಲಾಗುತ್ತಿರುವ ಈ ಕಾಲದಲ್ಲಿ ಮೇಲು–ಕೀಳುಗಳೆಂಬ
ಭಾವನೆಯಿಲ್ಲದೆ ಸ್ತ್ರೀ–ಪುರುಷರಿಬ್ಬರೂ ಕೆಲವೊಂದು ಕೆಲಸಗಳನ್ನು ದಕ್ಷತೆಯಿಂದ ಮಾಡ
ಬಹುದಾಗಿದೆ. ಬುದ್ಧಿವಂತಿಕೆಯ ಸೂಕ್ಷ್ಮ ಪರೀಕ್ಷೆಗಳಲ್ಲಿ ಸ್ತ್ರೀಯರು ಪುರುಷರಷ್ಟೆ
ಜಾಣತನವನ್ನು ತೋರಿಸುತ್ತಿದ್ದಾರೆ. ಸ್ತ್ರೀಯರು ವಿಜ್ಞಾನ, ಕಲೆ, ಸಾಹಿತ್ಯ ಮೊದ
ಲಾದ ವಿಷಯಗಳಲ್ಲಿ ಮುಂದುವರಿಯಲು ಸಾಧ್ಯವಿಲ್ಲವೆಂಬ ಅಭಿಪ್ರಾಯದ ಖಂಡನೆಗೆ
ಇದೊಂದು ದೃಷ್ಟಾಂತವೆ ಸಾಕು. ಹಿಂದೆ ಏನಾದರೂ ಪುರುಷರು ಮಾಡುವ ಕೆಲಸ
ಗಳಿಗೆ ಸ್ತ್ರೀಯರು ಅನರ್ಹರೆಂದು ಭಾವಿಸಿದ್ದರೆ ಅದು ಕೇವಲ ಮೂಢ ಭಾವನೆಯೆ
ಹೊರತು ಬೇರೇನೂ ಅಲ್ಲ. ಹಿಂದೆ ಸ್ತ್ರೀಯರನ್ನು ಯಾವ ಕೆಲಸಕ್ಕೂ ಉಪಯೋಗ
ವಿಲ್ಲದವರೆಂದು ಮೂಲೆಗೆ ಕೂರಿಸಿದ್ದವರೂ ಪುರುಷರೆ, ಈಗ ಅವರು ಪ್ರಗತಿಹೊಂದು
ತ್ತಿರುವುದನ್ನು ಕಂಡು ಅಸೂಯೆಪಡುತ್ತಿರುವವರೂ ಪುರುಷರೆ.

ಸ್ತ್ರೀ–ಪುರುಷರನ್ನು ಕೆಲಸಗಳಿಗೆ ನೇಮಿಸಿಕೊಳ್ಳುವ ಸಂಬಂಧದಲ್ಲಿ ಸ್ತ್ರೀಯರ
ಕೆಲಸ ಕೆಳಮಟ್ಟದ್ದೆಂಬ ನೆಪದಿಂದ ಅವರಿಗೆ ಕಡಮೆ ವೇತನ ಕೊಡಬೇಕೆಂಬ ನಿಲುವನ್ನು
ಮುಂದುವರಿದ ದೇಶಗಳಲ್ಲಿ ಒಪ್ಪುವುದಿಲ್ಲ. ಸ್ತ್ರೀ ಪರಿಶ್ರಮವನ್ನು ಪಡೆದುಕೊಳ್ಳುವ
ದೇಶಗಳಲ್ಲಿ ವಿವಾಹಿತ ಸ್ತ್ರೀಯರು ಕುಟುಂಬದ ಆರ್ಥಿಕ ಮಟ್ಟವನ್ನು ಹೆಚ್ಚಿಸಿಕೊಳ್ಳಲು
ಪುರುಷರಂತೆ ತಾವೂ ದುಡಿಯುತ್ತಾರೆ. ಅಂತಹ ಸಂದರ್ಭಗಳಲ್ಲಿ ಉದ್ಯೋಗನಿರತ
ಮಹಿಳೆ ಕೆಲಸದ ಸ್ವಭಾವ ಮತ್ತು ವೇತನಗಳನ್ನು ಗಮನಿಸದೆಯೆ ತನ್ನ ಸೇವೆಗೆ ದೊರೆ
ಯುವ ಸಂಬಳದಿಂದಲೆ ತೃಪ್ತಿಹೊಂದಿ ದುಡಿಯುತ್ತಾಳೆ. ಆದಾಗ್ಯೂ ತಾನೇ ಕುಟುಂಬದ
ಆಧಾರಸ್ತಂಭವೆಂದು ಹೇಳಿಕೊಳ್ಳದೆ ತನ್ನ ಆದಾಯ ಕುಟುಂಬದ ಆದಾಯದಲ್ಲಿ ಒಂದು
ಭಾಗ ಮಾತ್ರವೆಂದು ತಿಳಿಯುತ್ತಾಳೆ. ಅವಿವಾಹಿತ ಸ್ತ್ರೀಯರು ಉದ್ಯೋಗಗಳಿಗೆ

ಹೋಗುವುದು ಸ್ವಾವಲಂಬನೆಗೆ ಮಾತ್ರ. ಆಧುನಿಕ ಸುವ್ಯವಸ್ಥಿತ ಸಮಾಜದಲ್ಲಿ ಸ್ತ್ರೀ ತಾನೆ ಕುಟುಂಬದ ಆಧಾರವೆಂದು ತಿಳಿಯುವುದು ಅಪೂರ್ವ. ಪಾಶ್ಚಾತ್ಯ ದೇಶಗಳಲ್ಲಿ ವಿಧವೆಯರು, ವಿವಾಹವಿಚ್ಛೇದನ ಪಡೆದ ಸ್ತ್ರೀಯರು ಹಾಗೂ ಕುಟುಂಬ ಬಿಟ್ಟ ಸ್ತ್ರೀಯರು ಹೆಚ್ಚಾಗಿ ಉದ್ಯಮನಿರತರಾಗಿದ್ದಾರೆ.

ಸ್ತ್ರೀ ಪುರುಷರು ಕೆಲಸಗಳಿಗೆ ಹೆಚ್ಚಾಗಿ ಸಿಗುವಾಗ ಸ್ತ್ರೀ ಕಾರ್ಮಿಕರು ಕಡಿಮೆ ವೇತನಕ್ಕೆ ಬರುವುದು ಸ್ವಾಭಾವಿಕವೆ ಆಗಿದೆ. ಕಡಿಮೆ ವೇತನದ ಕಾರಣ ಸ್ತ್ರೀಯರು ಕೆಲಸದಿಂದ ಕೆಲಸಕ್ಕೆ ಬದಲಾಗುವ ಸಾಧ್ಯತೆಯುಂಟು; ಅಲ್ಲದೆ ಅವಿವಾಹಿತ ಸ್ತ್ರೀಯರು ವಿವಾಹವಾದ ಮೇಲೆ ಕೆಲಸವನ್ನು ಬಿಟ್ಟು ಗಂಡನ ಮನೆಯನ್ನು ಸೇರುವ ಸಂದರ್ಭಗಳೂ ಹೆಚ್ಚು. ಉದ್ಯಮನಿರತ ಮಹಿಳೆಯರಿಗೆ, ಪ್ರಕೃತಿಗೆ ಅನುಗುಣವಾಗಿ ಹೆಚ್ಚು ರಜೆಯನ್ನು ನೀಡಲಾಗುವುದು. ಸ್ತ್ರೀಯರು ಒಂಟಿಯಾಗಿದ್ದರೂ ಮನೆಯ ಕೆಲಸಗಳ ಕಾರಣ ವಿಶ್ರಮಿಸಿಕೊಳ್ಳಲು ಅವಕಾಶವಿಲ್ಲ. ಕೆಲಸಕ್ಕೆ ಸೇರಿಕೊಂಡ ನಂತರವೂ ಪುರುಷರಂತೆ ದುಡಿದು ಆರಾಮವಾಗಿರದೆ, ಮನೆಯ ಕೆಲಸಗಳನ್ನು ತಾವೇ ನಿರ್ವಹಿಸಬೇಕಾಗುತ್ತದೆ. ಹಿಂದೆ ಮನೆಗೆಲಸಗಳನ್ನೆಲ್ಲಾ ಸ್ತ್ರೀಯರು ತಾವೇ ನೋಡಿಕೊಳ್ಳಬೇಕಾಗಿದ್ದುದರಿಂದ ಅವರಿಗೆ ಗೃಹಕೃತ್ಯಗಳಿಂದ ಬಿಡುಗಡೆಯೆ ಇರಲಿಲ್ಲ. ಉದ್ಯೋಗಸ್ಥ ಮಹಿಳೆ ತನ್ನ ನೌಕರಿಯ ಜೊತೆಗೆ ಮನೆಯ ಕೆಲಸಗಳನ್ನೂ ನೋಡಿಕೊಳ್ಳಬೇಕಾಗಿತ್ತು.

ಸ್ತ್ರೀಯ ಚಟುವಟಿಕೆಗಳು ಗೃಹವಲ್ಲಿಯೇ ಕೇಂದ್ರೀಕರಿಸಿರುವುದರಿಂದ, ಆಕೆ ಮಕ್ಕಳ ಪೋಷಣೆ, ಮನೆಯ ವ್ಯವಸ್ಥೆ, ಅಡಿಗೆ ಮೊದಲಾದುವನ್ನು ತಾನೇ ನೋಡಿಕೊಳ್ಳಬೇಕಾದ ಪ್ರಯುಕ್ತ, ಇವುಗಳೆಲ್ಲ ಆಕೆಯ ಸಾಧನೆಗಳಿಗೆ ಅಡ್ಡಬರುವ ಸಾಧ್ಯತೆಗಳುಂಟು. ಆದರೆ ಸ್ತ್ರೀ ತನ್ನ ಸ್ವಭಾವಕ್ಕೆ ತಕ್ಕಂತೆ ವೈದ್ಯವೃತ್ತಿ, ನರ್ಸ್ ಕೆಲಸ, ಸಮಾಜ ಕಾರ್ಯಗಳು ಮೊದಲಾದ ಕೆಲಸಗಳಲ್ಲಿಯೂ, ಕುಶಲತೆ ಆವಶ್ಯಕವಾಗಿರುವ ಕಾರ್ಖಾನೆಗಳಲ್ಲಿ ಸೂಕ್ಷ್ಮ ಬಿಡಿಭಾಗಗಳನ್ನು ಜೋಡಿಸಬೇಕಾದ ರೇಡಿಯೋ ತಯಾರಿಕೆ, ಗಡಿಯಾರ ತಯಾರಿಕೆ ಕೆಲಸಗಳಲ್ಲಿಯೂ ಪುರುಷನನ್ನು ಮೀರಿಸುತ್ತಾಳೆ. ಈ ಕಾರಣದಿಂದಲೆ ಕಾರ್ಖಾನೆಗಳ ಮಾಲಿಕರು ಸ್ತ್ರೀಯರನ್ನು ಸುಲಭ ವೇತನಗಳಲ್ಲಿ ನೇಮಿಸಿಕೊಂಡು ಅವರಿಂದ ಹೆಚ್ಚು ಕೆಲಸ ಮಾಡಿಸುವುದುಂಟು. ಅಷ್ಟೇ ಅಲ್ಲದೆ ಸ್ತ್ರೀಯರು ಉನ್ನತ ಹುದ್ದೆಗಳಿಗೆ ಅರ್ಹರಾಗಿದ್ದರೂ ಅಂಥ ಹುದ್ದೆಗಳಿಗೆ ಅವರನ್ನು ನೇಮಿಸಿಕೊಳ್ಳುತ್ತಿರಲಿಲ್ಲ.

ಆದರೆ, ಸ್ತ್ರೀಯರು ತಮ್ಮ ಹಕ್ಕುಗಳನ್ನು ಸಾಧಿಸಿಕೊಂಡ ತರುವಾಯ ಅವರ ಕೆಲಸಗಳಿಗೆ ಸಮನಾದ ವೇತನಗಳು ದೊರಕಲಾರಂಭಿಸಿದುವು. ಉದ್ಯೋಗನಿರತ ಮಹಿಳೆಯರಿಗೆ ಅನೇಕ ಸೌಲಭ್ಯಗಳು ಏರ್ಪಟ್ಟಿವೆ. ಪುರುಷರಂತೆಯೇ ಸ್ತ್ರೀಯರು ಶಿಕ್ಷಣ ಹೊಂದುತ್ತಿದ್ದಾರೆ, ವಿದ್ಯಾವಂತರಾಗುತ್ತಿದ್ದಾರೆ, ಸರ್ಕಾರಿ ಹುದ್ದೆಗಳಲ್ಲಿಯೂ ಇತರ ಉದ್ಯಮಗಳಲ್ಲಿಯೂ ನೇಮಕವಾಗಿ ದಕ್ಷತೆಯಿಂದ ಕೆಲಸಮಾಡುತ್ತಿದ್ದಾರೆ. ಆಧುನಿಕ ಸಮಾಜದಲ್ಲಿ ಸ್ತ್ರೀ ಪುರುಷರು ಸಮಾನ ಹಕ್ಕುಗಳನ್ನು ಹೊಂದಿ ಉದ್ಯೋಗ

ಗಳಲ್ಲಿ ನೇಮಕವಾಗಿ ತಮ್ಮ ಆರ್ಥಿಕ ಸ್ಥಿತಿಗತಿಗಳನ್ನು ಉತ್ತಮಪಡಿಸಿಕೊಳ್ಳಲು ಶಕ್ತರಾಗಿದ್ದರೂ, ಸ್ತ್ರೀ ಸ್ವಾಭಾವಿಕವಾಗಿಯೆ ಪುರುಷನ ರಕ್ಷಣೆಯನ್ನು ನಿರೀಕ್ಷಿಸುತ್ತಾಳೆ. ಮಾನವನ ಪಾಲಿಗೂ ಸಹ, ಅವನ ಬಾಳಿನಲ್ಲಿ ಸ್ತ್ರೀ ಚೈತನ್ಯದಾಯಕಳಾಗಿ ಭಾಗವಹಿಸ ಬೇಕಾದರೆ ಅವನು ಆಕೆಯ ನೆರವನ್ನು ನಿರೀಕ್ಷಿಸುತ್ತಾನೆ. ದೇವರು ಅವಳನ್ನು ಕೇವಲ ಮಕ್ಕಳನ್ನು ಹೆತ್ತು ಸಾಕುವುದಕ್ಕಾಗಿ ಮಾತ್ರ ಆರಿಸಲಿಲ್ಲ; ಆಕೆಯಲ್ಲಿರುವ ಕರುಣೆ ಮತ್ತು ಒಲವನ್ನು ಪರಿಗಣಿಸಿ ಈ ಕರ್ತವ್ಯವನ್ನು ಆಕೆಗೆ ನಿರ್ವಹಿಸಿದ. ಸ್ತ್ರೀಯಲ್ಲಿ ಕಂಡುಬರುವ ಆದರ್ಶಗಳಿಗೆ ಗಮನಕೊಟ್ಟು ಆಕೆಯನ್ನು ಒಲಿಸಿಕೊಂಡು ಜೀವನವನ್ನು ಸಾಗಿಸುವುದು ಪುರುಷನ ಕೆಲಸವಾಗಬೇಕು. ಉದಾತ್ತ ಗುಣಗಳಿಲ್ಲದ ಸ್ತ್ರೀ, ಪುರುಷನ ಬಾಳನ್ನೇ ನಾಶಮಾಡಬಹುದು. ಮನುಷ್ಯನ ಜೀವನ ಬಹುಮಟ್ಟಿಗೆ ಉತ್ತಮ ಮಡದಿಯಿಂದ ಸುಖಮಯವಾಗುತ್ತದೆ.

ಸಂದರ್ಭಸೂಚಿ :


1. *Society* : R. M. Mac Iver and C. H. Page, 1955, Macmillan & Co., pp 519–540.
2. *Op. Cit.*, Mac Iver and Page, pp. 564–571.
3. *General Sociology* : Ed. by M. F. Nimkoff, 1957, Houghton Mifflin Co., pp. 62–65.
4. *Women and a New Society* : Dr. Charlotte Luetkens, p. 78, Nicholson & Watson, London, 1946
5. *Op. cit*, Charlotte Luetkens, p. 78.
6. *Basic Sociology* : Ross, E. J., The Bruce Publishing Co., 1953, pp. 169–180.
7. *Nature of the Family* : Carle C. Zimmerman, Sociological Bulletin, Indian Sociological Society, Bombay, Vol. II, No. 2, Sept. 1953, pp. 103–117.
8. *Sexual Behaviour of the American Female* : G S. Ghurye, Sociological Bulletin, Indian Sociological Society, Bombay, Vol. III, Sept. 1954, pp. 158–181.
9. *Changing Pattrons of Family Life* : K. N. Venkatarayappa, Journal of Mysore University, Vol. XX, No. 1, pp. 21–24, Sept. 1960.
10. *A Measure of Marital Satisfaction* : Nathan Hurvitz, Sociology and Social Research, Vol. 44, Nov.–Dec. 1959, No. 2, pp. 106-111.

11. *Family Impacts on Mental Health :* A. R. Mangus, Marriage and Family Living, Vol. XIX, No. 3, Aug. 1957, pp. 256–262.

12. *Marriage and Family in American Culture :* Andre G. Truxal and Francis E. Merill, Printile Hall Inc., 1957, pp. 271–280.

13. *Cultural Norms and Husbands and Wives* : Report of their Marital Partners, "Preferred frequency in coitus relative to their own", Socio-metrica, American Sociological Society, Vol. 21, No. 3, Sept. 1958, pp. 247–254.

14. *Social Problems*: by Rosenquist, New York, 1940, pp. 45-117.

15. *Community and Society*: Ferdin and Tonnies, Michigan, 1957, pp 151-153.

16. *Some Aspects of Marriage and Family*: K. N. Venkatarayappa, Journal of the Mysore University, Vol. XVI, No. 1, Sept., 1956.

17. *Society*: Mac Iver and Page, Macmillan and Co., 1955, pp. 267-274.

18. *Sexual Behavior of the American Female*: G. S. Ghurye, Sociological Bulletin, *Op Cit.*, pp. 158-182.

19. *Op. Cit.,*: Gloerfelt Tarp., p. 22.

## ಅಧ್ಯಾಯ ೭

# ಬದಲಾಗುತ್ತಿರುವ ಸಾಮಾಜಿಕ ಮೌಲ್ಯಗಳು

ಸಾಮಾನ್ಯವಾಗಿ ಒಂದು ವಸ್ತುವಿನ ಮೌಲ್ಯವನ್ನು ಅದರ ಉಪಯುಕ್ತತೆಯಿಂದ ನಿರ್ಧರಿಸುತ್ತೇವೆ. ವಸ್ತುವಿನ ಬೇಡಿಕೆಯ ಮೇಲೆ ಅದರ ಮೌಲ್ಯ ನಿಂತಿರುತ್ತದೆಂದು ಹೇಳಬಹುದು. ಇದೇ ರೀತಿ ಜೀವನದ ಆದರ್ಶಗಳ ಮೌಲ್ಯವು ಸಮಾಜದಲ್ಲಿ ಅವುಗಳಿಗಿರುವ ಮನ್ನಣೆಗೆ ಅನುಗುಣವಾಗಿರುತ್ತದೆ. ಈ ಆದರ್ಶಗಳಿಂದಲೆ ಸಮಾಜದ ಘನತೆಯೂ ಹೆಚ್ಚುತ್ತದೆ. ಜನರ ಮೂಲ ನಡವಳಿಕೆಗಳನ್ನು ಅರಿತ ಹೊರತು ಸಮಾಜದ ಸ್ಥೂಲ ಪರಿಚಯ ನಮಗೆ ಆಗಲಾರದು. ಮಕ್ಕಳ ಏಳಿಗೆ ಅವರಿಗೆ ಕೊಡುವ ಶಿಕ್ಷಣ, ಹಾಗೂ ಅವರು ಬೆಳೆಯುವ ಪರಿಸರದ ಮೇಲೆ ಅವಲಂಬಿಸಿರುತ್ತದೆ. ನಾವು ಅವರಿಗೆ ನೀಡುವ ದೈಹಿಕ, ಮಾನಸಿಕ ಹಾಗೂ ನೈತಿಕ ಶಿಕ್ಷಣದಿಂದ ಅವರು ಉತ್ತಮ ಪ್ರಜೆಗಳಾಗುತ್ತಾರೆ. ಇಲ್ಲವಾದರೆ ಬಾಲ್ಯದಲ್ಲಿ ಕಲಿತ ದುರಭ್ಯಾಸಗಳಿಂದ ಸಮಾಜಘಾತುಕರಾಗುತ್ತಾರೆ.

ಸಮಾಜವನ್ನು ದೀರ್ಘವಾಗಿ ಪರಿಶೋಧಿಸಿದ ಹೊರತು ಅದರ ಅನೇಕ ವಿಷಯಗಳು ಬಿಡಿಸಲಾಗದ ಸಮಸ್ಯೆಯಾಗಿ ಕಾಣುತ್ತವೆ; ಸಮಾಜದ ಸದಸ್ಯರಾದ ಸ್ತ್ರೀ ಪುರುಷರ ಸ್ವಭಾವ ಹಾಗೂ ವರ್ತನೆಗಳನ್ನು ಅರ್ಥಮಾಡಿಕೊಳ್ಳುವುದೆ ಕಷ್ಟವಾಗುತ್ತದೆ.

ಸ್ತ್ರೀಯ ವ್ಯಕ್ತಿತ್ವವನ್ನು ತಿಳಿಯುವುದು ಸುಲಭವಲ್ಲ; ಆಕೆಯನ್ನು ಹಟಮಾರಿಯೆಂದು ಭಾವಿಸಿದರೆ ಆಕೆ ಹಾಗೆಯೇ ನಮಗೆ ಕಾಣಿಸಿಕೊಳ್ಳುತ್ತಾಳೆ; ಆಕೆಯ ದೇಹರಚನೆಯೇ ನಾಚಿಕೆಗೊಳಿಸುವಂತಹುದೆಂದು ನಿಂದಿಸಿದಾಗ ಆಕೆ ತನ್ನ ದೇಹವನ್ನು ಪೂರ್ಣವಾಗಿ ಮುಚ್ಚಿಕೊಂಡು ನಾವೇ ನಾಚಿಕೊಳ್ಳುವಂತೆ ಮಾಡುತ್ತಾಳೆ. ಪುರುಷನ ಕಡೆಗಣಿಸುವ ಮನೋಭಾವ ಅವನ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತದೆಂದು ಹೇಳಬಹುದು. ಸ್ತ್ರೀ, ಪುರುಷನಿಗಿಂತ ಕೀಳು, ಆಕೆ ಅವನ ಸಮಾನಕ್ಕೆ ಬರಲಾರಳು ಎಂಬ ಅಭಿಪ್ರಾಯ ಎಷ್ಟರ ಮಟ್ಟಿಗೆ ನಿಜವೆಂಬುದು ಸ್ತ್ರೀಯ ಬಗ್ಗೆ ಸಮಾಜ ಹೊಂದಿರುವ ಕಲ್ಪನೆಯನ್ನು ನಿಷ್ಪಕ್ಷಪಾತವಾಗಿ ಪರಿಶೀಲಿಸಿದಾಗ ಮಾತ್ರ ಗೊತ್ತಾಗುತ್ತದೆ. ಸಮಾಜವು ಕಲ್ಪಿಸಿರುವ ಹಲವಾರು ಕಟ್ಟಳೆಗಳು ಹಾಗೂ ಸಂಪ್ರದಾಯಗಳು ಸ್ತ್ರೀಯ ಸ್ವಾತಂತ್ರ್ಯವನ್ನು ಹೋಗಲಾಡಿಸಿ ಅವಳ ಬಗ್ಗೆ ವಿಚಿತ್ರ ಭಾವನೆಗಳಿಗೆ ಅವಕಾಶ ಕಲ್ಪಿಸಿದುವು. ಸ್ತ್ರೀಯ ಪಾತಿವ್ರತ್ಯ ಮತ್ತು ಶೀಲಗಳಿಗೆ ಪ್ರಾಶಸ್ತ್ಯ ಕೊಡುವ ಸಮಾಜ ಪುರುಷನ ದುರಾಚಾರಗಳನ್ನು ಅಷ್ಟಾಗಿ ಗಮನಿಸುವುದಿಲ್ಲ. ಆಸ್ತಿಯ ವಿಭಜನೆ, ಗೃಹಾಡಳಿತ ಮೊದಲಾದ ವಿಷಯಗಳಲ್ಲಿ ಆಕೆಗೆ ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಉತ್ತಮ ಸ್ಥಾನವಿರಲಿಲ್ಲ. ಇಂಥ ಕಾರಣಗಳಿಂದ ಆಕೆ ಪುರುಷನಷ್ಟು ಉತ್ತಮ

ಸ್ಥಾನವನ್ನು ಪಡೆದುಕೊಳ್ಳದೆ ಹಿಂದುಳಿದಳು. ಪುರುಷನು ಪ್ರಕೃತಿಗೆ, ಇಲ್ಲವೇ ಪ್ರಕೃತಿ ಪುರುಷನಿಗೆ ಕೀಳೆಂಬ ಭಾವನೆ ಪೂರ್ವದಿಂದಲೂ ಇಲ್ಲ. ಪ್ರಕೃತಿಯೆ ಸೃಷ್ಟಿ-ಲಯಗಳಿಗೆ ಕಾರಣಳೆಂದು ಪ್ರಕೃತಿಪೂಜೆ ಹಿಂದಿನಿಂದಲೂ ಬಂದಿದೆ. ಸ್ತ್ರೀ ಕಳಂಕಿನಿ, ಹಟಮಾರಿ ಮುಂತಾದ ಕಲ್ಪನೆಗಳನ್ನು ಸಮಾಜ ಸೃಷ್ಟಿಸಿದೆಯೆ ಹೊರತು ಮತ್ತೇನಲ್ಲ; ಆಧುನಿಕ ಜೀವನದಲ್ಲಿ ಸ್ತ್ರೀ ಪುರುಷರು ಸಮನಾದ ಹಕ್ಕು ಬಾಧ್ಯತೆಗಳನ್ನು ಹೊಂದಿರುವಲ್ಲಿ ಸ್ತ್ರೀಯನ್ನು ಅವಹೇಳನ ಮಾಡುವ ಈ ಕಲ್ಪನೆಗಳಿಗೆ ಅವಕಾಶವೇ ಇಲ್ಲ. ಸಮಾಜದ ಅಂಗವಾದ ಕುಟುಂಬದಲ್ಲಿ ಪುರುಷನೇ ಕುಟುಂಬದ ಏಕೈಕ ಆಧಾರ ಮತ್ತು ಸ್ತ್ರೀ ಗೃಹದಲ್ಲಿ ಅವನನ್ನು ಆಶ್ರಯಿಸಿರುವ ಪರಾವಲಂಬ 'ಜೀವಿ' ಎಂಬ ಭಾವನೆಗಳು ನಾಶ ವಾಗಬೇಕಲ್ಲದೆ, ಚರ ಸ್ವತ್ತಿನಂತೆ ಆಕೆಯನ್ನು ಪರಿಗಣಿಸುವ ಮನೋಭಾವನೆ ಗಳನ್ನೂ ಕಿತ್ತೊಗೆಯಬೇಕು.

ಯಾವುದೇ ಸಮಾಜದ ಘನತೆಯನ್ನು ಅದರಲ್ಲಿ ಪ್ರಚಲಿತವಾಗಿರುವ ಜೀವನ ಮೌಲ್ಯಗಳಿಂದ ತಿಳಿದುಕೊಳ್ಳಬಹುದು. ಆ ಸಮಾಜದ ಸದಸ್ಯರ ಜೀವನ ಕ್ರಮ ಮತ್ತು ಧರ್ಮ ಈ ಸಾಮಾಜಿಕ ಮೌಲ್ಯಗಳ ಮೇಲೆ ನಿಂತಿರುತ್ತವಲ್ಲದೆ ಆ ಸಮಾಜದ ಕಾನೂನು ಗಳು ಕೂಡ ಈ ಮೌಲ್ಯಗಳಿಂದಲೇ ಸ್ಫೂರ್ತಿ ಹೊಂದಿ ರೂಪುಗೊಳ್ಳುತ್ತವೆ. ಕಾನೂನು ಸಮಾಜದ ಪದ್ಧತಿಗಳನ್ನು ಮತ್ತು ಸಂಪ್ರದಾಯಗಳನ್ನು ಕ್ರೋಢೀಕರಿಸಿ ಅವುಗಳಿಗೆ ಶಾಸನದ ಬಲವನ್ನು ಕೊಡುತ್ತದೆ. ಈ ಮೂಲಕ ಸಮಾಜ ಅದರ ಸದಸ್ಯರ ವೈಯಕ್ತಿಕ ಜೀವನ ಕ್ರಮ ಮತ್ತು ನೈತಿಕ ಮನೋವೃತ್ತಿಯನ್ನು ನಿಯಂತ್ರಿಸುತ್ತದೆ. ಅನಾದಿ ಕಾಲದಿಂದ ಸಮಾಜವು ಸ್ತ್ರೀಪುರರನ್ನು ಮೌಲ್ಯ ನಿರ್ಣಯಗಳಿಗೆ ಬದ್ಧರಾಗಿರುವಂತೆ ಮಾಡಿರುವುದಲ್ಲದೆ ಆ ಮೌಲ್ಯಗಳನ್ನು ಒಪ್ಪಿಕೊಳ್ಳುವಂತೆಯೂ ಮಾಡಿದೆ. ಸಮಾಜ ಅವರ ಮೇಲೆ ಆಜ್ಞೆಗಳನ್ನು ವಿಧಿಸುತ್ತಲೆ ಬಂದಿದೆ; ಅವರು ಅದನ್ನು ಪಾಲಿಸುತ್ತಲೆ ಬಂದಿದ್ದಾರೆ. ಮನುಷ್ಯ ತನ್ನ ಮಾರ್ಗದಲ್ಲಿ ಬರುವ ಅನುಭವಗಳನ್ನೆಲ್ಲಾ ಅರ್ಥ ಮಾಡಿಕೊಂಡಾಗ ಮಾತ್ರ ತನ್ನನ್ನು ತಾನು ರೂಪಿಸಿಕೊಳ್ಳಬಲ್ಲವನಾಗುತ್ತಾನೆ. ಅನುಭವಕ್ಕಿಂತ ಅತ್ಯುತ್ತಮ ಗುರು ಮತ್ತೊಂದಿಲ್ಲ. ಜೀವನದ ಹಾದಿಯಲ್ಲಿ ಬರುವ ಏರಿಳಿತಗಳನ್ನು ಧೈರ್ಯವಾಗಿ ಹಾಗೂ ಆತ್ಮಭರವಸೆಯಿಂದ ಎದುರಿಸಿ ಮುನ್ನಡೆ ದಾಗಲೆ ಅವನು ಜೀವನದ ಸಾರ್ಥಕತೆಯನ್ನು ಕಾಣುತ್ತಾನೆ. ವಿಜ್ಞಾನದ ಮುನ್ನಡೆ ಪುರಾತನ ಆದರ್ಶಗಳಿಗೆ ಸವಾಲಾಗಿರುವುದರಿಂದ ಅವನು ಆಧುನಿಕ ಪರಿಸ್ಥಿತಿಗಳನ್ನು ಗಮನಿಸಿ ಸಮಾಜದಲ್ಲಿ ಸ್ತ್ರೀಯ ಸ್ಥಾನವೇನೆಂಬುದನ್ನು ಪರಿಗಣಿಸಬೇಕು. ಸ್ತ್ರೀಯರ ಜಾಗೃತಿ ಮತ್ತು ಚಳುವಳಿ ವೈಜ್ಞಾನಿಕ ಪ್ರಗತಿಯಿಂದಲೇ ಆಗಿದೆ. ಇಂದಿನ ಸಮಾಜದಲ್ಲಿ ಸ್ತ್ರೀ ಕಂದಾಚಾರಗಳನ್ನು ಬದಿಗಿಟ್ಟು ಪುರುಷನು ಬಹುಕಾಲದಿಂದ ತನ್ನ ಮೇಲೆ ವಿಧಿಸಿದ್ದ ಕಟ್ಟಳೆಗಳಿಂದ ಬಿಡಿಸಿಕೊಳ್ಳಲು ಹೊರಟು, ಆ ಪ್ರಯತ್ನದಲ್ಲಿ ಯಶಸ್ವಿಯಾಗಿದ್ದಾಳೆ. ನೈತಿಕ ಮಟ್ಟಗಳನ್ನು ನಿರ್ಣಯಿಸುವ ಬಗ್ಗೆ ಸ್ತ್ರೀ ಪುರುಷರ ದೇಹ ರಚನೆಯನ್ನೇ ಪ್ರಧಾನವಾಗಿ ಪರಿಗಣಿಸುವುದನ್ನು ಸ್ತ್ರೀಯರು ವಿರೋಧಿಸುತ್ತಾರೆ. ತಮ್ಮ ಮೇಧಾಶಕ್ತಿ,

ಪ್ರತಿಭೆ, ಕ್ರಿಯಾಶಕ್ತಿ ಮೊದಲಾದ ಗುಣಗಳ ಪ್ರಕಟಣೆಗೆ ಲೈಂಗಿಕ ಭೇದ ಎಂದಿಗೂ ಅಡಚಣೆಯುಂಟುಮಾಡದೆಂಬುದು ಅವರ ಧೃಢವಾದ ನಂಬಿಕೆ. ಸ್ತ್ರೀಯೂ ದೇಶದ ಒಬ್ಬ ಪ್ರಜೆಯಾದ್ದರಿಂದ ಪುರುಷನೊಡನೆ ಸಮಾನ ಸ್ವಾತಂತ್ರ್ಯದಿಂದ ಜೀವಿಸಲು ಅವಳಿಗೆ ಹಕ್ಕಿದೆ. ಪುರುಷ ತಾನು ಗಂಡಸೆಂಬ ಕಾರಣದಿಂದ ಹೇಗೆ ಪ್ರವಿತ್ರನೆಂದು ಭಾವಿಸುವನೋ ಅದೇ ರೀತಿ ಸ್ತ್ರೀಯೂ ಕೂಡ ಭಾವಿಸಿ, ಅವನಂತೆಯೇ ಸಮಾಜದಲ್ಲಿ ಸ್ಥಾನ ಹೊಂದಿ ಅವನಂತೆಯೇ ಬಾಳಲು ಸಂವಿಧಾನ ಕೊಟ್ಟಿರುವ ಹಕ್ಕನ್ನು ವಿನಿಯೋಗಿಸಿಕೊಳ್ಳುತ್ತಿದ್ದಾಳೆ.

ಒಂದು ದೇಶದ ಆದರ್ಶಗಳು ಅದರ ಧರ್ಮವನ್ನು ವ್ಯಕ್ತಪಡಿಸುತ್ತವೆ. ಭಾರತದ ಸುಪ್ರಸಿದ್ಧ ದಾರ್ಶನಿಕ ಸರ್ವೆಪಲ್ಲಿ ರಾಧಾಕೃಷ್ಣನ್‌ರವರು ಹೇಳಿರುವಂತೆ, ನಾವು ಸರ್ವಶಕ್ತನಾದ ಭಗವಂತನನ್ನು ಅರಿತ ಹೊರತು ಅವನ ಸೃಷ್ಟಿಶಾಲೆಯಿಂದ ಹೊರಟ ಮಾನವನನ್ನು ಅರ್ಥಮಾಡಿಕೊಳ್ಳಲಾರೆವು. ಭಗವಂತನ ಹಲವಾರು ಹಿರಿಮೆಗಳಲ್ಲಿ ಆತನು ಸರ್ವಶಕ್ತನೆಂಬುದೂ ಒಂದು. ತನಗಿಂತಲೂ ಮೇಲಾದ ಅದ್ಭುತ ಶಕ್ತಿಯೊಂದಿದೆ ಎಂಬ ಸತ್ಯದ ಬೆಳಕಿನಲ್ಲಿ ಮಾನವ ತನ್ನ ಜೀವನವನ್ನು ಮತ್ತು ವಾತಾವರಣವನ್ನು ರೂಪಿಸಲು ಪ್ರಯತ್ನಿಸುವನು. ನಮ್ಮ ಜೀವನದ ಹೋರಾಟದಲ್ಲಿನ ಧೈರ್ಯ, ನಮ್ಮ ಆಶಾವಾದ ಮತ್ತು ನಮ್ಮ ಉನ್ನತ ಭಾವನೆಗಳ ಅಚ್ಚುಕಟ್ಟಿನಲ್ಲಿ ನಮ್ಮ ಮಾನವೀಯತೆ ನಿಂತಿದೆ. ಸ್ತ್ರೀಯಲ್ಲಿರಬಹುದಾದ ದೈವಿಕ ಗುಣಗಳ ಅರಿವು ಇಲ್ಲದಿದ್ದಲ್ಲಿ ಪುರುಷ ಆಕೆಯಲ್ಲಿರುವ ಮಾನವೀಯತೆಯನ್ನು ಗ್ರಹಿಸಲು ಶಕ್ತನಾಗಲಾರ.

ಯಾವ ರೀತಿ ಪ್ರಕೃತಿಯ ಬಗ್ಗೆ ಐತಿಹಾಸಿಕವಾಗಿ ಪುರುಷಭಾವನೆ ರೂಪಿಸಲ್ಪಟ್ಟಿದೆಯೋ ಅದೇ ರೀತಿ ಸ್ತ್ರೀಯ ಬಗ್ಗೆಯೂ ಪುರುಷಭಾವ ವ್ಯಕ್ತಪಟ್ಟಿರುವುದನ್ನು ನಾವು ಕಾಣಬಹುದು. ಪುರುಷರು ಸ್ತ್ರೀಯನ್ನು ಪ್ರಕೃತಿಯಂತೆ ಭಯಪ್ರೇರಕ ರಹಸ್ಯವೆಂದು ಪರಿಗಣಿಸುತ್ತಾರೆ. ಪುರುಷರು ಪ್ರಕೃತಿಯನ್ನು ನೋಡಿ ಆನಂದಿಸುವಂತೆ ಸ್ತ್ರೀಯನ್ನೂ ಮೋಹಿಸಿ ಆನಂದಿಸಿ ಕೊನೆಗೆ ಪ್ರಕೃತಿಯ ಘೋರಾಕಾರವನ್ನು ನೋಡಿ ಹೆದರುವಂತೆ ಸ್ತ್ರೀಯ ಉಗ್ರಸ್ವಭಾವ ಪ್ರದರ್ಶನವಾದಾಗ ಹೆದರುತ್ತಾರೆ. ದಾರ್ಶನಿಕರು ಪ್ರಪಂಚದ ಮಾಯೆಯಲ್ಲಿ ಸಂಸಾರ ಬಂಧನವೂ ಮಾಯೆಯ ಮುಸುಕೆಂದು ಭಾವಿಸಿ ಸ್ತ್ರೀಯನ್ನು ಅಲ್ಲಗಳೆದು ಸಂನ್ಯಾಸವೆ ಮೋಕ್ಷಸಾಧನೆಗೆ ಮಾರ್ಗವೆಂದರು.

ಪ್ರಕೃತಿಯನ್ನು ಉಗ್ರವಾಗಿ ಕಾಣುವವರ ಕಲ್ಪನಾಶಕ್ತಿ ಕೆಳಮಟ್ಟದೆಂದು ಹೇಳುತ್ತಾರೆ. ಉನ್ನತ ಧ್ಯೇಯ ಸಾಧನೆಗೆ ವಿರಕ್ತಭಾವನೆ ಅತ್ಯವಶ್ಯಕ. ಈ ಗುರಿಯ ಸಾಧನೆಗಾಗಿ ಸ್ತ್ರೀಯನ್ನು ವೈಯಕ್ತಿಕ ವಸ್ತುವಿನಂತೆ ಪರಿಗಣಿಸಬಾರದು. ನಾವು ಸ್ತ್ರೀಯರನ್ನು ಸಾಧಾರಣವಾಗಿ ಅನುರಾಗದ ಆಟದ ಬೊಂಬೆಗಳಂತೆ ಇಲ್ಲವೇ ತಿರಸ್ಕರಿಸಬಹುದಾದ ವಸ್ತುಗಳಂತೆ ಕಾಣುತ್ತೇವೆ. ಬುದ್ಧಿಜೀವಿಗಳಲ್ಲಿ ಅನೇಕರು ಸ್ತ್ರೀಯರ ಬಗ್ಗೆ ಭ್ರಾಂತಿಗೊಳಿಸುವ ಹಾಗೂ ಪರಸ್ಪರ ವಿರುದ್ಧವಾದ ಅಭಿಪ್ರಾಯಗಳನ್ನು ವ್ಯಕ್ತ

ಪಡಿಸಿದ್ದಾರೆ. ಅವರು ಸ್ತ್ರೀಯನ್ನು ಗುಪ್ತ ಪ್ರಶ್ನೆಯಂತಿರಿಸಿದ್ದಾರೆ. ಅವರ ಹೇಳಿಕೆಗಳಲ್ಲಿ ಕೆಲಸವನ್ನು ಗಮನಿಸುವುದು ಉಚಿತವಾಗಿದೆ:

ಮಿಕೆಲೆಟ್ ಎಂಬಾತ "ಸ್ತ್ರೀಯು ದೈವಸೃಷ್ಟಿಯಲ್ಲಿ ಅಸಂಗತ ಪವಾಡ" ಎಂದಿದ್ದಾನೆ. "ಆಕೆ ನ್ಯೂನತೆಗಳಿಂದ ಕೂಡಿದ ದುರ್ಬಲಳು, ಆಕೆಯು ತುಚ್ಛರ ಹೊಗಳಿಕೆಗಳಿಂದ ಸುಲಭವಾಗಿ ನಾಶವಾಗಬಲ್ಲಳು" ಎಂದು ಒಬ್ಬ ಪೋಪ್ ಧರ್ಮಪ್ರಭು ಹೇಳಿದ್ದಾರೆ. ಸೌದಿಯನ್ನರ ಅಭಿಪ್ರಾಯದಲ್ಲಿ "ಒಬ್ಬ ಸುಂದರ ಸ್ತ್ರೀ ಒಂದು ರತ್ನವಿದ್ದಂತೆ; ಒಬ್ಬ ಒಳ್ಳೆಯ ಸ್ತ್ರೀ ಅಥವ ಕುಲೀನ ಸ್ತ್ರೀ ಆಸ್ತಿ ಇದ್ದಂತೆ". "ನಾವು ಸದಾ ಪ್ರೀತಿಸಿ ಎಂದೂ ಅರ್ಥಮಾಡಿಕೊಳ್ಳಲಾಗದ ಮೂರು ವಿಷಯಗಳು ಚಿತ್ರಕಲೆ, ಸಂಗೀತ ಮತ್ತು ಸ್ತ್ರೀ" ಎಂದು ಫೊರ್ಟಿನೆಲ್ ತಿಳಿಸುತ್ತಾನೆ. "ವ್ಯವಹಾರಿಕ ವಿಷಯಗಳಲ್ಲಿ ಸ್ತ್ರೀಯು ಸ್ಥಿರವಾಗಿರಳು" ಎಂದು ಡಾ|| ಜಾನ್‌ಸನ್ ಹೇಳಿದ್ದಾನೆ.

ಪ್ರಾಚೀನ ದಾರ್ಶನಿಕರು ಸಹ ಸ್ತ್ರೀಯನ್ನು ವಿವಿಧವಾಗಿ ವರ್ಣಿಸಿದ್ದಾರೆ: "ಸ್ತ್ರೀಯರ ಕಣ್ಣೀರು ಎರಡು ತೆರನದ್ದು. ಒಂದು ದುಃಖವನ್ನು ಪ್ರಕಟಿಸುತ್ತದೆ; ಮತ್ತೊಂದು ಕಪಟವನ್ನು ಪ್ರಕಟಿಸುತ್ತದೆ" ಎಂದು ಮಹಾ ವಿಜ್ಞಾನಿ ಪೈಥಗೊರಾಸ್ ತಿಳಿಸುತ್ತಾನೆ. ಹೋಮರನ ಅಭಿಪ್ರಾಯದಲ್ಲಿ "ಸ್ತ್ರೀ ದೇವತೆಯಂತೆ ಚಲಿಸುತ್ತಾಳೆ; ರಾಣಿಯಂತೆ ಕಾಣುತ್ತಾಳೆ"."ಮೌನವೆ ಸ್ತ್ರೀಯ ಕಿರೀಟ" ಎಂದಿದ್ದಾನೆ ಸೊಪೊಕ್ಲೀಸ್. ಸಾಕ್ರೆಟೀಸನ ಅಭಿಪ್ರಾಯ, "ಸ್ತ್ರೀಯನ್ನು ಒಮ್ಮೆ ಪುರುಷನ ಸಮಾನಳಾಗಿ ಮಾಡಿ ತೆಂದರೆ ಆಕೆ ಅವನಿಗಿಂತ ಮೇಲಾಗಲು ಪ್ರಯತ್ನಿಸುತ್ತಾಳೆ" ಎಂಬುದಾಗಿತ್ತು.

ಸ್ತ್ರೀಯ ಸಹನೆ, ತಾಳ್ಮೆ, ಅಮಿತ ಸಾಮರ್ಥ್ಯ ಮತ್ತು ಮನಸ್ಥೈರ್ಯ, ವಿಧೇಯತೆ ಮೊದಲಾದ ಗುಣಗಳಿಗೆ ನಮ್ಮ ಮಹಾಭಾರತವೆ ಸಾಕ್ಷಿಯಾಗಿದೆ. ಪುರುಷ ನೋರ್ವನನ್ನು ಚೈತನ್ಯರಹಿತವನ್ನಾಗಿ ಮಾಡುವಂತಹ ಸಂದರ್ಭದಲ್ಲಿ ಸ್ತ್ರೀಯು ತೋರಿದ ತಾಳ್ಮೆ ಹಾಗೂ ಸಾಮರ್ಥ್ಯಕ್ಕಾಗಿ ಯೂಲಿಸಿಸ್‌ನ ಕಥೆಯಲ್ಲಿ ಸ್ತ್ರೀಯನ್ನು ಅಭಿನಂದಿಸಲಾಗಿದೆ. ಇಂಥ ಸಂದರ್ಭದಲ್ಲಿ ಸ್ತ್ರೀಯನ್ನು ಹೊಗಳದೆ ಮಾಟಗಾತಿಯರು, ತೋಳ, ಬೆಕ್ಕು ಮತ್ತು ಐಂದ್ರಜಾಲಿಕರೆಂದು ದೂಷಿಸಿರುವ ಸಂದರ್ಭಗಳು ಸಹ ಬೇಕಾದಷ್ಟಿವೆ.

ಸ್ತ್ರೀ ಪುರುಷನಿಗಿಂತ ಸ್ಥಿರ ದೇಹವನ್ನು ಹೊಂದಿದ್ದಾಳೆಂದು ಹೇಳಬಹುದು. ಭಾರತದ ಶಿಶುಮರಣ ಪ್ರಮಾಣದ ಅಂಕಿಅಂಶಗಳನ್ನು ಪರಾಮರ್ಶಿಸಿದಾಗ ಹೆಣ್ಣು ಮಕ್ಕಳಿಗಿಂತ ಗಂಡು ಮಕ್ಕಳೇ ಹೆಚ್ಚಾಗಿ ಹುಟ್ಟಿದ ಮೊದಲ ವರ್ಷದಲ್ಲಿ ಮರಣಕ್ಕೆ ತುತ್ತಾಗಿರುವುದು ಗೊತ್ತಾಗುತ್ತದೆ. ಗಂಡಿನ ತಾರುಣ್ಯದಲ್ಲಿ ಕಾಣಬರುವಷ್ಟು ಏರಿಳಿತಗಳು ಹೆಣ್ಣಿನ ತಾರುಣ್ಯದಲ್ಲಿ ಕಾಣಬರುವುದಿಲ್ಲ. ಸ್ತ್ರೀ–ಪುರುಷರ ಲೈಂಗಿಕ ಪ್ರವೃತ್ತಿಗಳನ್ನು ಹೋಲಿಸಿ ಪರಿಶೀಲಿಸಿದಾಗ ಎಲ್ಲಾ ಆಧಾರಗಳೂ ಪುರುಷನಲ್ಲಿರುವ ದ್ವಿರೂಪವನ್ನು ಪುಷ್ಟೀಕರಿಸುತ್ತದೆ. ಸ್ತ್ರೀ–ಪುರುಷರಿಬ್ಬರೂ ದೈಹಿಕ ರಚನೆಯಲ್ಲಿ ಸ್ತ್ರೀ–ಪುರುಷ ಲಕ್ಷಣಗಳನ್ನು ಹೊಂದಿರುತ್ತಾರೆ. ಆದ್ದರಿಂದ ಹನ್ನೆರಡು ವರುಷಗಳವರೆವಿಗೆ ಹುಡುಗ-

ಹುಡುಗಿಯರಲ್ಲಿ ಬಾಹ್ಯವಾಗಿ ಶಾರೀರಕ ವ್ಯತ್ಯಾಸಗಳು ಕಾಣಬರುವುದಿಲ್ಲ. ಧ್ವನಿ,
ರೋಮಗಳ ಹಂಚಿಕೆ ಮತ್ತು ಕತ್ತಿನ ಹಂಬಾಗ ಇವೆಲ್ಲವೂ ಒಂದೇ ರೀತಿಯದಾಗಿರು
ತ್ತವೆ. ಪ್ರೌಢಾವಸ್ಥೆಯನ್ನು ಮುಟ್ಟಿದಾಗ ಬಾಲಿಕೆಯರಲ್ಲಿ ಧ್ವನಿ ಒಡೆಯುವಿಕೆ
ಮತ್ತು ರೋಮಗಳು ಹರಡುವಿಕೆ ಈ ಲಕ್ಷಣಗಳು ಪ್ರಮುಖವಾಗಿ ಕಾಣಿಸಿಕೊಳ್ಳು
ತ್ತವೆ. ಮೈನೆರೆಯುವಿಕೆಯು ಬಾಲಿಕೆಯರಲ್ಲಿ ಅಡೆತಡೆಯಿಲ್ಲದ ದೈಹಿಕ ಅಭಿವೃದ್ಧಿ
ಹಂತವಾದರೆ, ಬಾಲಕರಲ್ಲಿ ಪ್ರೌಢಾವಸ್ಥೆ ಒಂದು ನವಜೀವನದ ಸಂಧಿಕಾಲವಾಗುತ್ತದೆ.
ಈ ಬದಲಾವಣೆ ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ಪ್ರಭಾವ ಬೀರುತ್ತದೆ. ಸ್ತ್ರೀಯರಲ್ಲಿ
ಮುಟ್ಟು ನಿಂತಾಗ ಇಲ್ಲವೇ ಮುಟ್ಟು ದೀರ್ಘ ಅವಧಿಯವರೆವಿಗೆ ಮುಂದುವರೆದಾಗ
ಅಥವಾ ರಜಸ್ಸು ಅನಿಯಿತವಾದಾಗ ಆಕೆಯ ಬಾಹ್ಯ ರೂಪದಲ್ಲಿ ಬದಲಾವಣೆ
ಗಳಾಗುತ್ತವೆ. ಈ ಬದಲಾವಣೆ ಹೆಚ್ಚಾಗಿ ಸ್ತ್ರೀಯರ ದೈಹಿಕ ಲಕ್ಷಣಗಳಲ್ಲಿ ಪ್ರಕಟ
ವಾಗಬಹುದು. ಕೆಲವು ಸ್ತ್ರೀಯರಿಗೆ ಗಲ್ಲದ ಮೇಲೆ ಮೀಸೆ ಕಾಣಿಸಿಕೊಂಡರೆ, ಕೆಲವರಿಗೆ
ಗಂಟಲ ಧ್ವನಿ ಒಡೆದು ಮಣಿಕಟ್ಟುಗಳಲ್ಲಿ ರೋಮ ಬೆಳೆಯುತ್ತದೆ. ಆದರೆ ಇಲ್ಲಿ ನಾವು
ಮುಖ್ಯವಾಗಿ ಗಮನಿಸಬೇಕಾದ ಅಂಶವೆಂದರೆ, ಯುವಕರ ಪ್ರೌಢಾವಸ್ಥೆ ಮಾನಸಿಕ
ಮತ್ತು ದೈಹಿಕ ಬದಲಾವಣೆಗಳೊಡನೆ ಕಾಣಿಸಿಕೊಂಡರೆ, ಯುವತಿಯರ ಪ್ರೌಢಾವಸ್ಥೆ
ಯಲ್ಲಿ ಹಿಂದಿನ ದೈಹಿಕ ರೂಪ ಕಾಣದಾಗುತ್ತದೆ. ಸ್ತ್ರೀಯಲ್ಲಿ ಋತುಮತಿಯಾದ
ನಂತರ ಕಾಣುವ ಬಾಹ್ಯರೂಪವು ನಶಿಸಿದ ಪುರುಷರೂಪವೆ ಹೊರತು ತರುಣ ರೂಪ
ವಲ್ಲ. ಹೇಗೆಂದರೆ ಪುರುಷರು ತಮ್ಮ ಇಳಿವಯಸ್ಸಿನಲ್ಲಿ ಸ್ತ್ರೀಯರಂತಯೇ ದೈಹಿಕ
ಬೆಳವಣಿಗೆಯಲ್ಲಿ ಪರಾಕಾಷ್ಠೆಯನ್ನು ಮುಟ್ಟುತ್ತಾರೆ. ಈ ಸಂದರ್ಭದಲ್ಲಿ ಅವರ
ಗಡ್ಡದ ರೋಮದ ಬೆಳವಣಿಗೆ ನಿಲ್ಲುತ್ತದೆ. ಈ ರೀತಿ ಇಳಿವಯಸ್ಸಿನಲ್ಲಿ ಪುರುಷರಲ್ಲಿ
ಸ್ತ್ರೀ ಬಾಹ್ಯರೂಪ ದರ್ಶನವಾದರೆ, ಸ್ತ್ರೀಯರಲ್ಲಿ ಪುರುಷ ಬಾಹ್ಯರೂಪ ದರ್ಶನ
ಅವರವರ ದೈಹಿಕ ಗುಣಕ್ಕನುಸಾರವಾಗಿರುತ್ತದೆ. ಕೆಲವು ಸ್ತ್ರೀಯರಲ್ಲಿ ಹುಬ್ಬು ಪುರುಷ
ರಂತೆ ದಟ್ಟವಾಗಿ ಬೆಳೆದಿರುವುದನ್ನು, ಮೇಲ್ತುಟಿಗಳ ಮೇಲೆ ಒತ್ತಾಗಿ ರೋಮ
ಬೆಳೆದಿರುವುದನ್ನು, ಕೈಕಾಲುಗಳ ಮೇಲೆ ಪುರುಷರಂತೆ ಹೆಚ್ಚು ಕೂದಲು ಬೆಳೆದಿರುವು
ದನ್ನು ಕಾಣಬಹುದು. ಮತ್ತೆ ಕೆಲವು ಸ್ತ್ರೀಯರ ಧ್ವನಿ ಪುರುಷ ಕಂಠವನ್ನು ಹೋಲು
ತ್ತದೆ; ಕೆಲವು ಮಹಿಳೆಯರ ದೇಹ ಪುರುಷರ ದೇಹದಂತೆ ಬಲವಾಗಿರುತ್ತದೆ. ಇದು
ನಿಜಕ್ಕೂ ಆಶ್ಚರ್ಯವಲ್ಲದೆ ಪ್ರಕೃತಿಯ ಚಮತ್ಕಾರವೂ ಆಗಿದೆ.

ಮಾನವನ ವಿಕಾಸದಲ್ಲಿ ಜೈವಿಕ ಘಟನೆಗಳನ್ನು ಕೂಲಂಕಶವಾಗಿ ವಿಚಾರಿಸದೆ
ಈ ಚಮತ್ಕಾರಗಳ ಬಗ್ಗೆ ವ್ಯಾಖ್ಯಾನ ಮಾಡಲಾಗದು. ಈ ಸಂದರ್ಭದಲ್ಲಿ ಸ್ತ್ರೀ–
ಪುರುಷರ ಲೈಂಗಿಕ ಭೇದಗಳನ್ನು ಅಧ್ಯಯನಮಾಡುವುದು ಯುಕ್ತವಾಗಿದೆ. ಕುಟುಂಬ
ದಲ್ಲಿ ಮಾತೆಯ ಸ್ಥಾನ ಪವಿತ್ರವಾದದ್ದು. ವಂಶಾಭಿವೃದ್ಧಿಗೆ ಆಕೆ ಪ್ರಮುಖಳು:
ಗಂಡು–ಹೆಣ್ಣಿನ ಲೈಂಗಿಕ ಆವಶ್ಯಕತೆ, ಅವರ ಸಹಜೀವನ ಇವುಗಳನ್ನು ಕೂಲಂಕಶ
ವಾಗಿ ಪರಿಶೀಲಿಸಿದಾಗ ಅವರಿಬ್ಬರ ಸ್ಥಾನಮಾನಗಳನ್ನು ತಿಳಿಯಲು ಸಾಧ್ಯವಾಗುವುದು:

ಮಾನವನಲ್ಲಿ ಲೈಂಗಿಕ ಜೀವನ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ರೂಪಿಸುವಲ್ಲಿ ಲೈಂಗಿಕ ಕ್ರಿಯೆಯ ಪ್ರಭಾವ ಬಹಳವಿರುತ್ತದೆ. ಸೃಷ್ಟಿಯ ಆದಿಯಲ್ಲಿ ಸ್ತ್ರೀ–ಪುರುಷರು ಉದ್ಭವಿಸಿದ ವಿಧಾನವನ್ನು ಧರ್ಮಗಳು ವಿವಿಧ ವಾಗಿ ವರ್ಣಿಸಿವೆ. ಭಗವಂತನಿಂದ ಲಿಂಗಗಳ ಸೃಷ್ಟಿ ಧ್ಯೇಯ ಸಾಧನೆಗೆ ಒಂದು ಮಾರ್ಗ ವಾಯಿತೆ ವಿನಹ ಅದೇ ಧ್ಯೇಯವಾಗಲಿಲ್ಲ. ಈ ವಿಷಯವನ್ನು ಸರಿಯಾಗಿ ಅರ್ಥಮಾಡಿ ಕೊಂಡಲ್ಲಿ ಸ್ತ್ರೀ ಬಗೆಗಿನ ಮೂಢಭಾವನೆಗಳು ಸಮಂಜಸವಾಗಿ ಪರಿಹಾರವಾಗುವುವು. ಪ್ರಕೃತಿಯ ಕಣ್ಣಿಗೆ ಸ್ತ್ರೀ ಪುರುಷರಿಬ್ಬರೂ ಸಮಾನರು. ಭಾರತೀಯ ದರ್ಶನಶಾಸ್ತ್ರವು "ಅರ್ಧನಾರೀಶ್ವರ"ದ ಆದರ್ಶವನ್ನು ಉಳಿಸಿಕೊಂಡು ಬಂದಿರುವುದೇ ಅಲ್ಲದೆ, ಸ್ತ್ರೀ–ಪುರುಷರಿಬ್ಬರಲ್ಲಿಯೂ ಕಾರ್ಯವಿಭಜನೆ ಹಾಗೂ ಸಮಾನಸ್ಥಿತಿಗಳನ್ನು ರೂಪಿಸಿದೆ.

ಮಾನವನ ಜೀವಿತದಲ್ಲಿ ಲೈಂಗಿಕ ಪ್ರಭಾವ ಪ್ರಮುಖವಾದದ್ದು. ಈ ಪ್ರಭಾವ ಸಮಾಜವನ್ನೇ ವ್ಯಾಪಿಸಿದೆ. ಅದು ಮಾನವನ ಮನಸ್ಸಿನ ಮೇಲೆ ಪರಿಣಾಮವುಂಟು ಮಾಡುವುದಲ್ಲದೆ ತನ್ನ ಮಾರ್ಗದಲ್ಲೇ ನಡೆಯುವಂತೆ ಅವನನ್ನು ಪ್ರೇರೇಪಿಸುತ್ತದೆ. ಮನೋದೌರ್ಬಲ್ಯದಿಂದ ಲೈಂಗಿಕ ವ್ಯಸನಕ್ಕೀಡಾದವರು ಕೆಟ್ಟದಾರಿಯನ್ನು ಹಿಡಿಯುವ ಸಾಧ್ಯತೆಯುಂಟು. ಇದರಿಂದಲೇ ಪುರುಷರನ್ನು ಅಣಕಿಸುವಂತೆ ಕಾಣುವ ಸ್ತ್ರೀ ಹಾಗೂ ಸ್ತ್ರೀಯಂತಿರುವ ಪುರುಷರು ಕರುಣಾಜನಕರಾಗಿ ಕಾಣುತ್ತಾರೆ. ದೇಹದ ನರಗಳು, ರಸ ಗ್ರಂಥಿಗಳು, ಸ್ನಾಯುಗಳು ಮತ್ತು ಪೊರೆಗಳು ಸ್ತ್ರೀ–ಪುರುಷರಲ್ಲಿ ಬೇರೆಬೇರೆಯಾಗಿದ್ದು ಅವುಗಳ ವರ್ತನೆಯನ್ನು ಪರಸ್ಪರ ಬದಲಾಯಿಸುವಂತಿಲ್ಲ. ಆದ್ದರಿಂದಲೇ ಪುರುಷ ಪುರುಷನಾಗಿಯೇ ಇದ್ದಾನೆ, ಸ್ತ್ರೀ ಸ್ತ್ರೀಯಾಗಿಯೇ ಇದ್ದಾಳೆ. ಪುರುಷರಲ್ಲಿ ಇರುವು ದಾದರೆ ಅದು ಆತನಲ್ಲಿ ಹೆಚ್ಚಾಗಿರುವ ಸ್ತ್ರೀಯ ಅಂಗ ಸತ್ವಗಳ ಪರಿಣಾಮದಿಂದಲೇ ಆಗುತ್ತದೆ. ಇದೇ ರೀತಿ ಸ್ತ್ರೀಯಲ್ಲಿರುವ ಪುರುಷತ್ವ ಪುರುಷರ ಅಂಗಸತ್ವಗಳು ಆಕೆಯಲ್ಲಿ ಹೆಚ್ಚಾಗಿದ್ದರೆ ಕಾಣಿಸಿಕೊಳ್ಳುತ್ತದೆ. ಪುರುಷನ ನಡತೆಯಲ್ಲಿ ಅವನ ಲೈಂಗಿಕ ವೈಪರೀತ್ಯ ಗಳು ಕಾಣುತ್ತವೆ. ಮರಳ್ಗಾಡಿನ ಒಂಟೆಗೆ ಆಸ್ಟ್ರಿಚ್ ಪಕ್ಷಿಯ ರೆಕ್ಕೆಯನ್ನು ಜೋಡಿಸಿ ಅದನ್ನು ಹಕ್ಕಿಯೆಂದು ಸುಲಭವಾಗಿ ಹೇಳಬಹುದೆ ಹೊರತು ಸ್ತ್ರೀಯ ಉಡುಪಿನಿಂದ ಪುರುಷನನ್ನು ಶೃಂಗರಿಸಿ ಅವನನ್ನು ಸ್ತ್ರೀ ಎಂದು ಹೇಳಲು ಸಾಧ್ಯವಿಲ್ಲ. ಬಾಹ್ಯ ರೂಪು ವಿಲ್ಲದೆ ಪುರುಷನಲ್ಲಿಯ ಸ್ತ್ರೀತ್ವವಾಗಲಿ, ಸ್ತ್ರೀಯಲ್ಲಿನ ಪುರುಷತ್ವವಾಗಲಿ ಇರಲು ಸಾಧ್ಯ ವಿಲ್ಲ. ನಿಜ ಹೇಳಬೇಕಾದರೆ, ಸ್ತ್ರೀ ಪುರುಷರ ವ್ಯಕ್ತಿತ್ವ ಅಂಗಾಂಗಗಳ ರಚನೆಯಿಂದಲೇ ಅಲ್ಲದೆ ದೈಹಿಕ ಪ್ರಚೋದನೆಗಳಿಂದ, ಮಾನಸಿಕ ಆಸೆ ಆಕಾಂಕ್ಷೆಗಳಿಂದ, ಹಾಗೂ ಜೀವಿತದ ಆದರ್ಶಗಳಿಂದ ಕೂಡಿರುತ್ತದೆ.

ಸ್ತ್ರೀಯ ಪ್ರೀತಿಯು ಸ್ವಾಭಿಮಾನವುಳ್ಳದ್ದು. ಆಕೆಗೆ ತನ್ನ ಶಿಶುವಿನಲ್ಲಿರುವ ಪ್ರೀತಿ ಇತರ ಶಿಶುಗಳ ಬಗ್ಗೆ ಆಕೆಗಿರುವ ಪ್ರೀತಿಯ ಪ್ರತೀಕವೇನೂ ಅಲ್ಲ. ಆಕೆಯ ದೇಹದಿಂದಲೇ ರೂಪುಗೊಂಡ ದೇಹಕ್ಕೆ ಆಕೆ ತೋರುವ ಪ್ರೀತಿ ವಿಶಿಷ್ಟವಾದದ್ದು. ಸ್ತ್ರೀ ತನ್ನ ಸೌಂದರ್ಯದ ಅರಿವಿನಿಂದ ಆತ್ಮಾರಾಧನೆಯನ್ನು ಮಾಡಿಕೊಳ್ಳುವ ಪ್ರವೃತ್ತಿ

ಯನ್ನು ಹೊಂದಿರುತ್ತಾಳೆ. ಈ ಆತ್ಮಾರಾಧನೆಯು ಪ್ರೀತಿಯಾಗಿ ಪರಿಣಮಿಸು ವುದು. ಆಕೆ ಪುರುಷನನ್ನು ತನ್ನ ಜೀವನದ ಕೇಂದ್ರವನ್ನಾಗಿ ಮಾಡಿಕೊಳ್ಳದೆ ಪ್ರೀತಿಸಲಾರಳು. ಪುರುಷನೇ ತನ್ನ ಸರ್ವಸ್ವವೆಂದು ಭಾವಿಸದೆ, ಅವನ ಹೃದಯ ಸಾಮಿಪ್ಯವನ್ನು ಬಯಸದೆ ಸ್ತ್ರೀ ಅವನನ್ನು ಪ್ರೀತಿಸಲಾರಳು. ತನ್ನ ಸರ್ವಸ್ವವೆಂದು ಆಕೆ ಪರಿಗಣಿಸುವ ಪುರುಷನು ತನ್ನ ಪ್ರೇಮವನ್ನು ಮತ್ತೊಬ್ಬಳೊಡನೆ ಹಂಚಿಕೊಳ್ಳು ವುದನ್ನು ಸಹ ಆಕೆ ಸಹಿಸಳು. ಪುರುಷ ಅವಳಂತೆ ನಿಶ್ಚಲವಾಗಿ ಪ್ರೀತಿಸಲು ಅಸಮರ್ಥ ನಾಗಿರುತ್ತಾನೆ. ಆದ್ದರಿಂದಲೆ ಅವನು ತನ್ನ ಸ್ತ್ರೀಯನ್ನು ಬಿಟ್ಟು ಪರಸ್ತ್ರೀಯರಿಂದ ಸಂತೃಪ್ತಿ ಪಡೆಯಲು ಇಚ್ಛಿಸುತ್ತಾನೆ. ಪರಾವಲಂಬನೆ ಮತ್ತು ಮುಗ್ಧತೆ ಪುರುಷನದಲ್ಲ. ಮೆನಿಸಿಯಸ್‌ನು ಹೇಳಿರುವಂತೆ "ಯಾವ ಪುರುಷ ತನ್ನ ಶಿಶು ಸ್ವಭಾವವನ್ನು ಉಳಿಸು ಕೊಂಡಿರುವನೊ ಅವನೇ ನೈತಿಕವಾಗಿ ಹಿರಿಯವನು." ಸ್ತ್ರೀಯನ್ನು ಸಾಹಸದಿಂದ ಇಲ್ಲವೆ ದೈಹಿಕ, ಮಾನಸಿಕ ಅಥವಾ ನೈತಿಕ ಬಲದಿಂದ ಅಥವಾ ಪ್ರಭಾವದಿಂದ ವಶ ಪಡಿಸಿಕೊಳ್ಳಲಾಗದು. ತನ್ನ ಸ್ವಭಾವಕ್ಕನುಗುಣವಾದ ಸರಳತೆಯನ್ನು ಇತರರಲ್ಲಿಯೂ ಕಾಣಲು ಆಕೆ ಬಯಸುತ್ತಾಳೆ. ಆಕೆಗೆ ತನ್ನ ಮಗ ಕಳ್ಳನಾಗಿದ್ದರೂ ಅವನು ಮಗನೆ. ಅದೇ ರೀತಿ ಪುರುಷನ ಬಗ್ಗೆಯೂ ಕೂಡ. ಆದುದರಿಂದ ಗಂಡನಾದವನು ಜೂತ ವಾಡಲಿ, ಕುಡಿದು ಮತ್ತೇರಿ ಮನೆಗೆ ಬರಲಿ, ವ್ಯಭಿಚಾರಿಯಾಗಿರಲಿ, ದುಷ್ಟನಾಗಿರಲಿ ಅವಳ ಪಾಲಿಗೆ ಅವನು ಗಂಡನೆ. ಅವನ ಕಷ್ಟನಷ್ಟಗಳನ್ನು, ಸುಖಸಂತೋಷಗಳನ್ನು ಆಕೆ ಸಮವಾಗಿ ಹಂಚಿಕೊಳ್ಳುತ್ತಾಳೆ. ತಾನು ನಂಬಿದ ಪುರುಷನನ್ನು ಏತಕ್ಕಾಗಿ ಯಾವ ಕಾರಣಕ್ಕಾಗಿ ಯಾವ ಶಕ್ತಿಗಳ ಪ್ರೇರಣೆಯಿಂದ ಆಕೆ ಪ್ರೀತಿಸುವಳೆಂದು ಹೇಳುವುದು ಕಷ್ಟವೇ ಸರಿ ಆದ್ದರಿಂದಲೆ, 'ಸಮುದ್ರದ ಆಳವನ್ನರಿತರೂ ಸ್ತ್ರೀಯ ಅಂತರಾಳವನ್ನು ಅರಿಯುವುದು ಕಷ್ಟ' ಎಂಬ ನಾಣ್ನುಡಿ.

ಪರಿಸರದ ಪ್ರಭಾವಕ್ಕೆ ತಕ್ಕಂತೆ ಪುರುಷರ ವರ್ತನೆ ರೂಪುಗೊಳ್ಳುತ್ತದೆ. ಸಮಾಜದ ಪರಿಸರದಲ್ಲಿ ಸ್ತ್ರೀ ಸಮಸ್ಯೆಯಾಗಿಯೇ ಶತಮಾನಗಳಿಂದ ಉಳಿದಿರುವುದರಿಂದ ಪುರುಷ ಸ್ತ್ರೀಯನ್ನು ಅರಿಯಲು ಸಾಧ್ಯವಾಗದೆ ಹೋಗಿದೆ. ಆಕೆಯನ್ನು ಅವನ ಭೋಗ ವಸ್ತುವೆಂದು ಭಾವಿಸಿ ಆಕಳನ್ನು ಮನೆಯಲ್ಲಿ ಕಟ್ಟಿ ಹಾಲು ಪಡೆದುಕೊಳ್ಳುವಂತೆ ಸ್ತ್ರೀಯನ್ನು ಸಹ ಮನೆಯಲ್ಲಿಯೇ ಕಟ್ಟಿಹಾಕಿ ತನ್ನ ಅನುಕೂಲಗಳಿಗಾಗಿ ಉಪಯೋಗಿಸಿ ಕೊಳ್ಳುತ್ತಿದ್ದಾನೆ. ಸ್ತ್ರೀ ಬಗೆಗೆ ಪ್ರಪಂಚದ ಪುರುಷರೆಲ್ಲರ ದೃಷ್ಟಿ ಕೇವಲ ಕಾಮುಕ ದೃಷ್ಟಿ ಮಾತ್ರವೆ. ಅವನ ಪ್ರೀತಿಯಲ್ಲಿ ಏಕರೂಪ ಕಾಣುವುದಿಲ್ಲ. ಸ್ತ್ರೀಯನ್ನು ಆತನು ತನ್ನ ಚರ ಸ್ವತ್ತಿನಂತೆ ಕಾಣುತ್ತಾನೆ. ಸ್ವಾರ್ಥ, ಸ್ವಾಭಿಮಾನ, ಸರ್ವಾಧಿಕಾರ ಪುರುಷನ ಲಕ್ಷಣಗಳಾದವು. ಆದರೆ, ಪುರುಷ ಸರ್ವಾಧಿಕಾರಿಯಾಗಿರಬಲ್ಲನೆ ವಿನಃ ಸ್ತ್ರೀಯನ್ನು ತನ್ನ ಶಕ್ತಿ ಸಾಮರ್ಥ್ಯಗಳಿಂದ ಜಯಿಸಲಾರ. ಆಕೆ ತನ್ನ ಅಧೀನಳಾಗಲು ತನ್ನ ದರ್ಪವನ್ನು ಪ್ರಕಟಿಸುತ್ತಾನೆ. ಪ್ರಿಯನನ್ನು ಒಲಿಸಿಕೊಳ್ಳಲು ಸ್ತ್ರೀ ಅನುಸರಿಸುವ ಅರ್ಪಣೆಯ ವಿಧಾನವನ್ನು ಅವನು ಅನುಸರಿಸಲಾರ. ತನ್ನನ್ನು ತಾನೇ ಅರ್ಪಿಸಿಕೊಳ್ಳುವ

ಕಲೆ ಸ್ತ್ರೀಯೊಬ್ಬಳಿಗೆ ಮಾತ್ರ ಕರಗತವಾಗಿದೆ. ಭಿಕ್ಷೆ ಬೇಡುವಂಥ ಸಣ್ಣ ಸಂದರ್ಭದಲ್ಲೂ ಪುರುಷ ತನ್ನ ಆಕ್ರಮಣ ಪ್ರವೃತ್ತಿಯನ್ನು ತೋರಿಸುತ್ತಾನೆ. ಪ್ರೀತಿಸುವುದೂ ಒಂದು ಕಲೆಯೆ ಸರಿ. ಆಕೆಯ ಪ್ರೀತಿ ಧರ್ಮದ ಮೆರುಗಿನಿಂದ ಮತ್ತಷ್ಟು ಕಾಂತಿಯುತವಾಗಿದೆ. ಕೈ ಹಿಡಿದ ಗಂಡನ ಮೇಲಣ, ಹಡೆದ ಮಕ್ಕಳ ಮೇಲಣ ಈ ಪ್ರೇಮ ಹಾಗೂ ಮಮತೆ ಗಾಢವಾದದ್ದು ಹಾಗೂ ಅನಂತವಾದದ್ದು.

ಪ್ರೀತಿ ಬಲು ನಯವಾದ ವಸ್ತು; ಅದು ದಾಸ್ಯದಿಂದ ಕೊನೆಗಾಣುತ್ತದೆ. ಪ್ರೀತಿ ತಾಳ್ಮೆಯಿಂದ ಕೂಡಿದ್ದರೂ ಸತ್ಯವಾದುದ್ದು. ಹೃದಯದಲ್ಲಿಯೆ ಅದು ತನ್ನ ರೂಪನ್ನು ತಾಳಿ, ಅಲ್ಲಿಯೇ ಬೆಳೆದು, ಅಭಿವೃದ್ಧಿಗೊಂಡು ಪ್ರವಹಿಸುತ್ತದೆ, ಇಲ್ಲವೆ ಕಠಿಣ ಕೈವಾಡ ದಿಂದ ಛಿದ್ರವಾಗುತ್ತದೆ. ಆದರೆ ಹೃದಯದಲ್ಲಿ ಅಡಗಿರುವ ಪ್ರೀತಿ ಮೌನವಾಗಿ ಚಲಿ ಸುತ್ತಾ, ಶಾಂತಿಯ ಮಡಿಲಲ್ಲಿ ಕುಳಿತು ಜೀವನದ ಬೆಡಗನ್ನು ಹೆಚ್ಚಿಸುತ್ತದೆ. ಪ್ರಕೃತಿಯ ಸ್ಥಾಯಿತ್ವ ಮತ್ತು ಪವಿತ್ರತೆಗೆ ಈ ಪ್ರಶಾಂತಿಯೇ ಕಾರಣವಾಗಿರುವುದಲ್ಲದೆ ಅದು ಮೂಲತಃ ಸ್ತ್ರೀಯ ಸ್ವಭಾವವಾಗಿದೆ.

ಯಾವ ಜನಾಂಗದ ನಾಗರಿಕತೆಯ ಹಿರಿಮೆಯನ್ನಾಗಲಿ ಅದರ ಪ್ರಾಚೀನತೆಯಿಂದ ಅಳೆಯಲು ಸಾಧ್ಯವಿಲ್ಲ. ಎಲ್ಲ ನಾಗರಿಕ ಸಮಾಜಗಳಲ್ಲಿಯೂ ಹಿಂದಿನಿಂದ ಸ್ತ್ರೀಯ ರನ್ನು ಗೌರವಿಸಲಾಗಿದೆ, ಇಲ್ಲವೆ ಸಮಾಜದ ಘೋರ ಕಟ್ಟಳೆಗಳಿಗೆ ಗುರಿಮಾಡಲಾಗಿದೆ; ಸಮಾಜದ ಪರಿಸ್ಥಿತಿಗಳಿಂದ ಆಕೆ ದಾಸಿಯಾಗಿದ್ದಾಳೆ, ವೇಶ್ಯೆಯಾಗಿದ್ದಾಳೆ, ದುಡಿಯುವ ಕೂಲಿಯಾಗಿದ್ದಾಳೆ. ಹಿಂದಿನ ಯುಗಗಳಲ್ಲಿ ಆಕೆಯ ಬಗ್ಗೆ ಜನ ಯಾವ ಭಾವನೆ ಯನ್ನು ಹೊಂದಿದ್ದರೊ ಆ ಭಾವನೆಯನ್ನು ನಾವು ಸಹ ಹೊಂದಿದ್ದೇವೆ, ಆ ಯುಗ ಗಳ ಜನ ಆಕೆಯನ್ನು ಯಾವ ರೀತಿ ಉಪಯೋಗಿಸಿಕೊಳ್ಳುತ್ತಿದ್ದರೊ ಅದೇ ರೀತಿ ನಾವು ಸಹ ಉಪಯೋಗಿಸಿಕೊಳ್ಳುತ್ತಿದ್ದೇವೆ. ವಾಸ್ತವವಾಗಿ, ಒಂದು ಜನಾಂಗದ ನಾಗರಿಕತೆಯ ಹಿರಿಮೆ ಆ ಜನಾಂಗ ಸಮಾಜದಲ್ಲಿ ಸ್ತ್ರೀಗೆ ಕಲ್ಪಿಸಿರುವ ಸ್ಥಾನಮಾನ ಗಳಿಂದ ಗೊತ್ತಾಗುತ್ತದೆ. ಮಾನವನ ನಾಗರಿಕತೆ ಮತ್ತು ಸಂಸ್ಕೃತಿ ಎಷ್ಟೆಂಬುದು ಅವನು ಸ್ತ್ರೀಯ ಬಗ್ಗೆ ಕಾಣಿಸಿರುವ ಅಸಭ್ಯತೆಯಿಂದಲೆ ವ್ಯಕ್ತವಾಗುವುದು ; ಅವಳು ದುರ್ಬಲ ಳೆಂಬ ಕಾರಣದಿಂದ ಪುರುಷನು ಆಕೆಯನ್ನ ತನ್ನ ಕಾಮತೃಷೆಯನ್ನು ತೃಪ್ತಿಪಡಿಸಿ ಕೊಳ್ಳಲು ಉಪಯೋಗಿಸುತ್ತಲೆ ಬಂದಿದ್ದಾನೆ. ಪುರುಷ ಪ್ರಪಂಚದ ಯಾವ ಭಾಗದಲ್ಲೇ ಆಗಲಿ ಸ್ತ್ರೀ ಅಮಾನುಷ ಕ್ರೌರ್ಯಗಳಿಗೆ ಬಲಿಯಾಗದೆ ಇಲ್ಲ. ಇತಿಹಾಸದ ಪುಟಗಳಲ್ಲಿ ಪುರುಷನೆಸಗಿರುವ ಅಪರಾಧಗಳ ದೃಷ್ಟಾಂತಗಳು ಎಷ್ಟೋ ಇವೆ. ಹೆಣ್ಣುಮಗು ಹುಟ್ಟಿದರೆ ಕುಟುಂಬಕ್ಕೆ ನಷ್ಟವೆಂಬ ಭಾವನೆಯಿಂದ ಹುಟ್ಟಿದಾಗಲೆ ಅದನ್ನು ಕೊಲ್ಲುವ ಪದ್ಧತಿ ಇದ್ದಿತೆಂದರೆ ಆಶ್ಚರ್ಯವೆನಿಸಬಹುದು : ರಾವಣ, ಕೀಚಕರಂಥ ವೀರರು ಸ್ತ್ರೀಯನ್ನು ಬಯಸಿ ಕೆಟ್ಟುಹೋದರೆಂಬುದನ್ನು ನಾವು ಕೇಳಿದ್ದೇವೆ. ಸ್ತ್ರೀಯರನ್ನು ಹಿಂಸಿಸಲು ಬಳಸದಿರುವ ಕ್ರೂರ ವಿಧಾನಗಳೇ ಇಲ್ಲ. ವಿಧವೆಯರ ರೂಪವನ್ನು ಕೆಡಿಸುವ ಪದ್ಧತಿಯು ಭಾರತದಲ್ಲಿ ಇತ್ತೀಚಿನವರೆಗೆ ರೂಢಿಯಲ್ಲಿತ್ತು. ಇಂದೂ ಕೂಡ ಸ್ತ್ರೀಯ

ಹಕ್ಕುಗಳಿಗೆ ಪುರುಷನ ಮನ್ನಣೆ ಸಿಕ್ಕುತ್ತಿಲ್ಲ. ತಮ್ಮಲ್ಲಿ ಕಾಣದ ಆದರ್ಶಗಳನ್ನು ಸ್ತ್ರೀಯರಲ್ಲಿ ಕಾಣಲು ಅವರು ಬಯಸುತ್ತಾರೆ. ಪುರುಷನು ಸ್ತ್ರೀಯನ್ನು ಕೈಗೊಂಬೆ ಯಾಗಿಸಿಕೊಂಡೊ, ಇಲ್ಲವೇ ಸಾಕು ಪ್ರಾಣಿಯಂತೆ ಕೀಳಾಗಿ ಕಾಣುತ್ತಲೊ ಬಂದಿದ್ದಾನೆ. ಸುಲಭವಾಗಿ ನಂಬುವ ಆಕೆಯ ಮನಸ್ಸನ್ನು ಒಲಿಸಿಕೊಂಡು ತನ್ನ ಗುಲಾಮಳನ್ನಾಗಿ ಮಾಡಿಕೊಂಡಿದ್ದಾನೆ.

ಪರಿಶೀಲನೆಗಳ ಆಧಾರದ ಮೇಲೆ ಹೇಳುವುದಾದರೆ, ಸ್ತ್ರೀಯ ಶರೀರ ಪುರುಷ ಶರೀರಕ್ಕಿಂತ ಹೆಚ್ಚು ಸೂಕ್ಷ್ಮವಾದದ್ದು ಹಾಗೂ ಪೂರ್ಣವಾದದ್ದು. ಆಕೆ ಬುದ್ಧಿವಂತಿಕೆಯಲ್ಲಿ ಪುರುಷನಿಗಿಂತ ಮುಂದೆಯೇ ಇದ್ದಾಳೆ. ಆಕೆಯ ಗ್ರಾಹಕ ಶಕ್ತಿ ಹೆಚ್ಚು. ಆಕೆ ಕಾಯಿಲೆಗಳನ್ನು ತಡೆಯುವಂಥ ದೇಹರಚನೆಯನ್ನು ಹೊಂದಿರುವುದಲ್ಲದೆ ದೀರ್ಘಕಾಲ ಜೀವಿಸುವವಳೂ ಆಗಿದ್ದಾಳೆ; ಆಕೆಯ ಮನೋಸ್ಥೈರ್ಯ ಗಮನಾರ್ಹವಾದದ್ದು. ಆಕೆ ಜೀವಿತದಲ್ಲಿ ನೈತಿಕ ಶಕ್ತಿಯನ್ನು ಬಯಸಿ ಆ ಮೂಲಕ ತನ್ನ ನಡತೆಯನ್ನು ರೂಪಿಸಿಕೊಳ್ಳುತ್ತಾಳೆ. ಜೀವನದ ಜಟಿಲ ಸಮಸ್ಯೆಗಳನ್ನು ಎದುರಿಸಲು ಆಕೆಗೆ ಪುರುಷನಿಗಿಂತ ಹೆಚ್ಚು ಶಕ್ತಿಸಾಮರ್ಥ್ಯಗಳಿವೆ. ಈ ಕಾರಣಗಳಿಂದ ಸ್ತ್ರೀ ಪುರುಷನಿಗಿಂತ ಉತ್ತಮಳೆನ್ನಲು ಅಡ್ಡಿಯೇನಿಲ್ಲ.

ಪ್ರೇಮ ಸ್ತ್ರೀಗೆ ಅಮೂಲ್ಯವಾದದ್ದು. ಸ್ತ್ರೀ ಪುರುಷರ ಸಂಬಂಧದಲ್ಲಿ ಪ್ರೇಮಕ್ಕೆ ಪವಿತ್ರ ಸ್ಥಾನವಿದೆ. ಸ್ತ್ರೀ ತನ್ನ ಪ್ರೇಮವನ್ನು ಒಬ್ಬ ಪುರುಷನಲ್ಲದೆ ಅನೇಕರಲ್ಲಿ ಹಂಚಿಕೊಳ್ಳಲು ಸಾಧ್ಯವಿಲ್ಲ. ಹಾಗೆ ಹಂಚಿಕೊಳ್ಳುವ ಸಾಧ್ಯತೆಯು ಬಹು ಪತಿತ್ವ ಪದ್ಧತಿಯ ಸಮಾಜಗಳಲ್ಲಿದ್ದಿತು. ಸಾಮಾನ್ಯ ಸಂದರ್ಭಗಳಲ್ಲಿ ಪುರುಷ ಬಹುಪತ್ನಿಯರನ್ನು ಹೊಂದಿರುವಂತೆ ಸ್ತ್ರೀ ಬಹುಪತಿಗಳನ್ನು ಹೊಂದಿರಲಾರಳು. ಆರ್ಥಿಕ ಮತ್ತು ಸಾಮಾಜಿಕ ಪದ್ಧತಿಗಳಿಂದ ಬಹುಪುರುಷ ಸಹವಾಸವುಳ್ಳ ಸ್ತ್ರೀಯನ್ನು ಬಿಟ್ಟರೆ ಹಲವು ವಿಕಾರಗಳಿಗೆ ಒಳಪಟ್ಟ ಸ್ತ್ರೀಯರಲ್ಲಿ ಮಾತ್ರ ಇಂಥ ಲೈಂಗಿಕ ಸಂಬಂಧವನ್ನು ನಾವು ಕಾಣಬಹುದು. ಲೈಂಗಿಕ ಕ್ಷೇತ್ರದಲ್ಲಿ ಸಂಕೀರ್ಣ ಸಂಬಂಧವುಳ್ಳ ಸ್ತ್ರೀ ತನ್ನ ಜೀವನದ ಸತ್ವವನ್ನೇ ಕಳೆದುಕೊಂಡಂತೆ ಭಾವಿಸುತ್ತಾಳೆ. ಅದನ್ನು ಕಳೆದುಕೊಂಡ ನಂತರ ಅವಳಿಗೆ ತಾನು ಹೇಗೆ ಜೀವಿಸಿದರೂ ಒಂದೇ ಅನಿಸುತ್ತದೆ. ಇಂಥ ಸ್ತ್ರೀಯರ ಪ್ರೀತಿಯನ್ನು ಅನೈತಿಕ ರೀತಿಯಲ್ಲಿ ಕಸಿದುಕೊಂಡು ಕಾಮುಕರು ಸಂತೋಷ ಪಡುತ್ತಾರೆ.

ಸ್ತ್ರೀಯ ಸರ್ವಶಕ್ತಿಗಳೂ ಉದಾತ್ತ ಆದರ್ಶಗಳಲ್ಲಿ ಕೇಂದ್ರೀಕರಿಸಿದರೆ ಆಕೆಯ ಜೀವನ ಉತ್ತಮಗೊಳ್ಳುತ್ತದೆ, ಆಕೆ ಸಮಾಜದಲ್ಲಿ ಗಣ್ಯಸ್ಥಾನ ಪಡೆಯುತ್ತಾಳೆ. ಇದರಿಂದ ಆಕೆಯಲ್ಲಿ ದೈಹಿಕವಾಗಿ ಮತ್ತು ಮಾನಸಿಕವಾಗಿ ಮಹತ್ತರ ಪರಿಣಾಮಗಳುಂಟಾಗುತ್ತವೆ. ಸ್ತ್ರೀಗೆ ಉತ್ತಮ ಗುಣಗಳನ್ನು ಹೊಂದಿದ, ತನಗೆ ಸುಖ ಸಂತೋಷಗಳನ್ನು ದೊರಕಿಸಿಕೊಡುವ ಪುರುಷನನ್ನು ಪ್ರೀತಿಸಿ ನಲಿಯುವುದರಿಂದ ಉಂಟಾಗುವ ತೃಪ್ತಿ ಬೇರೊಂದರಲ್ಲಿ ಸಿಗಲಾರದು. ಕೆಸರಿನಲ್ಲಿ ಹುಟ್ಟಿ ಬೆಳೆದು ಆಕಾಶದಲ್ಲಿ ಸೂರ್ಯ

ನನ್ನು ಕಂಡ ತಕ್ಷಣ ವಿಕಸಿಸುವ ಕಮಲದಂತೆ ಆಕೆ ಕಾಮ ತುಷ್ಟಿಯನ್ನು ಬಯಸಿದರೂ, ತನ್ನ ಜೀವನದ ಪರಿಪೂರ್ಣತೆಗೆ ತನ್ನ ಪತಿಯ ವ್ಯಕ್ತಿತ್ವದಲ್ಲಿ ಅಡಗಿರುವ ದೈವಿಕ ಗುಣಗಳತ್ತ ನೋಡುತ್ತಾಳೆ. ಸ್ತ್ರೀಯ ಜೀವನದ ಉದ್ದೇಶ ಕೇವಲ ತಾಯ್ತನದ ಬಯಕೆ ಎಂಬುದು ತಪ್ಪು ಭಾವನೆ. ಸ್ತ್ರೀಯಲ್ಲಿರುವ ಸಂತಾನ ಪ್ರೇರಣೆಗೆ ಗಹನವಾದ ಗುರಿಯಿಲ್ಲ. ಯಾವ ಮೂಲಕವಾದರೂ, ತಪ್ಪು ಮಾರ್ಗವನ್ನು ಅನುಸರಿಸಿಯಾದರೂ ಶಿಶುವನ್ನು ಹಡೆಯಲೇಬೇಕೆಂಬ ಆಸೆ ಸ್ತ್ರೀಗೆ ಇರುವುದಿಲ್ಲ. ಆಕೆಯ ಆ ಪ್ರೀತಿಯಲ್ಲಿ ಅಲ್ಪತನವಾಗಲಿ, ಕುತಂತ್ರವಾಗಲಿ ಇರುವುದಿಲ್ಲ. ಮಾತೆಯಾಗಬೇಕೆಂಬ ಹಂಬಲ ಸ್ತ್ರೀಯನ್ನು ಪರಿಶುದ್ಧಳನ್ನಾಗಿ ಮಾಡುತ್ತದೆ; ಆದ್ದರಿಂದಲೆ ಗರ್ಭಿಣಿ ಬಲು ಸುಂದರವಾಗಿ ಕಾಣುತ್ತಾಳೆ. ಜನನಿ ಪವಿತ್ರಳು. ಯಾವ ಸ್ತ್ರೀಯೂ ಪ್ರೇಮದ ವ್ಯೂಹದಲ್ಲಿ ಕುರೂಪಿಯಾಗಿ ಕಾಣುವುದಿಲ್ಲ.

ಸ್ತ್ರೀಯ ಶೀಲವನ್ನು ಹಾಳುಮಾಡಿದಾಗ ಪುರುಷರು ಅದರಿಂದ ಉಂಟಾಗುವ ದುಷ್ಫಲವನ್ನು ಅನುಭವಿಸಲೇಬೇಕು; ಶಿಶುವು ವ್ಯಕ್ತಿಗಳ ಆಯ್ಕೆ ಮತ್ತು ಸಂತೋಷಕ್ಕೆ ಅನುಗುಣವಾಗಿ ಹುಟ್ಟುವುದಿಲ್ಲ. ಜನ್ಮದಾತನ ನೈತಿಕ ಮತ್ತು ಮಾನಸಿಕ ಗುಣಗಳು ಶಿಶುವನ್ನು ಆವರಿಸುತ್ತವೆ. ಜಗತ್ತಿನಲ್ಲಿ ಅನಾಗರಿಕ ಜನಾಂಗವೊಂದು ಹುಟ್ಟಿಕೊಳ್ಳುತ್ತದೆ. ಎಲ್ಲಿ ಪುರುಷರು ಸ್ತ್ರೀಯರನ್ನು ಗೌರವಿಸುವುದಿಲ್ಲವೊ ಅಲ್ಲಿ ವಿಪತ್ತಿನ ಭಯ ನಿರಂತರವಾಗುತ್ತದೆ. ಆದ್ದರಿಂದ, ಆಶ್ರಯವಿಲ್ಲದ ಸ್ತ್ರೀಯರಿಗೆ ದುರ್ಮಾರ್ಗಿಗಳಿಂದ ವಿಮೋಚನೆ ನೀಡಲು ಸಮಾಜವು ಸಂಘಸಂಸ್ಥೆಗಳನ್ನು ಸ್ಥಾಪಿಸಿ ಅವರನ್ನು ರಕ್ಷಿಸಬೇಕು.

ಸ್ತ್ರೀಸ್ವಾತಂತ್ರ್ಯವಾದ ಮಿತಿ ಮೀರಿದ ಫಲಾಪೇಕ್ಷೆಯುಳ್ಳದ್ದೆಂಬುದನ್ನು ನಾವು ಒಪ್ಪಲಾರೆವು. ನಮ್ಮ ಅಭಿಪ್ರಾಯದಲ್ಲಿ ಸ್ತ್ರೀಸ್ವಾತಂತ್ರ್ಯವಾದಿಗಳು ಸಫಲರಾಗಿದ್ದಾರೆಂದು ಹೇಳಲಾಗುವುದಿಲ್ಲ. ನೈತಿಕವಾಗಿ ಸ್ತ್ರೀಯರಿಗೆ ಸೇರಬೇಕಾದ ಹಕ್ಕುಗಳನ್ನು ಸ್ತ್ರೀಯರೇ ಸಾಧಿಸಿಕೊಳ್ಳುವ ಸೋಜಿಗಪ್ರಸಂಗ ಬಂದು ಆ ಪ್ರಸಂಗದಲ್ಲಿ ಸ್ತ್ರೀಯರು ಯಶಸ್ವಿಯಾಗುತ್ತಿದ್ದಾರೆ. ಅವರ ಗೌರವಯುತ ಜೀವನಕ್ಕೆ ಬೇಕಾದ ಉದ್ಯೋಗ, ಸರಿಯಾದ ಆದಾಯ, ವಸತಿ ಸೌಲಭ್ಯ, ವಿಶ್ರಾಂತಿ ವೇತನ, ಆರೋಗ್ಯ ವಿಮೆ ಇವೇ ಮುಂತಾದ ಸೌಲಭ್ಯಗಳು ಅವರಿಗೆ ದೊರಕಬೇಕು.

ಸ್ತ್ರೀಯರು ತಮ್ಮದೇ ಆದ ಅಪೂರ್ವ ಸಾಮರ್ಥ್ಯವನ್ನು ಜಾಗೃತಾವಸ್ಥೆಗೆ ತರದಿದ್ದರೆ ಏನು ಪ್ರಯೋಜನ? ಸಮಾಜ ಈ ಬಗ್ಗೆ ಸಹಕರಿಸದಿದ್ದರೆ ಸ್ತ್ರೀಯರು ಉದ್ಧಾರವಾಗಲಾರರು.

ಈ ಶತಮಾನದಲ್ಲಿ ಜನ ಸಂಪ್ರದಾಯಗಳನ್ನು ಉಲ್ಲಂಘಿಸಿ ಸ್ತ್ರೀ ಪುರುಷರು ಪರಸ್ಪರ ಒಪ್ಪಿ ಮಾಡಿಕೊಳ್ಳದ ವಿವಾಹ ಸುಖಮಯವಾಗಿರುವುದಿಲ್ಲವೆಂಬ ತೀರ್ಮಾನಕ್ಕೆ ಬಂದಿದ್ದಾರೆ. ವಿಕ್ಟೋರಿಯ ಯುಗದ ವಿವಾಹದ ಬಗ್ಗೆ ಪ್ರಸ್ತಾಪಿಸುತ್ತಾ ಚಾರ್ಲೆಸ್ ಲ್ಯೂಟಿನ್ಸ್, "ಬಲಾತ್ಕಾರದಿಂದ ಮಾಡುವ ವಿವಾಹವನ್ನು ಸಾರ್ವಜನಿಕವಾಗಿ ಒಪ್ಪಿ

ಕೊಳ್ಳುವುದು ಅಮಾನುಷವೇ ಸರಿ" ಎಂದು ಹೇಳಿದ್ದಾನೆ. ಸಮಾಜದಲ್ಲಿ ಮಾನವ ವ್ಯಕ್ತಿತ್ವ ಮತ್ತು ಗೌರವ ಉಳಿಯಬೇಕಾದರೆ ವಿವಾಹಕ್ಕೆ ನೈತಿಕ ಬೆಂಬಲದ ಅವಶ್ಯಕತೆ ಇದೆ. ಇಂದು ವಿವಾಹ ಹಳೆಯ ಕ್ರೂರ ಪದ್ಧತಿಗಳನ್ನು ಸಡಿಲಗೊಳಿಸಿದೆ. ವಧು ಅಥವಾ ವರನನ್ನು ಆರಿಸಿ ವಿವಾಹವನ್ನು ಏರ್ಪಡಿಸುವುದು ಹಿರಿಯರಿಗೆ ಸಂಬಂಧಿಸಿದ ವಿಚಾರವೇನೊ ಹೌದು. ಆದರೆ ವಿವಾಹ ಸಂಬಂಧದಲ್ಲಿ ಆಸ್ತಿ, ಸಾಮಾಜಿಕ ಸ್ಥಾನ ಮಾನ, ವಿದ್ಯೆ, ಜಾತಿಮತಗಳೆಂಬ ಅಭಿಮಾನ ಮೊದಲಾದುವನ್ನು ಪ್ರಧಾನವಾಗಿ ಪರಿಗಣಿಸುವುದು ವ್ಯಕ್ತಿಗೌರವಕ್ಕೆ ತಕ್ಕದಲ್ಲ. ಇಂದು ವಿವಾಹಕ್ಕಿರುವ ಏಕೈಕ ಅರ್ಹತೆ ಎಂದರೆ ವಿವಾಹವಾಗತಕ್ಕ ಗಂಡು-ಹೆಣ್ಣಿನ ಅನುರಾಗ ಮತ್ತು ಪರಸ್ಪರ ಅರಿವು. ತನ್ನ ಪ್ರಿಯನ ಸಾನ್ನಿಧ್ಯದಿಂದ, ಅವನ ಪ್ರೇಮದಿಂದ ಪುಲಕಿತಳಾಗದ ಸ್ತ್ರೀಯೆ ಇಲ್ಲ. ಅವಳ ಈ ಅಪೂರ್ವ ಅನುಭವ ಅವಳ ಸಹಜ ಪ್ರವೃತ್ತಿಗೆ ಹಾಗೂ ಆಕೆಯ ದೈವಿಕ ಗುಣಗಳಿಗೆ ಅನುಗುಣವಾಗಿದೆ. ಸ್ತ್ರೀ ಪ್ರೀತಿಸಿದಳೆಂದರೆ ವಿಶ್ವವನ್ನೇ ಲಕ್ಷಿಸ ಲಾರಳು. ಆಕೆಗೆ ಅದು ಅಪೂರ್ವ ಅನುಭವವೇ ಸರಿ. ಪ್ರೇಮದಲ್ಲಿ ತನ್ನ ಸರ್ವಸ್ವ ವನ್ನೂ ಪತಿಗೆ ಮುಡಿಪಾಗಿಡುವ ಸ್ತ್ರೀಯಂತೆ ಪುರುಷನು ಅವಳನ್ನು ಪ್ರೀತಿಸಲು ಸಾಧ್ಯವೆ ಎಂಬ ಪ್ರಶ್ನೆಯನ್ನು ಉತ್ತರಿಸುವುದು ಸುಲಭವಲ್ಲ. ಸ್ತ್ರೀಯ ಪವಿತ್ರ ಪ್ರೇಮ ಆಕೆಗೆ ತನ್ನ ಪತಿಯನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಸ್ವಾಭಾವಿಕವಾಗಿಯೇ ಕೊಡುತ್ತದೆ: ಸ್ವಯಂ ವರನನ್ನು ಆರಿಸಿಕೊಳ್ಳುವ ಹಕ್ಕು ಅವಳಿಗೇ ಸೇರಬೇಕು. ಸ್ವಯಂ ವಧುವನ್ನು ಆರಿಸಿಕೊಳ್ಳುವ ಪದ್ಧತಿ ಪುರುಷನಿಗೆ ಇಲ್ಲವೆಂದು ಕಾಣುತ್ತದೆ. ಸ್ತ್ರೀ ಮೋಹಿಸಿದಾಗಲೇ ಅವನು ಆಕೆಯ ಪ್ರೇಮಪಾಶಕ್ಕೆ ಬೀಳುವುದು. ವಿವಾಹದ ಪ್ರಾಮುಖ್ಯ ಸ್ತ್ರೀಯರಿಗೇ ಇದ್ದು ಅದರಲ್ಲಿ ಪುರುಷನ ಪಾತ್ರ ಕೇವಲ ಸಹಕಾರ ಮತ್ತು ಬೆಂಬಲವೆ ಆಗಿದೆ. ಈ ದೃಷ್ಟಿಯಿಂದಲೇ ಸ್ತ್ರೀಯ ಕೈ ಹಿಡಿಯಲು ಪುರುಷನಿಗಿರುವ ಉತ್ಸಾಹ, ಅವನ ಪ್ರೇಮಯಾಚನೆ ವಿಚಿತ್ರವಾಗಿ ಕಾಣುತ್ತದೆ. ಸ್ತ್ರೀಯ ಒಲವನ್ನು ಪಡೆಯುವ ಸಂಬಂಧವಾದ ಪುರುಷನ ಸಾಹಸ ಪ್ರಾಣಿಯ ಅನಾಗರಿಕ ವರ್ತನೆಯಂತೆ ಕಾಣುತ್ತದೆ. ಪ್ರಾಣಿವರ್ಗದಲ್ಲಿ ಗಂಡು ತನ್ನ ಬೇಟೆಯನ್ನು ಒರಟಾಗಿ ನಡೆಸಿ ಆಹಾರ ಕ್ಕಾಗಿ ಪ್ರಾಣಿಗಳನ್ನು ಕೊಲ್ಲುವಂತೆ ಪುರುಷ ತನ್ನ ಲೈಂಗಿಕ ತುಷ್ಟಿಯನ್ನು ಒರಟಾಗಿ ಪಡೆದುಕೊಳ್ಳುತ್ತಾನೆ. ಪ್ರಾಣಿವರ್ಗದಲ್ಲೂ ಸಹ ಪ್ರಣಯದಲ್ಲಿ ನಯವಾದ ವರ್ತನೆ ಇದೆ. ಪ್ರಾಣಿಗಳಿಗೂ ಮತ್ತು ಮಾನವರಿಗೂ ಪ್ರಣಯದಲ್ಲಿ ಮುಖ್ಯ ವ್ಯತ್ಯಾಸವೆಂದರೆ ಪ್ರಾಣಿಗಳಲ್ಲಿ ಹೆಣ್ಣು ಮೊದಲು ಹೆಜ್ಜೆಯನ್ನಿಟ್ಟು ಪ್ರೇಮಯಾಚನೆ ಮಾಡಿದರೆ ಮಾನವ ರಲ್ಲಿ ಪುರುಷ ಮೊದಲ ಹೆಜ್ಜೆಯನ್ನಿಟ್ಟು ಸ್ತ್ರೀಯಲ್ಲಿ ಪ್ರೇಮಯಾಚಿಸುತ್ತಾನೆ. ಪ್ರೇಮಿಸು ವುದೂ ಒಂದು ಕಲೆ; ಈ ಕಲೆಯಲ್ಲಿ ಗಂಡು-ಹೆಣ್ಣಿನ ಪರಸ್ಪರ ಲೈಂಗಿಕ ಬೇಡಿಕೆ ಗಳಿರುತ್ತವೆ. ಈ ಲೈಂಗಿಕ ಬೇಡಿಕೆಗೆ ವಿವಾಹದ ಮೂಲಕ ಪವಿತ್ರತೆಯನ್ನು ರೂಪಿಸ ದಿದ್ದರೆ ಅರಿಷ್ಟವಾಗುತ್ತದೆ.

ಸ್ತ್ರೀಯನ್ನು ದುರ್ಮಾರ್ಗಕ್ಕೆಳೆದು ಅವಳ ಉತ್ತಮ ಗುಣಗಳನ್ನು ಕೆಡಿಸುವುದರಲ್ಲಿ ಭಾರತೀಯ ಚಲನಚಿತ್ರಗಳ ಪಾತ್ರ ಪ್ರಮುಖವೆಂದು ಹೇಳಬಹುದು. ಅನೇಕ ಯುವತಿಯರು ತಮ್ಮ ನೆಚ್ಚಿನ ನಟಿಯ ಪಾತ್ರವನ್ನು ಜೀವನದಲ್ಲಿ ವಹಿಸಲು ಪ್ರಯತ್ನಿಸುತ್ತಾರೆ. ಚಲನಚಿತ್ರದಲ್ಲಿ ಅವಳು ಪ್ರದರ್ಶಿಸುವ ನಟನೆಯನ್ನು, ಅವಳು ತೊಡುವ ಉಡುಗೆಯನ್ನು ಅನುಕರಿಸುತ್ತಾರೆ. ಚಲನಚಿತ್ರಗಳಲ್ಲಿ ಪ್ರಾಣಿಯಂತಿರುವ ಪುರುಷ ವಿವಾಹವಾಗಲು ಮಾಡಬೇಕಾಗಿರುವ ಮುಖ್ಯ ಕೆಲಸ ನಾಯಕಿಯ ಮುಂದೆ ವಿಚಿತ್ರವಾಗಿ ವರ್ತಿಸುವುದು, ಪ್ರೇಮಗೀತೆಯನ್ನು ಹಾಡುವುದು, ಅವಳನ್ನು ಓಡಿಸಿಕೊಂಡು ಹೋಗಿ ಕಿಲಕಿಲನೆ ಅವಳೊಂದಿಗೆ ನಕ್ಕು, ಏನೋ ಸಾಧಿಸಿದಂತೆ ಕಾಣುವುದು–ಇವುಗಳೇ ಆಗಿವೆ. ಸ್ತ್ರೀಯ ಪಾತ್ರವಾದರೋ ಅವಳ ದೇಹವನ್ನು ಪ್ರೇಕ್ಷಕರಿಗೆ ನಾನಾ ಭಂಗಿಗಳಲ್ಲಿ ಪ್ರದರ್ಶಿಸುವುದೇ ಆಗಿದೆ. ನಿತ್ಯ ಜೀವನದಲ್ಲಿ ಸ್ತ್ರೀ ಮಾರುಕಟ್ಟೆಯಲ್ಲಿ ಸಿಗುವ ವಸ್ತುವೇನೂ ಅಲ್ಲ. ಪುರುಷನಿಗೆ ಪ್ರಪಂಚದಲ್ಲಿ ಸುತ್ತಾಡಿ ಅನೇಕ ವಿಷಯಗಳನ್ನು ಕಲಿತು ತನಗೆ ಸರಿಯಾದ ಹೆಂಡತಿಯನ್ನು ಆರಿಸಿಕೊಳ್ಳುವ ಅವಕಾಶ ಸಿಗಬೇಕು. ಜೀವನ ಸಿನಿಮಾ ಕಥೆಯಲ್ಲ.

ಸ್ತ್ರೀಯಲ್ಲಿ ಸಾಕಷ್ಟು ಯುಕ್ತಾಯುಕ್ತಾ ಪರಿಜ್ಞಾನ ಮತ್ತು ವಿರಕ್ತ ಪ್ರಕೃತಿ ಇಲ್ಲದಿದ್ದರೆ ಆಕೆ ಸ್ವಯಂ ವರನನ್ನು ಆರಿಸಿಕೊಳ್ಳಲು ಯುಕ್ತಳಲ್ಲ. ಯಾವ ಸ್ತ್ರೀ ದೈಹಿಕ ಪ್ರಚೋದನೆಗಳನ್ನು ಹತೋಟಿಯಲ್ಲಿಟ್ಟುಕೊಂಡು ತನ್ನ ಅಪೇಕ್ಷೆಗಳನ್ನು ನಿಗ್ರಹಿಸಲಾರಳೋ ಅಂಥ ಸ್ತ್ರೀ ಬೆಳಕಿಗೆ ಬೀಳುವ ಪತಂಗದಂತೆ. ಸ್ತ್ರೀಯನ್ನು ಇಂಥ ಪರಿಸ್ಥಿತಿಗಳಿಂದ ಬಿಡಿಸಲು ಸಮಾಜವು ನೈತಿಕ ಪರಿಸರವನ್ನು ಕಲ್ಪಿಸಿಕೊಡಬೇಕು. ಸ್ತ್ರೀಯ ಶೀಲವನ್ನೇ ಒತ್ತಿಹೇಳಿ ಸ್ತ್ರೀಯನ್ನು ತುಚ್ಛವಾಗಿ ಭಾವಿಸುವ ಸಮಾಜ ಎಂದಿಗೂ ಆದರ್ಶ ಸಮಾಜವಾಗದು. ಪ್ರೀತಿಯ ಚೇತನವೇ ತ್ಯಾಗಕ್ಕೂ ಕಾರಣ ಮತ್ತು ಆತ್ಮದ ಅಳಿವಿಗೂ ಕಾರಣ. ಸ್ತ್ರೀಗೆ ತ್ಯಾಗವನ್ನು ಸುಲಭವಾಗಿ ಬೋಧಿಸಬಹುದು. ಆದರೆ ಮಠದ ಜೀವನ ಸ್ತ್ರೀ ಮನಸ್ಸಿಗೆ ವಿರುದ್ಧವಾದದ್ದು. ಮನುಷ್ಯನಲ್ಲಿರುವ ಪ್ರಾಣಿ ಪ್ರವೃತ್ತಿಯನ್ನು ಪಳಗಿಸಿ ಸಮಾಜಕ್ಕೆ ಒಪ್ಪುವಂತೆ ಆತನಲ್ಲಿ ಹೊಸ ವ್ಯಕ್ತಿತ್ವವನ್ನು ರೂಪಿಸಲು ಸ್ತ್ರೀ ಸರ್ವಸ್ವವನ್ನೂ ತ್ಯಾಗಮಾಡುತ್ತಾಳೆ. ಪ್ರೇಮಬಂಧನದಲ್ಲಿ ಸಿಲುಕಿದ ಸ್ತ್ರೀಗೆ ಮೃತ್ಯುವಿನ ಭಯವಿರುವುದಿಲ್ಲ. ಸ್ತ್ರೀ ತನ್ನ ಹಠವನ್ನು ಪ್ರೇಮಕ್ಕಾಗಿ ಹಾಗೂ ತನಗೆ ಪ್ರಿಯವಾದ ವಸ್ತುವನ್ನು ವಶಪಡಿಸಿಕೊಳ್ಳುವುದಕ್ಕಾಗಿ ಭೂಮಿಯ ಮೇಲಣ ಯಾವ ಆಯುಧಕ್ಕೂ ಕಡಿಮೆ ಇಲ್ಲದಂತೆ ಉಪಯೋಗಿಸುವಳು. ಈ ಹಠಮಾರಿತನ ಮನುಷ್ಯನ ಗಂಡಸುತನಕ್ಕಿಂತ ಬಲವಾದದ್ದು. ಆಕೆಯ ಸತ್ಯಾಗ್ರಹಶಕ್ತಿಯೂ ಸಹ ಪ್ರೀತಿಯ ಒಂದು ಆಯುಧವಿದ್ದಂತೆ. ಯಾವ ಸ್ತ್ರೀಗೆ ಪ್ರೀತಿಯ ಶಕ್ತಿ ಇದೆಯೋ ಅಂಥ ಸ್ತ್ರೀ ತನ್ನ ಉದ್ದೇಶ ಸಾಧನೆಗೆ ಸತ್ಯಾಗ್ರಹವನ್ನು ಯಶಸ್ವಿಯಾಗಿ ಹೂಡಬಲ್ಲಳು.

ತ್ಯಾಗಪೂರ್ಣವಾದ ಸ್ತ್ರೀಯ ಪ್ರೀತಿ ವಿಶ್ವಾಸಗಳನ್ನು ಸಮಾಜ ಬಹಿಷ್ಕರಿಸುವುದರಿಂದ ಸಾರ್ವಜನಿಕ ಜೀವನದಲ್ಲಿ ನಾವು ಅನೇಕ ತೊಂದರೆಗಳನ್ನು ಅನುಭವಿಸು

ತ್ತಿದ್ದೇವೆ. ಸಾರ್ವಜನಿಕ ಕ್ಷೇತ್ರದಿಂದ ಸ್ತ್ರೀಯ ಗೌರವ ಹಾಗೂ ಘನತೆಯನ್ನು ಹೊರಹಾಕಿರುವುದರಿಂದ ಸಾರ್ವಜನಿಕ ಜೀವನವು ತೊಂದರೆಗೊಳಗಾಗಿದೆ. ಕ್ಲಿಯೊ ಪಾತ್ರ, ಹಿರೊಡಿಯಸ್, ಲೇಡಿ ಮ್ಯಾಕ್‌ಬೆತ್ ಮೊದಲಾದ ಸ್ತ್ರೀಯರು ಸ್ತ್ರೀ ಸಮೂಹಕ್ಕೇ ಕೆಟ್ಟ ಹೆಸರನ್ನು ತರುವಂಥವರಾಗಿದ್ದಾರೆ. ಕುಂತಿದೇವಿ, ಗಾಂಧಾರಿ, ನೈಟಿಂಗೇಲ್ ಮೊದಲಾದ ಆದರ್ಶ ಮಹಿಳೆಯರನ್ನು ನಾವು ಮರೆತುಬಿಡುತ್ತೇವೆ. ಪ್ರಾಚೀನ ಭಾರತ ಮತ್ತು ಚೀಣಗಳಲ್ಲಿ ದುಷ್ಟ ಮಹಿಳೆಯರಿಗೆ ಮನ್ನಣೆ ಕೊಟ್ಟಿಲ್ಲ. ಪತಿವ್ರತೆಯಾದ ಅಹಲ್ಯೆಯೂ ಸಹ ಶಾಪಕ್ಕೀಡಾಗಿದ್ದಾಳೆ. ಸ್ತ್ರೀಯನ್ನು ಎಲ್ಲಿ ಪೂಜಿಸುವುದಿಲ್ಲವೋ ಅಲ್ಲಿ ಜನರು ಹಾಳಾಗುವರೆಂಬ ನಂಬಿಕೆಯುಳ್ಳ ಈ ದೇಶಗಳು ಸ್ತ್ರೀಯಲ್ಲಿ ದೈವತ್ವವನ್ನು ಕಂಡುಕೊಂಡಿವೆ. ಸಾರ್ವಜನಿಕ ಜೀವನದಲ್ಲಿ ಭಾಗವಹಿಸಿ ಸೇವೆ ಸಲ್ಲಿಸಲು ಶಕ್ತರಾದ ಸ್ತ್ರೀಯರನ್ನು ಸಮಾಜದಿಂದ ದೂರವಿಡುವ ಕೃತ್ಯಕ್ಕಿಂತ ಬೇರೊಂದು ಹೀನಕೃತ್ಯವೇ ಇಲ್ಲ. ಮಾನವರಂತೆ ನಡೆದುಕೊಳ್ಳುವ ಹಕ್ಕನ್ನು ಸಮಾಜ ಸ್ತ್ರೀಯರಿಗೆ ನಿರಾಕರಿಸಿದೆ.

ನಾವು ವಿವಾಹವನ್ನು ಸ್ತ್ರೀಯ ವೈಯಕ್ತಿಕ ಒಪ್ಪಂದವೆಂದು ಹೇಳಿರುವೆವಲ್ಲದೆ, ಸ್ತ್ರೀಯ ಪ್ರೇಮವೇ ವಿವಾಹಕ್ಕೆ ಮುಖ್ಯ ಆಧಾರವೆಂದೂ ಹೇಳಿದ್ದೇವೆ. ಪ್ರೀತಿಗೆ ವಿವಾಹದ ಚೌಕಟ್ಟಿನಲ್ಲಿ ಅವಕಾಶವಿಲ್ಲದೆ ಅದು ಬೇರೆ ರೀತಿಯಲ್ಲಿ ವ್ಯಕ್ತವಾದರೆ ಅದರ ಮೌಲ್ಯವೇ ಬೇರೆಯಾಗಿದ್ದು ಅದು ಸ್ವಇಚ್ಛೆಯ ಸಾಧನವಾಗುತ್ತದೆ. ಇಂಥ ಸ್ವಇಚ್ಛಾ ಪೂರ್ಣವಾದ ಪ್ರೇಮದಲ್ಲಿ ಸಹ ಯಾವ ಸ್ತ್ರೀಯೇ ಆಗಲಿ, ಸದುದ್ದೇಶದಿಂದ ತಾಯ್ತನಕ್ಕೆ ಒಪ್ಪಿಕೊಂಡಲ್ಲಿ ಅಂತಹ ಸ್ತ್ರೀ ಗೌರವಕ್ಕೆ ಪಾತ್ರಳಾಗುತ್ತಾಳೆ. ಪ್ರೀತಿಯ ಬಂಧನವಿಲ್ಲದೆ ಕೇವಲ ಕಾಮತುಷ್ಟಿಯಿಂದ ಜನಿಸಿದ ಮಕ್ಕಳು ಹಾದರದ ಮಕ್ಕಳೆನಿಸಿ ಕೊಳ್ಳುತ್ತಾರೆ. ತಾಯಿಯ ಉತ್ತಮ ಸಂಕಲ್ಪ ಮತ್ತು ಆದರ್ಶ ಪ್ರೇಮದಿಂದ ಹುಟ್ಟಿದ ಮಕ್ಕಳು ದೇವರ ಮಕ್ಕಳಂತೆ. ವಿವಾಹ ಬಂಧನವಿಲ್ಲದೆ ಜನಿಸಿದ ಮಕ್ಕಳನ್ನು ಔರಸಪುತ್ರರೆಂದು ಪರಿಗಣಿಸುವುದರಿಂದ ಅದು ಸ್ತ್ರೀಯರಲ್ಲಿ ಮಾನಸಿಕ ಪರಿಣಾಮಗಳನ್ನುಂಟುಮಾಡಿ ಅವರ ಜೀವನವನ್ನು ನಾಶಗೊಳಿಸುತ್ತದೆ.

ಧರ್ಮಪಥದಲ್ಲಿ ಸಾಗುವ ಪ್ರತಿಯೊಂದು ಸಮಾಜವೂ ಸ್ತ್ರೀ ಅವಿವಾಹಿತಳಾದರೂ ಸಹ ಆಕೆ ಸಜ್ಜನರ ನಡುವೆ ಸುರಕ್ಷಿತಳಾಗಿ ಬಾಳಲು ಅವಕಾಶ ಕಲ್ಪಿಸಬೇಕು. ಸ್ತ್ರೀಯಾಗಲಿ ಪುರುಷನಾಗಲಿ ಬಡತನ ಹಾಗೂ ಸಾಮಾಜಿಕ ಅಭದ್ರತೆಯಿಂದ ಪಾರಾಗದಿದ್ದರೆ ತಮ್ಮ ವ್ಯಕ್ತಿತ್ವವನ್ನು ಬೆಳೆಸಿಕೊಳ್ಳಲಾರರು. ಸಹಿಸಲಾಗದಂಥ ಬಡತನ ಅನೇಕ ದುರ್ವ್ಯಾಪಾರಗಳಿಗೆ ಕಾರಣವಾಗಿದೆ. ಪುರುಷನನ್ನು ತೃಪ್ತಿ ಪಡಿಸುವ ಜೀವನ ಮಟ್ಟವೇ ಸ್ತ್ರೀಗೂ ಇರಬೇಕು. ಇದರಿಂದ ಸ್ತ್ರೀಯೂ ಕೂಡ ಸಮಾಜದಲ್ಲಿ ಪುರುಷನಷ್ಟೇ ಭದ್ರವಾದ ತಳಹದಿ ಮೇಲೆ ನಿಂತಂತಾಗುತ್ತದೆ. ಒಂದೇ ದಾರಿದ್ರ್ಯದಲ್ಲೇ ಬೆಳೆದು ಬಂದ ಗಂಡು ಮಗುವಿಗಿಂತ ಹೆಣ್ಣು ಮಗುವು ಹೆಚ್ಚು ಕುರೂಪಿಯಾಗುತ್ತದೆ. ಹೆಣ್ಣು ಮಕ್ಕಳಿಗೆ ಕುಟುಂಬ ಪರಿಸರದಲ್ಲಿ ದೊರಕುವ ಒಲುಮೆ ಬಹಳ

ಅಗತ್ಯ. ಸ್ತ್ರೀಯಲ್ಲಿರುವ ಪ್ರೀತಿ ನಿರಂತರ ಪೋಷಣೆಯನ್ನೂ ಹಾಗೂ ಆ ಪ್ರೀತಿಗೆ ಭಾಗಿಯಾಗುವ ವಸ್ತುಗಳನ್ನೂ ಕೋರುತ್ತದೆ. ಪ್ರೀತಿ ಎರಡು ಹೃದಯಗಳನ್ನು ಬೆಸೆಯುವ ಶಕ್ತಿಯಾದರೆ ಅದೇ ಪ್ರೀತಿ ಹೃದಯಗಳನ್ನು ಬೇರ್ಪಡಿಸುವ ಶಕ್ತಿಯನ್ನೂ ಹೊಂದಿರುತ್ತದೆ. ಆದ್ದರಿಂದಲೇ ಸ್ತ್ರೀಯ ಪ್ರೇಮ ದ್ವಿಮುಖವಾದುದೆಂಬ ಕಲ್ಪನೆ ಇದೆ. ಅದು ಒಬ್ಬ ಮನುಷ್ಯನ ಜೀವನವನ್ನು ಬರಿದು ಮಾಡುವ ಹಾಗೆಯೇ ಅವನ ಜೀವವನ್ನು ತುಂಬುವ ಶಕ್ತಿಯನ್ನೂ ಹೊಂದಿದೆ. ಪ್ರೀತಿಗೆ ಭೇದಭಾವನೆಯಿಲ್ಲ; ಕೀಳು–ಮೇಲೆಂಬುದಿಲ್ಲ. ಪ್ರೇಮಕ್ಕೊಳಗಾದ ಆತ್ಮಗಳು ಸಮವಾಗಿ ವರ್ತಿಸುತ್ತವೆ. ಸ್ತ್ರೀಯ ಪ್ರೇಮದಲ್ಲಿ ತ್ಯಾಗವು ಅವಿಭಾಜ್ಯ ಭಾಗ. ತನ್ನ ಪ್ರಿಯನಿಗೆ ಏನೇ ಕಷ್ಟ ಬರಲಿ ಅದನ್ನು ತಾನೂ ಸಹಿಸುತ್ತಾಳೆ. ದೇಶಭ್ರಷ್ಟನಾದ ಗಂಡನನ್ನು ಹೆಂಡತಿ ಅನುಸರಿಸಿ ಹೋಗಿದ್ದಾಳೆ. ಸೆರೆಮನೆಗಳಿಗೆ ತನ್ನ ಪತಿಯನ್ನು ಹಿಂಬಾಲಿಸಿ ಹೋಗಿದ್ದಾಳೆ. ದೃಷ್ಟಿಯನ್ನು ಕಳೆದುಕೊಂಡಾಗ ಇಲ್ಲವೆ ಇತರ ಭಯಂಕರ ರೋಗಗಳಿಂದ ನರಳುವಾಗಲೂ ಪತಿಗೆ ಸ್ತ್ರೀಯು ತನ್ನ ಪ್ರೀತಿಯನ್ನು ಧಾರೆಯೆರೆಯುತ್ತಾಳೆ. ಸತ್ಯವಾನನನ್ನು ವಿಧಿ ಮೃತ್ಯುವಿಗೆ ಈಡುಮಾಡುತ್ತದೆಂದು ತನ್ನ ತಂದೆ–ತಾಯಿಂದರಿಂದ ತಿಳಿದರೂ ಕೂಡ ಸಾವಿತ್ರಿ ತಾನು ಮೆಚ್ಚಿದ ಆತನನ್ನೇ ವರಿಸಿದ್ದಾಳೆ. ಇದೇ ರೀತಿ ತಮ್ಮ ಸ್ತ್ರೀಯರು ಪರಪುರುಷ ಸಂಬಂಧವಿಟ್ಟುಕೊಂಡಿದ್ದರೆಂದು, ಇಲ್ಲವೆ ವಿವಾಹಕ್ಕೆ ಮೊದಲು ತಾಯಿಯಾಗಿದ್ದರೆಂದು ಅಥವ ತಮಗಿಂತಲೂ ವಯಸ್ಸಿನಲ್ಲಿ ಹಿರಿಯವರೆಂದು ಇಲ್ಲವೇ ಖಾಯಿಲೆಯಿಂದ ನರಳುತ್ತಿರುವರೆಂದು ಕೈಬಿಡದ ಹಲವಾರು ಪುರುಷರ ದೃಷ್ಟಾಂತಗಳೂ ನಮ್ಮಲ್ಲಿವೆ.

ವಿವಾಹವು ಗಂಡು–ಹೆಣ್ಣಿಗೆ ಸಮಾಜದಲ್ಲಿ ಸುಭದ್ರವಾದ ಸ್ಥಾನವನ್ನು ಕಲ್ಪಿಸುವ ವ್ಯವಸ್ಥೆ. ಅದರಿಂದ ಆಗುವ ಅನುಭವ ಮತ್ತು ಅದರ ಮೂಲಕ ಜೀವನದ ಅನೇಕ ಸಮಸ್ಯೆಗಳನ್ನು ಎದುರಿಸಲು ಗಂಡ ಹೆಂಡಂದಿರು ಪಡೆಯುವ ದಿವ್ಯಶಕ್ತಿ ಅದ್ಭುತವಾದವು. ವಿವಾಹ ಜೀವನದಲ್ಲಿ ಆಗಾಗ್ಗೆ ಏಳುವ ಬಿರುಗಾಳಿ ನಾವಿಕರು ಭಯಪಡುವಂಥ ಚಂಡಮಾರುತದ ಭೀಕರತೆಯನ್ನು ಹೊಂದಿಲ್ಲ. ಆದ್ದರಿಂದ ಸಮಾಜದಲ್ಲಿ ಜನ ವೈಯಕ್ತಿಕ ಜೀವನ ನಡೆಸಲು ಹಾಗೂ ಇಚ್ಛೆಯಿಂದ ಪ್ರೇಮಿಸಿ ವಿವಾಹವಾಗಲು ಅವಕಾಶ ದೊರೆತಾಗ ಅವರ ಜೀವನ ಸುಭದ್ರವಾಗುತ್ತದೆ. ಇದೇ ಸಂದರ್ಭದಲ್ಲಿ ಇಚ್ಛಾವಿವಾಹಗಳಿಂದ ಆಗುವ ಅನಾಹುತಗಳನ್ನು ತಪ್ಪಿಸಲು ಸಮಾಜ ತಕ್ಕ ಕ್ರಮ ಕೈಗೊಳ್ಳಬೇಕು. ವ್ಯಕ್ತಿಸ್ವಾತಂತ್ರ್ಯಕ್ಕೆ ಸಮಾಜ ಅನುಮೋದನೆಯನ್ನು ನೀಡಿದಾಗ ಜೀವನ ಸುಗಮವಾಗುತ್ತದೆ. ಅಂಥ ಸಮಾಜಗಳಲ್ಲಿ ವಿವಾಹಗಳು ಐಚ್ಛಿಕವಾಗಿರುತ್ತವಲ್ಲದೆ, ವಿಚಾರಪೂರ್ಣವಾಗಿಯೂ ಕೂಡಿರುತ್ತವೆ. ಸಂನ್ಯಾಸಿನಿಯರ ಜೀವನದಲ್ಲಿರುವಷ್ಟೇ ನೈತಿಕ ಮತ್ತು ಉದಾತ್ತ ಧ್ಯೇಯಗಳು ಇಂಥ ಸಮಾಜದ ಸ್ತ್ರೀಯರಲ್ಲೂ ಇರುತ್ತವೆ. ವಿವಾಹಗಳು ಎಲ್ಲಿ ನಿವೇದನೆ ಮತ್ತು ತ್ಯಾಗದ ದೀಕ್ಷೆಯ ಮೇಲೆ ನಿಂತಿವೆಯೋ ಅಲ್ಲಿ ಅವು ನೈತಿಕ ಬಲವನ್ನೂ ಹೊಂದುತ್ತವೆ. ವಿವಾಹ ವಿಚ್ಛೇದನಗಳ

ಕಾರಣ ಮತ್ತು ಪ್ರಮಾಣ ಸಮಾಜದಲ್ಲಿ ವಿವಾಹಗಳು ಗಂಡ ಹೆಂಡಂದಿರನ್ನು ಎಷ್ಟರ ಮಟ್ಟಿಗೆ ಘಾಸಿಗೊಳಿಸಿವೆ ಎಂಬುದನ್ನು ವ್ಯಕ್ತಪಡಿಸುತ್ತವೆ. ಸ್ತ್ರೀ-ಪುರುಷರ ಸಂಬಂಧ ಆಕರ್ಷಣೆ ಮತ್ತು ಕಾಮಕ್ಕೆ ಮಾತ್ರವೇ ಮೀಸಲಾಗಿದ್ದರೆ ವೈವಾಹಿಕ ಜೀವನ ಬಹಳ ಕಾಲ ಸಾಗುವುದಿಲ್ಲ. ಸ್ತ್ರೀ ಪುರುಷರ ಬಾಳು ಅವರ ಆಸೆ-ಆಕಾಂಕ್ಷೆಗಳ ಮೇಲೆ ಹಾಗೂ ಆದರ್ಶಗಳ ಮೇಲೆ ಬಲುಮಟ್ಟಿಗೆ ನಿಲ್ಲುತ್ತದೆ. ಕೇವಲ ಕಾಮತುಷ್ಟಿಗಾಗಿ ವಿವಾಹ ವಾಗುವವರು ತಮ್ಮ ಇಚ್ಛೆ ಪೂರೈಸಿದ ಮೇಲೆ ವಿವಾಹವಿಚ್ಛೇದನ ಪಡೆದುಕೊಳ್ಳ ಬಹುದು ; ಹಣಕ್ಕಾಗಿ ವಿವಾಹವಾಗುವವರು ಹಣ ಮುಗಿದ ಮೇಲೆ ಬೇಸರಪಡಬಹುದು. ಇಂಥ ನಿದರ್ಶನಗಳನ್ನು ಪಾಶ್ಚಾತ್ಯ ದೇಶಗಳ ವಿವಾಹಪದ್ಧತಿಯಲ್ಲಿ ಕಾಣಬಹುದು. ವಿವಾಹವು ಹಕ್ಕುಬಾಧ್ಯತೆಗಳ ಮಟ್ಟಕ್ಕೆ ಇಲ್ಲವೇ ಸಿವಿಲ್ ಕರಾರಿನ ಮಟ್ಟಕ್ಕೆ ಇಳಿದಾಗ ಸಮಾಜದ ನೈತಿಕಮಟ್ಟವೂ ಇಳಿಯುತ್ತದೆ. ವಿವಾಹದ ಒಪ್ಪಂದ ನ್ಯಾಯಾಂಗಕ್ಕೆ ಒಳಪಟ್ಟಾಗ ವ್ಯಕ್ತಿಯ ಗೌರವಕ್ಕೆ ಕೊರತೆಯುಂಟಾಗುವುದು.

ಸಮಾಜದಲ್ಲಿ ಸ್ತ್ರೀಪುರುಷರು ಘನವಾಗಿ ಬಾಳಬೇಕು. ಕಾಮತುಷ್ಟಿಯೇ ಜೀವಿತದ ಪರಮ ಧ್ಯೇಯವಲ್ಲ. ಜೀವಿತದ ಅನೇಕ ಅವಶ್ಯಕತೆಗಳಲ್ಲಿ ಲೈಂಗಿಕ ತುಷ್ಟಿ ಒಂದು ಅಂಶ ಮಾತ್ರ. ಸ್ತ್ರೀಪುರುಷರು ಪವಿತ್ರ ವಿವಾಹ ಬಂಧನದಿಂದ ಬಂಧಿತರಾಗಿ ಜೀವನವನ್ನು ಸಮಾಜ ಮೆಚ್ಚುವಂತೆ ರೂಪಿಸಿಕೊಂಡಾಗ ಮಾತ್ರ ಅವರು ಗೌರವಕ್ಕೆ ಪಾತ್ರರಾಗುತ್ತಾರೆ. ವಿವಾಹಕ್ಕಿರುವ ಧಾರ್ಮಿಕ ಹಿನ್ನೆಲೆಯನ್ನರಿತು ಸ್ತ್ರೀ ಪುರುಷರು ವೈವಾಹಿಕ ಜೀವನವನ್ನು ಸ್ವೀಕರಿಸಬೇಕು. ಕುಟುಂಬ ಜೀವನದಲ್ಲಿ ಪುರುಷನಿಗೆ ಸ್ತ್ರೀ ಸಕಲ ವಿಧಗಳಲ್ಲೂ ನೆರವುನೀಡುತ್ತಾಳೆ. ಆಕೆ ಪುರುಷನಿಗೆ ಸಮಾಲೋಚನೆಯಲ್ಲಿ ಮಂತ್ರಿಯಾಗಿಯೂ, ರತಿಸುಖದಲ್ಲಿ ಪಣ್ಯಾಂಗನೆಯಾಗಿಯೂ, ಅನ್ನವಿಡುವುದರಲ್ಲಿ ಮಾತೆಯಾಗಿಯೂ, ಸರಸಸಲ್ಲಾಪಗಳಲ್ಲಿ ಸ್ನೇಹಿತೆಯಾಗಿಯೂ ವರ್ತಿಸುತ್ತಾಳೆ. ವೈಣಿಕನಿಗೆ ವೀಣೆ ಎಷ್ಟರಮಟ್ಟಿಗೆ ಆವಶ್ಯಕವೊ ಅಷ್ಟರಮಟ್ಟಿಗೆ ಮತಿವಂತಳಾದ ಹೆಂಡತಿ ಗಂಡನಿಗೆ ಆವಶ್ಯಕಳಾಗಿದ್ದಾಳೆ. ಪುರುಷನ ಜೀವಿತದಲ್ಲಿ ಮಧುರವಾಗಿ ಹೊಂದಿಕೊಳ್ಳುವ ಸರ್ವ ಗುಣಗಳನ್ನು ಆಕೆ ಹೊಂದಿರುವುದಲ್ಲದೆ ಅವನ ಜೀವಿತವನ್ನು ಆಕೆ ಸಾರ್ಥಕಗೊಳಿಸುತ್ತಾಳೆ. ಚೈತನ್ಯಪೂರ್ಣಳಾದ ಸ್ತ್ರೀಯ ಪ್ರಭಾವವಿಲ್ಲದಿದ್ದರೆ ಸಮಾಜವೇನಾಗುತ್ತಿತ್ತು ಎಂಬ ಪ್ರಶ್ನೆಯನ್ನು ಉತ್ತರಿಸುವವರು ಯಾರು ?

---

# ವಿಷಯ ಸೂಚಿ

## ಆಯ್ದ ಆಧಾರಗ್ರಂಥಗಳು


Amrit Kaur, *Challenge to Woman* (1946), New Literature, Allahabad, 1946.

Altekar. A. S., *The Position of Women in Hindu Civilisation*, Motilal Banarasidas, Banaras, 1956.

Anna Garlin Spencer, *Women's Share in Social Culture*, J. B. Lippincott Co., London, 1925.

Anthony M. Ludovici, *The Future of Woman* Today and Tomorrow Series, Kegan Paul & Co., London, 1936.

Alkar Joyce T. and Thomas, N. W., (Editors), *Women of all Nations* Vol I, (1908). Vol. II, 1909.

Baber, R. E., *Marriage and Family*, McFraw Hill Book Company, New York, 1939.

Banks. J. A., *Prosperity and Parenthood*, International Library of Sociology and Social Reconstruction, Routledge, 1954.

Briffault, *Mothers*: Vol. I – Chapters VII and VIII (1927), Allen & Unwin, London, 1927.

Bergler, E., *Conflict in Marriage*, The World's Work, Kingswood Survey, England, 1951.

Brink, *The Man and This Woman*, The World's Work, Kingswood Survey, England, 1949.

Blackmar and Gillin, *Outlines of Sociology*, Macmillan & Co., New Yoak, 1919.

Cunnington, C. W., *Women*, Burke, London, 1950.

Caton, A. R., *The Key of Progress: A Survey of the Status of Women in India*, Oxford University Press, 1930.

Clyde Lindon Kind, *Women in Public Life*, The Annals of the American Academy of Political and Social Science, 1914, (Nov.).

Das, S. R., *American Women in Marriage*, The Philosophical Library, New York, 1948.

Gujarati, B. S., *Women of East and West* Here Publications, Lahore, (1944).

Goldstein, S. E., *Marriage and Family Counselling* McGraw Hill, New York, 1945.

George Rylet Scott, *History of Prostitution* (1936), T. Werner Laurie, Ltd., London.

Harding, M. E., *Way of All Women*, Longmans, London, 1933.

Harding, M. E., *Women's Mysteries*, Longmans, London, 1924.

Jung, M., *Modern Marriage* (1947), F. S. Cropts & Co., New York.

Jhonson, G. W., *The Evolution of Woman*, (1926), Robert Holden & Co., Ltd., London.

John Steward Mill, *The Subjection of Women*, (1906).

Jowett, B. (Ed.), *The Republic of Plato*, Vol. II, Chapters: The Community of Wives and Children, 1928.

Kirsten Gloerfelt Tarp, (Ed.), *Women in the Community*, Oxford University Press, London.

Keyserling, C. H., *Book of Marriage*, Jonathan Cape, London, 1927.

Lord Merrivale, *Marriage and Divorce*, Allen & Unwin, London, 1936.

Lofts, N., *Women in the Old Testament*, The Macmillan Co., Ltd., New York, 1950.

Ludovici, A. M., *Enemies of Women*, Carroll & Nicholson, Ltd., London, 1848.

Mitra, S. M. and Her Highness the Maharani of Baroda, *The Position of Women in Indian Life* (1911), Longmans, Green & Co., London.

Mohandas Karamchand Gandhi, *Women and Social Injustice*, Navjeevan Publishing House, Ahmedabad, 1945.

Mary R. Beard, *Women as Force in History*, (1946), Macmillan & Co., New York.

Moravia, A., *Conjugal Love*, Seeker & Warburg, London, 1956.

Mitter. Dwark Nath, *The Position of Women in Hindu Law*, The University of Calcutta, 1913.

Margaret Sanger, *The Pivot of Civilization*; Brentano's Publishers, New York, 1922.

Mary Van Kleeck, *Women in Industry*, Encyclopaedia of Social Sciences.

Otto Rothfeld, *Women of India* (1928), B. B. Taraporewala & Co., Bombay, 1928.

Padmini, Sengupta, *Women Workers of India*, Asia Publishing House, Bombay, 1960.

Prabhu, Pandarinath, *Hindu Social Organisation*, Popular Book Depot, Bombay, 1954.

Paul H. Landis, *Your Marriage and Family Living*, McGraw Hill Book Company, New York, 1946.

Rabindranath Tagore, *Personality*, *(Chapter on Woman)*, Macmillan & Co., Ltd., London, 1917.

Rajagopal, T. S., *Indian Women in the New Age*, Jaya Stores, Mysore City, 1936.

Radha Kamal Mukherjee, *The Horizon of Marriage*, Asia Publishing House, Bombay, 1957.

Report of the Committee Appointed by the Government of His Highness the Maharaja of Mysore; *Women's Right Under The Hindu Law.*

Regulation X of 1923; *Regulation to amend the Hindu Law as to the Rights of Women and in certain other respects.* (Received the assent of the Maharaja on the 27th day of June 1933).

Schmiedeler, *Marriage and the Family*, McGrew Hill Book Co., New York (1946).

Shakuntala Rao Shastri, *Women in Vedic Age*, Bharatiya Vidya Bhavan.

Swami Dayananda Saraswati, *The Light of Truth*, (1939), English Translation of the book, "Satyarthaprakash" by Gangaprasad Upadhyaya.

Sharma, N. A., *Women and Society*, Padmaja Publications, Baroda, 1947.

Stone, H. M. and Stone, A., *A Marriage Manual*, Victor Gollancz Ltd., London, 1952.

Simon S. Patten, *Women in Modern World*, The Annals of the American Academy of Political and Social Science, 1929.

Thomas, P., *Women and Marriage in India*, George Allen & Unwin, Ltd., London, 1939.

Thomas, P., *Hindu Women Through The Ages*; Asia Publishing House, London, 1964.

Wieth Knudsen, *Feminism : A Social Study of the Woman, Quest from Ancient Times to the Present Day*, Constable & Co., London, 1928.

Wolfe, W. B., *A Women's Best Years*, Garden City Publishing & Co., New York, 1946.

# ಕನ್ನಡ ಅಧ್ಯಯನ ಸಂಸ್ಥೆಯ ಪ್ರಕಟಣೆಗಳು

## ಪಠ್ಯಪುಸ್ತಕಮಾಲೆಯ ಕೆಲವು ಪ್ರಕಟಣೆಗಳು

೧. ಕನ್ನಡ ಲಿಪಿಯ ಉಗಮ ಮತ್ತು ವಿಕಾಸ—ಡಾ. ಎ. ವಿ. ನರಸಿಂಹಮೂರ್ತಿ
೨. ಭಾರತೀಯ ಸಂಸ್ಕೃತಿ ಪರಂಪರೆ—ಹುಮಾಯೂನ್ ಕಬೀರ್
೩. ಹೊರೆಸನ ಸಾಹಿತ್ಯ ವಿಮರ್ಶೆ—ಎನ್. ಬಾಲಸುಬ್ರಮಣ್ಯ
೪. ಕರ್ಣಾಟಕದ ಅರಣ್ಯ ವೃಕ್ಷಗಳು—ಎಸ್. ಎನ್. ರಾಮಸ್ವಾಮಿ
೫. ಭಾರತೀಯ ಸಾಮಾಜಿಕ ಸಂಸ್ಥೆಗಳು—ಎಮ್. ನಂಜಮ್ಮಣ್ಣಿ
೬. ಮಾನವನ ಉಗಮ—ಎಲ್. ಸಿದ್ದವೀರೇಗೌಡ
೭. ಪ್ರಾಕೃತಿಕ ಭೂಗೋಳ—(ಸಂ) ಜಾರ್ಜ್‌ಕುರಿಯನ್; ಬಿ. ಎಸ್. ಪರಾಖ್
೮. ವರ್ಧಾ ಯೋಜನೆ—ಡಾ. ಕೆ. ಎಲ್. ಶ್ರೀಮಾಲಿ
೯. ಹಣದ ಸ್ಥೂಲ ವಿವರಣೆ—ಜಿ. ಕ್ರೌಥರ್
೧೦. ಲೆಕ್ಕಾಚಾರ ಶಾಸ್ತ್ರ—ಸಿ. ಎಮ್. ಮುನಿರಾಮಪ್ಪ
೧೧. ಜೋಡಿ ದಾಖಲೆ ಪದ್ಧತಿ ಲೆಕ್ಕಬರಹ—ಡಿ. ಎನ್. ಶ್ರೀನಿವಾಸಮೂರ್ತಿ
೧೨. ಮನೋವಿಶ್ಲೇಷಣೆ ನಡೆದು ಬಂದ ದಾರಿ—ಫ್ರೀಮನ್ ಸ್ಮಾಲ್
೧೩. ಬೀಜರೇಖಾಗಣಿತ—ಸಿ. ಎನ್. ಶ್ರೀನಿವಾಸೈಯಂಗಾರ್
೧೪. ಆರ್ಥಿಕ ಚಿಂತನೆಯ ಬೆಳವಣಿಗೆ—ಬಿ. ಎಂ. ಕುಮಾರಸ್ವಾಮಿ
೧೫. ಸಾಮಾಜಿಕ ಒಪ್ಪಂದ—ಜೆ. ಜೆ. ರೂಸೋ
೧೬. ಆಧುನಿಕ ಭಾರತ—ಬಿ. ಮುದ್ದಾಚಾರಿ
೧೭. ಹಿಂದೂ ಜೀವನ ದರ್ಶನ—ಎಸ್. ರಾಧಾಕೃಷ್ಣನ್
೧೮. ಧರ್ಮ ಮತ್ತು ಸಮಾಜ—ಎಸ್. ರಾಧಾಕೃಷ್ಣನ್
೧೯. ಭಾರತೀಯ ದರ್ಶನ—ಬಲದೇವ ಉಪಾಧ್ಯಾಯ
೨೦. ಇಂಡಿಯಾ ದೇಶದ ಸಾರ್ವಜನಿಕ ಆಯವ್ಯಯ—ಆರ್. ಎನ್. ಭಾರ್ಗವ
೨೧. ಪಂಪ-ನನ್ನಯ—ಒಂದು ಸಮೀಕ್ಷೆ—ಕೆ. ವೆಂಕಟರಾಮಪ್ಪ
೨೨. ಭೌತ ರಸಾಯನ ಶಾಸ್ತ್ರ—ಎ. ಜೆ. ಮೀ.
೨೩. ಸಾಮಾಜಿಕ ಮಾನವ ಶಾಸ್ತ್ರ—ಎಮ್. ನಂಜಮ್ಮಣ್ಣಿ
೨೪. ಕರ್ಣಾಟಕದ ಸೇವುಣರ ಇತಿಹಾಸ—ಡಾ. ಎ. ವಿ. ನರಸಿಂಹಮೂರ್ತಿ
೨೫. ಅನುವಂಶೀಯ ವಾಹಕಗಳು—ಡಾ. ಎಚ್. ಬಿ. ದೇವರಾಜ ಸರ್ಕಾರ್
೨೬. ಸಾಂಸ್ಕೃತಿಕ ಬೃಹದ್ಭಾರತ—ಡಾ. ಎ. ವಿ. ನರಸಿಂಹಮೂರ್ತಿ
೨೭. ಗ್ರೇಟ್ ಬ್ರಿಟನ್ನಿನ ಆರ್ಥಿಕ ಬೆಳವಣಿಗೆ—ಸಿ. ಕೆ. ರೇಣುಕಾರ್ಯ
೨೮. ಶಬ್ದಶಾಸ್ತ್ರ—ಬಿ. ಎಸ್. ಮಯೂರ
೨೯. ಆರ್ಥಿಕ ಆವರ್ತಗಳು—ಎ. ಪಿ. ಶ್ರೀನಿವಾಸಮೂರ್ತಿ
೩೦. ಸಮಾಜ ಶಾಸ್ತ್ರ (ಭಾಗ ೧)—ಡಾ. ಎಚ್. ಎಮ್. ಸದಾಶಿವಯ್ಯ
೩೧. ಹಣ-ಒಂದು ವಿಶ್ಲೇಷಣೆ—ಬಿ. ಎಸ್. ಸಿದ್ದೇಗೌಡ.
೩೨. ರಂಗ ನಾಟಕಶಾಸ್ತ್ರ—ಆದ್ಯ ರಂಗಾಚಾರ್ಯ